ಪ್ರಕೃತ ಗ್ರಂಥವನ್ನು ಮೂರುಭಾಗವಾಗಿ ಮಾಡಬೇಕೆಂದು ನಿಶ್ಚಯಿಸಿ, ಈಗ ಈ ಪ್ರಥಮಭಾಗವು ಮುದ್ರಿಸಲ್ಪಟ್ಟಿರುವುದು. ಉಳಿದ ಎರಡು ಭಾಗಗಳೂ ಇಷ್ಟರಲ್ಲಿಯೇ ಮುದ್ರಿಸಲ್ಪಡುವುವು.

ಇದರಲ್ಲಿರುವ ವಿಷಯಗಳು ಕೇವಲ ವಿದ್ಯಾರ್ಥಿಗಳಿಗೆ ಮಾತ್ರವೇ ಆವಶ್ಯಕವೆಂದು ತಿಳಿಯಬಾರದು ; ಬಾಲಕರ ತಾಯಿತಂದೆಗಳಿಗೂ ಉಪಾಧ್ಯಾಯರಿಗೂ ಆವಶ್ಯಕಗಳಾದ ಎಷ್ಟೋ ವಿಷಯಗಳು, ಇದರಲ್ಲಿ ಅಡಕವಾಗಿರುವುವು. ಈ ಗ್ರಂಥದ ಪಠನದಿಂದ ನಮ್ಮ ಬಾಲಕರಿಗೆ ಸ್ವಲ್ಪಮಟ್ಟಿಗಾದರೂ ಪ್ರಯೋಜನವುಂಟಾದರೆ, ಆಗ ಇದನ್ನು ರಚಿಸುವುದಕ್ಕಾಗಿ ಪಟ್ಟ ಶ್ರಮವು ಸಫಲವಾದಂತೆ ಭಾವಿಸಲ್ಪಡುವುದು.

[illegible]ರಲ್ಲಿ ಯಾವುದಾದರೊಂದು [illegible] [illegible] ಸೃಷ್ಟವಾಗಿರುವ ಚರಾಚರಾತ್ಮಕವಾದ ಈ ಪ್ರಪಂಚದಲ್ಲಿ, ಮನುಷ್ಯನಿಗಿಂತ ದೊಡ್ಡ ಪದಾರ್ಥವು ಯಾವುದೂ ಇಲ್ಲ ; ಇವನಲ್ಲಿರುವ ಬುದ್ಧಿಗಿಂತ ದೊಡ್ಡ ಪದಾರ್ಥವು ಯಾವುದೂ ಇಲ್ಲವೇ ಇಲ್ಲ. ಬುದ್ಧಿಯು ಆದ್ಯಂತರಹಿತವಾದುದರಿಂದ, ಇದು ದೇವರ ಅಂಶವೆಂದು ಭಾವಿಸಲ್ಪಡುವುದು. ಇದು ಈ ಪಾರ್ಥಿವಶರೀರದಲ್ಲಿ ಜನ್ಮಿಸಿದ್ದಾಗ್ಯೂ, ಇದರ ಜತೆಯಲ್ಲಿಯೇ ನಾಶ ಹೊಂದತಕ್ಕದಲ್ಲವೆಂಬುದಾಗಿಯೂ, ಇದಕ್ಕೆ ಇನ್ನೂ ಶ್ಲಾಘ್ಯವಾದ ಅವಸ್ಥೆಯಿರುವುದೆಂಬುದಾಗಿಯೂ ಕೆಲವರು ಹೇಳುವರು. ಅದೃಷ್ಟವಾದ ವಿಷಯದ ವಿಚಾರ ಹಾಗಿರಲಿ ; ದೃಷ್ಟವಿಷಯಗಳನ್ನು ಪರ್ಯಾಲೋಚಿಸೋಣ. ಬುದ್ಧಿಶಕ್ತಿಯು, ಮನುಷ್ಯನ ಜತೆಯಲ್ಲಿ ಹುಟ್ಟಿ, ಅವನು ಬೆಳೆದ ಹಾಗೆಲ್ಲ ತಾನೂ ಬೆಳೆಯುತ್ತದೆ. ಇದರ ವ್ಯಾಪಾರವು, ದಿನೇದಿನೇ ಬೆಳೆದು, ಜಿತೇಂದ್ರಿಯರಾದ

ವರಲ್ಲಿ ಅದ್ಭುತವಾದ ಶಕ್ತಿಯನ್ನು ತೋರಿಸುತ್ತದೆ. ಈ ಬುದ್ಧಿಯು ತನ್ನ ಕರ್ತವ್ಯಗಳನ್ನು ಸಮಗ್ರವಾಗಿ ಮಾಡಬೇಕಾದರೆ, ಯಾವವಿಧ ವಾದ ಶಿಕ್ಷೆಯನ್ನು ಹೊಂದಬೇಕು? ಎಂತಹ ಶಿಕ್ಷೆಯು ಬುದ್ಧಿಗೆ ಉಂಟಾದರೆ, ಅದನ್ನು ಹೊಂದಿರತಕ್ಕವನು ಲೋಕೈಕವೀರನಾಗಿಯೂ ಅವತಾರಪುರುಷನಾಗಿಯೂ ಪರಿಣಮಿಸುವನು? ಎಂತಹ ಶಿಕ್ಷೆಯನ್ನು ಹೊಂದುವುದರಿಂದ, ಮನುಷ್ಯನು ದಿಗಂತವಿಶ್ರಾಂತವಾದ ಕೀರ್ತಿಯನ್ನು ಹೊಂದುವನು?—ಇವುಗಳು ಅನೇಕ ವಿದ್ವಾಂಸರ ಪರ್ಯಾಲೋಚನೆಗೆ ವಿಷಯವಾಗಿರುವುವು. ದೇಹವನ್ನು ಬಿಟ್ಟ ಮೇಲೂ ಕೂಡ ಯಶಃಕಾಯ ದಿಂದ ಬದುಕಬೇಕೆಂಬ ಅಭಿಲಾಷೆಯು ಅನೇಕರಿಗಿರುವುದು. ಈ ಆಶೆಯು ಎಲ್ಲರಿಗೂ ಇರಬೇಕಾದುದೇ ಸರಿ. ಬುದ್ಧಿಶಾಲಿಗಳಾದ ಅನೇಕರು, ತಮ್ಮ ಬುದ್ಧಿಬಲದಿಂದ ಸಕಲಶಾಸ್ತ್ರವಿಶಾರದರಾಗಿ, ಸರ್ವತೋಮುಖವಾದ ಪ್ರಜ್ಞೆಯನ್ನು ಪಡೆದು, ಆ ಪ್ರಜ್ಞೆಯ ಬಲದಿಂದ ಅದ್ಭುತವಾದ ಕಾರ್ಯಗಳನ್ನು ಮಾಡಿರುವರು. ಪುರಾಣಪುರುಷರ ಚರಿತ್ರೆಗಳೇ ಇದಕ್ಕೆ ದೃಷ್ಟಾಂತಗಳು. ಅವರಂತೆ ಅದ್ಭುತವಾದ ಶಕ್ತಿಯನ್ನು ಸಂಪಾದಿಸಿ ಅಸಾಧಾರಣವಾದ ಕೀರ್ತಿಯನ್ನು ಪಡೆಯುವುದು ಕಷ್ಟವಲ್ಲ. ಕೀರ್ತಿ ವಂತರಾದವರು ಆ ಕೀರ್ತಿಯನ್ನು ಪಡೆಯುವುದಕ್ಕೆ ಎಷ್ಟು ವ್ಯವಸಾಯ ಮಾಡಿರುವರೋ, ಅಷ್ಟು ವ್ಯವಸಾಯವನ್ನು ನಾವೂ ಮಾಡಿದರೆ, ಅವರಂತೆ ನಾವೂ ಒಳ್ಳೆಯ ಪದವಿಗೆ ಬರಬಹುದು. ಹಾಗೆ ಬರಬೇಕಾದರೆ, ಅವರು ತಮ್ಮ ಇಷ್ಟಾರ್ಥಸಿದ್ಧಿಗೋಸ್ಕರ ಹೇಗೆ ಕೃಷಿಮಾಡಿದರೋ—ಅದನ್ನು ನಾವು ತಿಳಿದುಕೊಂಡು ಅದೇರೀತಿಯಲ್ಲಿ ಮಾಡಬೇಕು. ನಮ್ಮ ವ್ಯಾಪಾರಗಳನ್ನು

ನಾವೇ ಪರಿಶೀಲಿಸಿಕೊಂಡರೆ, ನಾವು ಮಾಡಿದ ತಪ್ಪುಗಳು ನಮಗೆ ಗೊತ್ತಾಗದಿರುವುದಿಲ್ಲ. "ಇಂತಹ ಸಂದರ್ಭದಲ್ಲಿ ನಾವು ತಪ್ಪುಮಾಡಿದೆವು; ಇಂತಹ ಸಮಯುವನ್ನು ವ್ಯರ್ಥವಾಗಿ ಕಳೆದುಕೊಂಡೆವು; ಇಲ್ಲಿ ಅಪಾರ್ಥಗಳನ್ನು ಮಾಡಿಕೊಂಡೆವು; ಇಂತಹ ಕಡೆಯಲ್ಲಿ ದುರಭಿಮಾನದಿಂದ ಅನ್ಯಾಯುವನ್ನು ಮಾಡಿದೆವು." ಎಂಬುದು, ನಮಗೇ ಗೊತ್ತಾಗುವುದು. ಹಿಂದೆ ಕಳೆದುಹೋದ ಕಾಲವು ಪುನಃ ಬರುವುದಿಲ್ಲ. ಮುಂದಣ ಕಾಲವು ಇನ್ನೂ ಬಂದಿರುವುದಿಲ್ಲ. ವರ್ತಮಾನಕಾಲಕ್ಕೆ ಮಾತ್ರ ನಾವು ಅಧಿಕಾರಿಗಳಾಗಿರುತ್ತೇವೆ. ಈ ಕಾಲದಲ್ಲಿ ನಾವು ಯಾವ ರೀತಿಯಲ್ಲಿ ನಡೆದರೆ ಇಷ್ಟಾರ್ಥಪ್ರಾಪ್ತಿಗೆ ಅವಕಾಶವಾಗುವುದೋ, ಅದನ್ನು ಉಪದೇಶ ಮಾಡತಕ್ಕ ಗುರುಗಳೇ ಆಗಲಿ–ಅಥವಾ ಪುಸ್ತಕಗಳೇ ಆಗಲಿ–ದೊರೆತರೆ, ಅವುಗಳ ಸಹಾಯುದಿಂದ ನಿರ್ವಿಘ್ನವಾಗಿ ನಾವು ಇಷ್ಟಾರ್ಥಸಿದ್ಧಿಯನ್ನು ಹೊಂದಬಹುದು. ಇಷ್ಟಾರ್ಥಪ್ರಾಪ್ತಿಗೆ ಸಾಧಕವಾದ ಹಿತೋಪದೇಶಗರ್ಭಿತಗಳಾದ ಪುಸ್ತಕಗಳೂ ಇವುಗಳನ್ನು ತೋರಿಸುವ ಗುರುಗಳೂ ದೊರೆಯುವುದು, ಬಹಳ ಕಷ್ಟ. ಪುಣ್ಯವಂತರಿಗೆ ಮಾತ್ರವೇ ಈ ಲಾಭವುಂಟಾಗುವುದು. ಆದುಕಾರಣ, ಸರ್ವರಿಗೂ ಅವರವರ ಇಷ್ಟಾರ್ಥಪ್ರಾಪ್ತಿಗೆ ಸಾಧಕವಾಗುವಂತೆ ಮಾರ್ಗದರ್ಶನವನ್ನು ಮಾಡುವ ಹಿತೋಕ್ತಿಗಳುಳ್ಳ ಒಂದು ಗ್ರಂಥವನ್ನು ರಚಿಸುವುದು ಅತ್ಯಂತ ಆವಶ್ಯಕವಾಗಿರುವುದು. ಈ ವುದ್ದೇಶದಿಂದಲೇ ಈ ಗ್ರಂಥವು ರಚಿಸಲ್ಪಟ್ಟಿರುವುದು.

ಲೋಕದಲ್ಲಿ ಸಕಲರೂ, ತಾವು ವಿದ್ಯಾವಂತರಾಗಿಯೂ ಆಯುರಾರೋಗ್ಯೈಶ್ವರ್ಯಗಳುಳ್ಳವರಾಗಿಯೂ ಆಗಬೇಕೆಂದು ಅಪೇಕ್ಷಿಸುವರು.

ಚತುರ್ವಿಧ ಪುರುಷಾರ್ಥಗಳನ್ನೂ ಹೊಂದಿ ಇಹಪರಸಾಧನೆಗಳನ್ನು ಮಾಡಿ ಕೊಳ್ಳಬೇಕೆಂಬ ಉದ್ದೇಶವೂ ಕೂಡ ಸರ್ವರಿಗೂ ಇರುವುದು. ಆದರೆ, ಈ ಯಿಷ್ಟಾರ್ಥಗಳನ್ನು ಹೊಂದುವುದಕ್ಕೆ ಯಾವ ರೀತಿಯಲ್ಲಿ ಕೃಷಿಯನ್ನು ಮಾಡಬೇಕೋ-ಅದನ್ನು ಸಮಗ್ರವಾಗಿ ತಿಳಿದವರು ಅಪೂರ್ವ. ಇಷ್ಟಾರ್ಥ ಸಿದ್ಧಿಗೆ ಸಾಧಕವಾದ ವಿಧಾನಗಳನ್ನು ಸಮಗ್ರವಾಗಿ ತಿಳಿದುಕೊಂಡು ಆ ರೀತಿಯಲ್ಲಿ ನಡೆಯತಕ್ಕವರು, ತಮ್ಮ ಇಷ್ಟಸಿದ್ಧಿಯನ್ನು ಹೊಂದು ತ್ತಲೇ ಇರುವರು. ಚೆನ್ನಾಗಿ ತಿಳಿದುಕೊಳ್ಳದಿರತಕ್ಕವರು, ಇಷ್ಟಾರ್ಥ ಸಿದ್ಧಿಗೆ ಯಾವ ರೀತಿಯಲ್ಲಿ ನಡೆಯಬೇಕೋ-ಅದು ತಿಳಿಯದೆ, ತಪ್ಪು ದಾರಿಯಲ್ಲಿ ಹೋಗುತ, ಭಗ್ನಮನೋರಥರಾಗುತಿರುವರು. ಅಂಥವರ ಪ್ರಯೋಜನಾರ್ಥವಾಗಿ, ಮಾರ್ಗದರ್ಶನವನ್ನು ಮಾಡುವುದಾವಶ್ಯಕವು.

ಬಾಲ್ಯದಲ್ಲಿ ಅಭ್ಯಸಿಸಲ್ಪಟ್ಟ ನಡೆನುಡಿಗಳು ಯಾವಜ್ಜೀವವೂ ನಮ್ಮನ್ನು ಬಿಡುವುದಿಲ್ಲ. ಚಿಕ್ಕಂದಿನಲ್ಲಿ ದೃಷ್ಟಿಪಥಕ್ಕೆ ಬಿದ್ದ ವಿಷಯ ಗಳನ್ನು ಮರೆಯುವುದೂ, ಆಗ ಅಭ್ಯಸ್ತವಾದ ಚೇಷ್ಟೆಗಳನ್ನು ಬಿಡುವುದೂ ಕೂಡ ಶ್ರಮಸಾಧ್ಯವು. ಬಾಲ್ಯದಲ್ಲಿ ಪ್ರತಿಯೊಬ್ಬರ ಮನಸ್ಸೂ ಜೇನು ಮೇಣದಂತಿರುವುದು. ಅದರಲ್ಲಿ ನಾವು ಯಾವವಿಧವಾದ ಅಚ್ಚನ್ನು ಹೊಡೆಯುವೆವೋ, ಅದು ಅದರ ಆಕಾರವನ್ನು ತೆಗೆದುಕೊಳ್ಳುವುದು. ಮಕ್ಕಳ ತಾಯಿತಂದೆಗಳೂ, ಸಹೋದರ ಸಹೋದರಿಯರೂ, ಜತೆಗಾರರೂ, ಭೃತ್ಯರೇ ಮೊದಲಾದ ಜನಗಳೂ ಕೂಡ, ಯಾವ ಮಾತುಗಳನ್ನು ಆಡು ವರೋ, ಯಾವ ಕೆಲಸಗಳನ್ನು ಮಾಡುವರೋ, ಅವುಗಳೇ ಮಕ್ಕಳಿಗೆ ಮೇಲುಪಂಕ್ತಿಗಳಾಗಿ ಪರಿಣಮಿಸುತ್ತವೆ; ಅವುಗಳೇ ಮಕ್ಕಳ ಆಚರಣೆ

ಯಲ್ಲೂ ಬರುತ್ತವೆ. ಆದುದರಿಂದ, ಚಿಕ್ಕ ವಯಸ್ಸಿನಲ್ಲಿ, ಸುತ್ತುಮುತ್ತಲೂ ಇರತಕ್ಕವರು, ಒಳ್ಳೆಯ ಮೇಲುಪಂಕ್ತಿಯನ್ನು ಹಾಕತಕ್ಕವರಾಗಿರಬೇಕು. ಹಾಗಿಲ್ಲದಿದ್ದರೆ, ಯಾವ ಮೇಲುಪಂಕ್ತಿಯು ಹಾಕಲ್ಪಡುವುದೋ, ಅದಕ್ಕನುಸಾರವಾದ ನಡೆನುಡಿಗಳು ಮಕ್ಕಳಿಗೆ ಬರುತ್ತವೆ.

ವೃದ್ಧರಾದವರು, ತಮ್ಮ ಕೆಲಸ ಮುಗಿಯಿತೆಂಬುದಾಗಿಯೂ, ತಾವು ಪ್ರಪಂಚದ ವ್ಯಾಪಾರಗಳಲ್ಲಿ ಪರಾಙ್ಮುಖರೆಂಬುದಾಗಿಯೂ, ತಮ್ಮ ನಡೆನುಡಿಗಳ ವಿಷಯದಲ್ಲಿ ತಾವು ಉದಾಸೀನರಾಗಿರಬಹುದೆಂಬುದಾಗಿಯೂ, ತಮಗೆ ಯಾವ ಹೊಣೆ(ಜವಾಬುದಾರಿ)ಯೂ ಇರುವುದಿಲ್ಲವೆಂಬುದಾಗಿಯೂ ಭಾವಿಸುವುದುಂಟು. ಇದು ಸುತರಾಂ ಯುಕ್ತವಲ್ಲ. ಹಿರಿಯರ ನಡೆನುಡಿಗಳಿಗನುಸಾರವಾಗಿ ಕಿರಿಯರು ನಡೆಯುವರು. ಮಕ್ಕಳು ಸರ್ವಗುಣಸಂಪನ್ನರಾಗಬೇಕಾದರೆ, ಆ ವಿಷಯದಲ್ಲಿ ಮೇಲುಪಂಕ್ತಿಯನ್ನು ಹಾಕುವುದು ಹಿರಿಯರಿಗೆ ಮುಖ್ಯಕೆಲಸವಲ್ಲವೆ! ಅವರ ಹೊಣೆಗಾರಿಕೆಯು (ಜವಾಬುದಾರಿ) ಅತ್ಯಂತ ದೊಡ್ಡದಲ್ಲವೆ! ಈ ಹೊಣೆಗಾರಿಕೆಯು ಸರಿಯಾಗಿ ನಡೆಯಿಸಲ್ಪಟ್ಟರೇ, ಅವರು ಕೃತಕೃತ್ಯರಾಗುವರು. ಇಲ್ಲವಾದರೋ, ಅವರು ನಿಂದೆಗೆ ಗುರಿಯಾಗಬೇಕಾಗುವುದು. ಈಗ ವಿದ್ಯಾರ್ಥಿಗಳಾಗಿರತಕ್ಕವರೇ, ಮುಂದೆ ಸಂಸಾರಿಗಳಾಗುವರು. ಅವರೆಲ್ಲರೂ ಸನ್ಮಾರ್ಗಪ್ರವೃತ್ತರಾಗಿಯೂ, ದುರ್ಮಾರ್ಗಪರಾಙ್ಮುಖರಾಗಿಯೂ ಆದರೆ, ಪ್ರಪಂಚವೇ ಧರ್ಮಪ್ರವರ್ತನಕ್ಕೆ ಜನ್ಮಭೂಮಿಯಾಗುವುದು. ಈ ಕಾರಣದಿಂದ, ಗುರುಹಿರಿಯರಾದವರು, ತಮ್ಮ ನಡೆನುಡಿಗಳು ಮಕ್ಕಳಿಗೆ ಮೇಲುಪಂಕ್ತಿಯಾಗಿರುವುವೆಂದು ತಿಳಿದುಕೊಂಡು, ತಮ್ಮ

ಮನಸ್ಸಾಕ್ಷಿಗೆ ಅನುಸಾರವಾಗಿಯೂ, ಧರ್ಮಕ್ಕನುಸಾರವಾಗಿಯೂ ನಡೆದುಕೊಳ್ಳುತ ಬರುವುದಲ್ಲದೆ, ಹಾಗೆ ನಡೆಯುವುದರಿಂದ ಉಂಟಾಗ ತಕ್ಕ ಪ್ರಯೋಜನಗಳನ್ನು ಕೂಡ ಮಕ್ಕಳಿಗೆ ತಿಳಿಯಿಸುತ್ತಬರಬೇಕು.

ಪ್ರತಿಯೊಬ್ಬರಿಗೂ, ಜನ್ಮವನ್ನೆತ್ತಿದ ಉತ್ತರಕ್ಷಣದಲ್ಲಿಯೇ ವಿದ್ಯಾಭ್ಯಾಸಕ್ಕೆ ಉಪಕ್ರಮವಾಗುವುದು ಹೀಗೆ ಜನ್ಮವೆತ್ತಿದವರಲ್ಲಿ, ಸಾವಿರಕ್ಕೊಬ್ಬರು ಮನೋವಾಕ್ಕರ್ಮಗಳಲ್ಲಿ ಧರ್ಮದಿಂದ ನಡೆಯುವುದೂ ಅಪೂರ್ವವಾಗಿರುವುದು. ಹಾಗೆ ನಡೆಯುವುದು ಕಷ್ಟವಲ್ಲ; ಆದಾಗ್ಯೂ, ಬಹುಜನಗಳು ಹಾಗೆ ನಡೆಯುವುದಿಲ್ಲ. ಶ್ರೇಯಸ್ಸಿಗೆ ಅನೇಕ ವಿಘ್ನಗಳು ಬರುವುದುಂಟು. ಆ ವಿಘ್ನಗಳನ್ನು ಜಯಿಸುವ ಶಕ್ತಿಯುಳ್ಳವರು, ಬಹಳ ವಿರಳರಾಗಿರುತ್ತಾರೆ. ಅನೇಕರಿಗೆ, ಇಷ್ಟಾರ್ಥಪ್ರಾಪ್ತಿಗುಂಟಾಗತಕ್ಕ ವಿಘ್ನಗಳನ್ನು ಯಾವ ರೀತಿಯಲ್ಲಿ ನಿವಾರಣೆಮಾಡಿಕೊಳ್ಳಬೇಕೋ ಅದು ಕೂಡ ತಿಳಿಯದು. ನಮ್ಮ ಕ್ಷೇಮಾರ್ಥವಾಗಿ ಜಗದೀಶ್ವರನು ನಮಗೆ ಪಂಚೇಂದ್ರಿಯಗಳನ್ನು ಕೊಟ್ಟಿರುವನು. ಅವುಗಳನ್ನು ನಮ್ಮ ಕ್ಷೇಮಾರ್ಥವಾಗಿ ವಿನಿಯೋಗಿಸಿಕೊಳ್ಳುವುದಕ್ಕೆ ಸಾಧಕವಾದ ಬುದ್ಧಿಯನ್ನೂ ಕೊಟ್ಟಿರುವನು. ಈ ಬುದ್ಧಿಯೇ ಸಾರಥಿಯು; ಇಂದ್ರಿಯಗಳೇ ಅಶ್ವಗಳು. ಪ್ರತಿಯೊಬ್ಬ ಮನುಷ್ಯನೂ ಬುದ್ಧಿಯನ್ನು ಸುಶಿಕ್ಷಿತವಾಗಿಯೂ ಧರ್ಮನಿರತವಾಗಿಯೂ ಇರುವಂತೆ ಮಾಡಿಕೊಂಡಿದ್ದರೆ, ಆ ಬುದ್ಧಿಯು ಇಂದ್ರಿಯಗಳೆಂಬ ಅಶ್ವಗಳಿಗೆ ಕಡಿವಾಣವನ್ನು (ಲಗಾಮನ್ನು) ಹಾಕಿ ತನ್ನ ವಶದಲ್ಲಿಟ್ಟುಕೊಳ್ಳುವುದು. ಸುಶಿಕ್ಷಿತವಾದ ಬುದ್ಧಿಯಿಲ್ಲದವರು, ಇಂದ್ರಿಯಪರವಶರಾಗುವರು. ಇಂದ್ರಿಯಗಳಿಗೆಲ್ಲ, ಒಳ್ಳೆಯ ವ್ಯಾಪಾರವು ಹೇಗಿರು

ವುದೋ-ಹಾಗೆಯೇ ಕೆಟ್ಟ ವ್ಯಾಪಾರವೂ ಇರುವುದು. ಇಂದ್ರಿಯಗಳು ನಮ್ಮನ್ನು ಕೆಟ್ಟ ವ್ಯಾಪಾರಕ್ಕೆ ಎಳೆಯದಂತೆ ಮಾಡುವ ಶಕ್ತಿ ಬುದ್ಧಿಗೆ ಬರುವಹಾಗೆ ನಾವು ಮಾಡಿಕೊಳ್ಳಬೇಕು. ಹಾಗೆ ಮಾಡಿಕೊಳ್ಳುವ ಶಕ್ತಿಯು ಬುದ್ಧಿಗೆ ಬಾರದಿದ್ದರೆ, ಈ ಯಿಂದ್ರಿಯಗಳು ಮನುಷ್ಯನನ್ನು ದುರ್ವ್ಯಾಪಾರಗಳಿಗೆ ಎಳೆಯುವುವು. ಹಾಗೆ ಎಳೆಯಲ್ಪಟ್ಟು ಇಂದ್ರಿಯ ಪರವಶರಾದವರು, ತಮ್ಮ ಅಧೀನದಲ್ಲಿರತಕ್ಕವರಿಗೆ ಸಮೀಚೀನವಾದ ಮೇಲುಪಂಕ್ತಿಯನ್ನು ಹಾಕಲು ಎಂದಿಗೂ ಅರ್ಹರಾಗುವುದಿಲ್ಲ. ಜಿತೇಂದ್ರಿಯರಾದವರು ಮನುಷ್ಯರೆನ್ನಿಸಿಕೊಳ್ಳುವುದಕ್ಕೆ ಅರ್ಹರೇ ಹೊರತು, ಅಜಿತೇಂದ್ರಿಯರು ಎಂದಿಗೂ ಪುರುಷರೆನ್ನಿಸಿಕೊಳ್ಳಲಾರರು. ಇಂದ್ರಿಯ ಪರವಶರಾದವರಿಗೂ ಪಶುಗಳಿಗೂ ವಿಶೇಷ ತಾರತಮ್ಯವಿರುವುದಿಲ್ಲ.

ಮನುಷ್ಯನು, ಜನ್ಮವನ್ನೆತ್ತಿದುದು ಮೊದಲುಗೊಂಡು ಕಳೇಬರವನ್ನು ಬಿಡುವವರೆಗೂ, ಯಾವುದಾದರೊಂದು ಉದ್ಯೋಗವನ್ನು ಮಾಡುತಲೇ ಇರಬೇಕು; ಹಾಗೆ ಮಾಡದೆ ಇರುವುದಕ್ಕಾಗುವುದೂ ಇಲ್ಲ. ಕೈಕಾಲುಗಳಿಗೆ ಕೆಲಸವನ್ನು ಕೊಡದಿದ್ದರೆ, ಅವುಗಳು ಸ್ವಲ್ಪಮಟ್ಟಿಗೆ ಚೇಷ್ಟೆಯಿಲ್ಲದೆ ಇರಬಹುದು; ಬುದ್ಧಿಗೆ ಕೆಲಸವನ್ನು ಕೊಡದಿದ್ದರೋ, ಅದು ತಾನಾಗಿಯೇ ಕೆಲಸವನ್ನು ಸಂಪಾದಿಸಿಕೊಳ್ಳುವುದು. ಬುದ್ಧಿಗೂ ಕೈಕಾಲುಗಳಿಗೂ ಒಳ್ಳೆಯ ಕೆಲಸಗಳಲ್ಲಿ ಪ್ರವೇಶವನ್ನುಂಟುಮಾಡುವುದು, ಪ್ರಥಮತಃ ತಾಯಿತಂದೆಗಳ ಕೆಲಸ; ತರುವಾಯ ಸರಕಾರದವರ ಕೆಲಸ. ಇವರೆಲ್ಲರೂ ಉಪೇಕ್ಷೆ ಮಾಡಿದರೆ, ಲಕ್ಷಕ್ಕೊಬ್ಬ ವಿದ್ಯಾರ್ಥಿಯು, ತನ್ನ ಸಂಸ್ಕಾರ ಬಲದಿಂದ, ಸ್ವಶಕ್ತಿಯಿಂದಲೇ ತನ್ನ ಬುದ್ಧಿಗೂ ಕೈಕಾಲುಗಳಿಗೂ ಒಳ್ಳೆಯ

ಉದ್ಯೋಗವನ್ನು ಕೊಟ್ಟುಕೊಳ್ಳಬಹುದು. ಆದರೆ, ಲಕ್ಷದಲ್ಲಿ ಒಬ್ಬನೂ, ಆರೀತಿ ಆತ್ಮಾವಲಂಬಿಯಾಗಿರುವುದು ಅಪೂರ್ವವು ಪ್ರಾಯಕವಾಗಿ, ಇಂಥವರು ಅಶಿಕ್ಷಿತರಾಗಿ, ತಮ್ಮ ಬುದ್ಧಿಗೂ ಕೈಕಾಲುಗಳಿಗೂ ಕೆಟ್ಟ ಉದ್ಯೋಗಗಳನ್ನು ಕಲ್ಪಿಸಿಕೊಳ್ಳುವರು. ಇದರಿಂದಲೇ, ಬಹುಜನಗಳು ದುರ್ಮಾರ್ಗಪ್ರವೃತ್ತರಾಗಿ, ತಾವಿರತಕ್ಕ ಕಾಲವು ಕಲಿಗಾಲವೆನ್ನಿಸುವುದಕ್ಕೆ ಸಹಾಯಭೂತರಾಗುವರು. ರಾಜನೇ ಕಾಲಕ್ಕೆ ಕಾರಣವೆಂದು ನಮ್ಮ ಮಹರ್ಷಿಗಳು ಹೇಳಿರುವರು. ಇದಕ್ಕೆ ಅರ್ಥವೇನು ? ಮಾತಾಪಿತೃಗಳೂ ಬಂಧುಮಿತ್ರರೂ ಪೋಷಕರೂ ಇಲ್ಲದ ಮಕ್ಕಳನ್ನು, ಯಾವ ರಾಜನು ಪಿತೃನಿರ್ವಿಶೇಷವಾಗಿ ಪರಿಪಾಲಿಸಿ ಸುಶಿಕ್ಷಿತರನ್ನಾಗಿಯೂ ದೇಶಕ್ಕೆ ಅಲಂಕಾರಭೂತರನ್ನಾಗಿಯೂ ಮಾಡುವನೋ, ಅವನೇ ಧರ್ಮಪ್ರಧಾನವಾಗಿರುವ ರಾಜ್ಯನಿರ್ಮಾಣಕ್ಕೆ ಕಾರಣಭೂತನೆಂದು ತಿಳಿಯಬೇಕು. ಪ್ರಭುಗಳು ಪ್ರಯತ್ನಮಾಡಿದರೆ, ಈ ಭಾಗದಲ್ಲಿ ಸಹಾಯಮಾಡತಕ್ಕ ದೇಶಾಭಿಮಾನಿಗಳು ಬೇಕಾದಹಾಗೆ ಸಿಕ್ಕುತ್ತಾರೆ; ಇವರ ಸದಿಷ್ಟಾರ್ಥಗಳೆಲ್ಲವೂ ಪರಿಪೂರ್ಣವಾಗುತ್ತವೆ. ಆದುದರಿಂದಲೇ, ರಾಜನು ಕಾಲಕ್ಕೆ ಕಾರಣನೆಂದು ನಮ್ಮ ಹಿರಿಯರು ಹೇಳಿರುವರು.

ಬಾಲ್ಯವೇ ವಿದ್ಯಾಭ್ಯಾಸಕ್ಕೆ ಅನುಕೂಲವಾದ ಕಾಲವು. ಆಗ ಸ್ತ್ರೀ ಪುರುಷರಿಗೆ ಸಾಂಸಾರಿಕ ಕ್ಲೇಶಗಳಿರುವುದಿಲ್ಲ. ವಿದ್ಯಾಭ್ಯಾಸಮಾಡುವುದಕ್ಕೂ ವಿನಯಾದಿ ಸದ್ಗುಣಗಳನ್ನು ಆರ್ಜಿಸುವುದಕ್ಕೂ ಎಷ್ಟುಮಟ್ಟಿಗೆ ಏಕಾಗ್ರಚಿತ್ತವು ಬೇಕೋ– ಅಷ್ಟುಮಟ್ಟಿಗೆ ಐಕಾಗ್ರ್ಯವನ್ನು ಹೊಂದುವುದು, ಬಾಲ್ಯಾವಸ್ಥೆಯಲ್ಲಿ ಸಾಧ್ಯವೇ ಹೊರತು, ಇನ್ನಾವಾಗಲೂ ಸಾಧ್ಯ

ವಾಗುವುದಿಲ್ಲ. ಪೂರ್ವದಲ್ಲಿ, ವ್ಯಾಸಂಗವು ನಿರ್ವಿಘ್ನವಾಗಿ ನಡೆಯಲೆಂದು, ನಮ್ಮ ಹಿರಿಯರು ಗುರುಕುಲವಾಸದ ಏರ್ಪಾಡನ್ನು ಮಾಡಿದ್ದರು. ಈ ಯೇರ್ಪಾಡಿನ ಬಲದಿಂದ, ವಿದ್ಯಾರ್ಥಿಗಳಿಗೆ ಸುಶಿಕ್ಷಣಕ್ಕೆ ಅವಕಾಶವಾಗು ತ್ತಿದ್ದಿತು. ತಾಯಿತಂದೆಗಳ-ಬಂಧುಮಿತ್ರರ-ಉಪಚಾರ ಪ್ರೀತಿ ಮೊದಲಾ ದುವುಗಳಿಂದ ಉಂಟಾಗುವ ಅನರ್ಥಗಳಿಗೆ, ಆಗ ಅವಕಾಶವಾಗುತ್ತಿರಲಿಲ್ಲ. ದಾರಿದಪ್ಪಿ ನಡೆದರೆ, ಅದಕ್ಕೆ ಪ್ರತೀಕಾರದ ಏರ್ಪಾಡಿಗೂ ಅವಕಾಶ ವಿದ್ದಿತು. ಗುರುಗಳಾದವರು, ಬ್ರಹ್ಮಚರ್ಯರಕ್ಷಣೆಗೂ ವಿದ್ಯಾಭ್ಯಾಸಕ್ಕೂ ತಕ್ಕ ಏರ್ಪಾಡನ್ನು ಮಾಡುವುದಲ್ಲದೆ, ವಿದ್ಯಾರ್ಥಿಗಳು ಅಶಿಕ್ಷಿತರಾಗದಂ ತೆಯೂ ಅಜಿತೇಂದ್ರಿಯರಾಗದಂತೆಯೂ ಏರ್ಪಾಡುಮಾಡುತ್ತಿದ್ದರು. ಈ ಯೇರ್ಪಾಡಿನ ಬಲದಿಂದ, ಜನಕಾದಿಗಳಂತಹ ರಾಜರ್ಷಿಗಳೂ, ಸನಕಾದಿ ಗಳಂತಹ ದೇವರ್ಷಿಗಳೂ, ವಸಿಷ್ಠಾದಿಗಳಂತಹ ಬ್ರಹ್ಮರ್ಷಿಗಳೂ, ವಿದ್ಯಾ ವಿನಯಸಂಪನ್ನರಾಗಿ, ಧರ್ಮಸಂಸ್ಥಾಪನೆಯನ್ನು ಮಾಡುವುದಕ್ಕೆ ದಕ್ಷ ರಾಗುತ್ತಿದ್ದರು ಈಗಣ ವಿದ್ಯಾರ್ಥಿಗಳಿಗೆ, ಅಂತಹ ಗುರುಕುಲಗಳನ್ನು ಸಂಪಾದಿಸಿ ಕೊಡುವುದು ಅತ್ಯಂತಾವಶ್ಯಕವು. ಈಗಿನ ಹಾಸ್ಟಲುಗಳು (ಸ್ಟೂಡೆಂಟ್ಸ್‌ಹೋಮ್) ಸ್ವಲ್ಪಮಟ್ಟಿಗೆ ಗುರುಕುಲಗಳನ್ನು ಸ್ಮೃತಿಪಥಕ್ಕೆ ತರುತ್ತವೆ. ಆದರೆ, ಪೂರ್ವದ ಗುರುಕುಲಗಳಲ್ಲಿ, ವಿದ್ಯಾರ್ಥಿಗಳ ಗೌರ ವಕ್ಕೂ ಸನ್ಮಾನಕ್ಕೂ ಪೂಜೆಗೂ ಪಾತ್ರರಾದ ಗುರುಗಳು, ಗುರುಕುಲ ಗಳಿಗೆ ಪ್ರಭುಗಳಾಗಿರುತ್ತಿದ್ದರು. ಈಗಿನ ಹಾಸ್ಟಲುಗಳಲ್ಲಿ ಅಂಥ ಏರ್ಪಾಡು ಗಳಿರುವುದಿಲ್ಲ. ಇವು, ಗುರುಗಳಿಲ್ಲದ ಗುರುಕುಲಗಳಾಗಿ ಪರಿಣಮಿ ಸಿವೆ. ನಮ್ಮಲ್ಲಿ ಮುಂದಾಳುಗಳಾದವರೂ ಗವರ್ನಮೆಂಟಿನವರೂ ಈ

ನ್ಯೂನತೆಯನ್ನು ಪರಿಹರಿಸಿ ಹಾಸ್ಟೆಲುಗಳು ಅನ್ವರ್ಥವಾದ ಗುರು ಕುಲಗಳಾಗಿ ಪರಿಣಮಿಸುವಂತೆ ಮಾಡುವುದು, ಮುಖ್ಯಕರ್ತವ್ಯವಾಗಿ ರುವುದು.

ಕಾಲವು ಅಮೂಲ್ಯವಾದುದು. ಕಷ್ಟಪಟ್ಟರೆ ಸಕಲ ಸಂಪತ್ತುಗಳನ್ನೂ, ಸಂಪಾದಿಸಬಹುದು ; ವ್ಯರ್ಥವಾಗಿ ಕಳೆಯಲ್ಪಟ್ಟ ಕಾಲವು ಪುನಃ ಬರುವುದಿಲ್ಲ. ಕಳೆದುಕೊಳ್ಳಲ್ಪಟ್ಟ ಸಮಯವು ಪುನಃ ಒದಗುವುದಿಲ್ಲ. ಸರ್ವರಿಗೂ ಆಗಾಗ್ಗೆ ಅನುಕೂಲವಾದ ಕಾಲವು ಒದಗುವುದುಂಟು. ಆಗ ಅದರ ಪ್ರಯೋಜನವನ್ನು ಹೊಂದದೆ ಹೋದರೆ, ಪುನಃ ಅಂಥ ಸಮಯವು ಸಿಕ್ಕುವುದು ಕಷ್ಟ. ಲೋಕದಲ್ಲಿ, ಅಸಾಧಾರಣವಾದ ಧೈರ್ಯ ಸ್ಥೈರ್ಯಗಳನ್ನು ಪಡೆದು, ಹಿಡಿದ ಕೆಲಸವನ್ನು ಸಾಧಿಸುವುದರಲ್ಲಿ ಅಪ್ರತಿಹತವಾದ ಸಂಕಲ್ಪವುಳ್ಳವರು ಇರುತ್ತಾರೆ. ಅಂಥ ಜನಗಳು, ವಿಘ್ನಗಳಿಗೆ ಸ್ವಲ್ಪವೂ ಭಯಪಡದೆ, ಬಂದ ವಿಘ್ನಗಳನ್ನೆಲ್ಲ ನಿವಾರಣೆಮಾಡಿಕೊಂಡು ತಮ್ಮ ಸಂಕಲ್ಪಗಳನ್ನು ನೆರವೇರಿಸಿಕೊಳ್ಳುವರು. ವಿಘ್ನಗಳು ದುರ್ಜಯಗಳಾದರೆ, ಅವುಗಳನ್ನು ಜಯಿಸುವುದರಲ್ಲಿ ಪ್ರಾಣವನ್ನು ಬೇಕಾದರೂ ಬಿಡುವರು. ಬ್ರಿಟಿಷ್ ನ್ಯಾಯಾಧಿಪತಿಗಳಲ್ಲಿ ಅದ್ವಿತೀಯರಾದ ಲಾರ್ಡ್ ಬೇಕನ್ ರವರನ್ನು ಬಂದೀಖಾನೆಗೆ ಹಾಕಿದರು. ಅಷ್ಟು ದೊಡ್ಡ ಪದವಿಯಲ್ಲಿರತಕ್ಕ ಇತರ ದೊಡ್ಡ ಮನುಷ್ಯರಿಗೆ ಇಂಥ ಅವಸ್ಥೆಯು ಬಂದಿದ್ದರೆ, ಅವರೆಂದಿಗೂ ಬದುಕುತ್ತಿರಲಿಲ್ಲ. ಆದರೆ, ಬೇಕನ್ ರವರು ಜೈಲಿನಲ್ಲಿದ್ದುಗೊಂಡು, ಲೋಕವನ್ನುದ್ಧರಿಸುವುದಕ್ಕೆ ಸಾಧಕಗಳಾದ ಅನೇಕ ಗ್ರಂಥಗಳನ್ನು ಬರೆದರು. ಕಾಲವು ಬಹಳ ಬೆಲೆಯುಳ್ಳದೆಂಬುದಾಗಿಯೂ, ಎಲ್ಲಿ

ದ್ದರೂ ಕಾಲವನ್ನು ಚೆನ್ನಾಗಿ ವಿನಿಯೋಗಿಸಿಕೊಂಡರೆ–ಅದರಿಂದ ತುಂಬ ಪ್ರಯೋಜನವನ್ನು ಹೊಂದಬಹುದೆಂಬುದಾಗಿಯೂ ಇವರಿಗೆ ಇದ್ದ ನಂಬುಗೆಯೇ, ಜೈಲಿನಲ್ಲಿಯೂ ಕೂಡ ಇಂಥ ಅಸಾಧಾರಣವಾದ ಕೆಲಸವನ್ನು ಮಾಡುವ ಶಕ್ತಿಯನ್ನು ಇವರಿಗೆ ಉಂಟುಮಾಡಿತು. ಭೂಗರ್ಭದಲ್ಲಿ ಚಿನ್ನವೇ ಮೊದಲಾದ ಬೆಲೆಯುಳ್ಳ ಲೋಹಗಳೂ ರತ್ನಗಳೂ ಹೇಗೆ ಸಿಕ್ಕುತ್ತವೆಯೋ, ಹಾಗೆಯೇ ಗ್ರಂಥಗಳಲ್ಲಿ ಬಹಳ ಬೆಲೆಯಾಗತಕ್ಕ ಅಭಿಪ್ರಾಯಗಳಿರುತ್ತವೆ. ಆಳವಾಗಿ ಅಗೆದು, ಅಮೂಲ್ಯವಾದ ಲೋಹಗಳನ್ನೂ ರತ್ನಗಳನ್ನೂ ತೆಗೆಯುವರು. ಗ್ರಂಥಗಳನ್ನೂ ಕೂಡ ಅದೇ ರೀತಿಯಲ್ಲಿ ಶೋಧಿಸಿದ ಹೊರತು, ರತ್ನಪ್ರಾಯವಾದ ತತ್ವಗಳು ದೊರೆಯುವುದಿಲ್ಲ. ವಿದ್ಯಾವಿಹೀನರಾದ ಜನಗಳಿಗೂ, ಸರ್ವತಂತ್ರ ಸ್ವತಂತ್ರರಾದ ವಿದ್ವಾಂಸರಿಗೂ ಬಹಳ ವ್ಯತ್ಯಾಸವಿರುವುದು. ಈ ವ್ಯತ್ಯಾಸಕ್ಕೆ ಕಾರಣವೇನು ? ಸಕಲ ವಿದ್ಯಾವಿಶಾರದರಾದವರು, ತಮ್ಮ ಬುದ್ಧಿಯನ್ನು ಸುಶಿಕ್ಷೆಯಿಂದ ತಿದ್ದಿಕೊಂಡಿರುವರು. ಈ ಶಿಕ್ಷೆಯ ಮಹಿಮೆಯಿಂದ, ಮೇಧಾವಿಗಳು ಹಿಡಿದ ಕೆಲಸವನ್ನು ಅತ್ಯಂತ ಲಕ್ಷಣವಾಗಿ ಮಾಡುವ ಶಕ್ತಿಯನ್ನು ಹೊಂದುವರು. ವ್ಯಾಸಂಗಮಾಡದೆ ಯಥಾಜಾತರಾಗಿರತಕ್ಕವರು, ಪಶುಗಳಿಗೂ ಮನುಷ್ಯರಿಗೂ ಸಾಮಾನ್ಯವಾದ ಪಶುಧರ್ಮಗಳಲ್ಲಿ ಮಾತ್ರ ಸಮರ್ಥರಾಗಿರುವರು. ಬುದ್ಧಿಬಲವು ದೇಹದ ಬಲಕ್ಕಿಂತ ಬಹಳ ಹೆಚ್ಚಾದುದು. ಬುದ್ಧಿಬಲವುಳ್ಳವರು, ಬುದ್ಧಿಬಲವಿಲ್ಲದವರಿಗಿಂತಲೂ ಅತ್ಯಂತ ಉತ್ತಮವಾದ ಸ್ಥಿತಿಯುಳ್ಳವರು : ಅದಲ್ಲದೆ, ಬುದ್ಧಿಹೀನರನ್ನು ಆಳುವ ಶಕ್ತಿಯೂ ಕೂಡ ಇವರಿಗುಂಟಾಗುವುದು. ಆನೆಯು ಬೇಕಾದಷ್ಟು ದೇಹಬಲವುಳ್ಳುದು ;

ಆದಾಗ್ಗೂ, ಹೆಚ್ಚಾದ ಬುದ್ಧಿಬಲವುಳ್ಳ ಮಾನವನಿಗೆ ಅಧೀನವಾಗಿರುವುದು. ಹೀಗೆಯೇ, ಪ್ರಪಂಚದಲ್ಲಿ ಮೇಧಾವಿಗಳು ರಾಜ್ಯಭಾರಮಾಡುವರು; ಬುದ್ಧಿಹೀನರು ಸೇವಕವೃತ್ತಿಯಲ್ಲಿರುವರು. ಇಂತಹ ಬುದ್ಧಿಬಲವು ಹೆಚ್ಚು ವುದಕ್ಕೆ ವಿದ್ಯಾಭ್ಯಾಸವೇ ಮುಖ್ಯಕಾರಣವು ಈ ಪ್ರಪಂಚಸೃಷ್ಟಿಯಾದ ಮೊದಲುಗೊಂಡು, ಅನೇಕ ಪಂಡಿತೋತ್ತಮರು ಅನೇಕ ಗ್ರಂಥಗಳನ್ನು ಬರೆದು, ಸಕಲ ವಸ್ತುತತ್ವಗಳನ್ನೂ ಕೂಡ ವಿಚಾರಮಾಡಿದ್ದಾರೆ. ಅವು ಗಳನ್ನು ಪರಿಶೀಲಿಸಿ–ಆವಶ್ಯಕವಾದ ಕಾಲದಲ್ಲಿ ಅವುಗಳನ್ನು ಮೇಲುಪಂಕ್ತಿ ಯನ್ನಾಗಿ ಮಾಡಿಕೊಂಡು ಕೆಲಸಮಾಡತಕ್ಕವರು, ತಮ್ಮ ಇಷ್ಟಾರ್ಥ ಗಳನ್ನು ಪಡೆಯುವರು; ಪಶುಗಳಂತೆ, ದೇವರು ಕೊಟ್ಟ ಬುದ್ಧಿಯನ್ನು ವಿನಿಯೋಗಿಸದಿರತಕ್ಕವರು, ನರಪಶುಗಳಾಗಿಯೇ ಇರಬೇಕಾಗವುದು.

ಸಕಲಮನುಷ್ಯರಿಗೂ ಬುದ್ಧಿಯು ಒಂದೇ ರೀತಿಯಾಗಿರುವುದಿಲ್ಲ. ಹಾಗೆ ಒಂದೇ-ರೀತಿಯಾಗಿದ್ದಾಗ್ಗೂ, ಜನಗಳ ವ್ಯಾಸಂಗದಲ್ಲಿ ವ್ಯತ್ಯಾಸ ವಿದ್ದೇ ಇರುವುದು. ಕೆಲವರಿಗೆ ಅನ್ನವಸ್ತ್ರಕ್ಕೆ ಅವಕಾಶವಿರುತ್ತದೆ; ಜೀವನ ಕ್ಕಾಗಿ ವಿಶೇಷ ಕಷ್ಟಪಡುವುದು ಅಂಥವರಿಗೆ ಆವಶ್ಯಕವಾಗಿರುವುದಿಲ್ಲ. ಕೆಡುವುದಕ್ಕೆ ಸಾಧನಗಳೂ ಸಮಯಗಳೂ ಕೂಡ ವಿಶೇಷವಾಗಿರುವುದಿಲ್ಲ. ಕೃಷಿಯನ್ನು ಮಾಡಿ ಮುಂದಕ್ಕೆ ಬರಬೇಕೆಂಬ ಆಶೆಯೂ ಇರುತ್ತದೆ. ಈ ಅನುಕೂಲ್ಯಗಳೇ, ಒಳ್ಳೆಯ ಅದೃಷ್ಟಗಳೆನ್ನಿಸಿಕೊಳ್ಳುವುವು. ಮತ್ತೆ ಕೆಲ ವರಿಗೆ, ಈ ಅನುಕೂಲ್ಯವೊಂದೂ ಇರುವುದಿಲ್ಲ. ಬಹಳ ಕಷ್ಟಪಟ್ಟು ಅನ್ನವಸ್ತ್ರಗಳನ್ನು ಸಂಪಾದಿಸಿ ಕುಟುಂಬಭರಣವನ್ನು ಮಾಡಿಕೊಳ್ಳಬೇಕಾ ಗುತ್ತದೆ. ಹೀಗೆ ಜನಗಳಿಗೆ ಅನುಕೂಲಗಳೂ–ಪ್ರತಿಕೂಲಗಳೂ ಅನೇಕ

ಮುಖವಾಗಿರುತ್ತವೆ. ಹಿಡಿದ ಕೆಲಸಗಳು ಸಫಲವಾಗಿ ವಿದ್ಯೆ ವಿನಯ ಮೊದಲಾದ ಸಕಲ ಸಂಪತ್ತುಗಳೂ ಲಭ್ಯವಾಗಬೇಕಾದರೆ, ಈ ಸಂದರ್ಭಗಳೆಲ್ಲ ಅನುಕೂಲವಾಗಿರಬೇಕು. ಇವುಗಳು ಪ್ರತಿಕೂಲವಾಗಿ ಪರಿಣಮಿಸಿದರೆ, ಕ್ಲೇಶಪರಂಪರೆಗಳು ಹೆಚ್ಚಿ, ಯಾವ ಇಷ್ಟಾರ್ಥವೂ ಕೈಗೂಡುವುದಿಲ್ಲ. ಹೀಗಿದ್ದಾಗ್ಯೂ, ಪ್ರತಿ ಮನುಷ್ಯನೂ ಯಾವುದಾದರೊಂದು ಕೆಲಸದಲ್ಲಿ ಅಸಾಧಾರಣವಾದ ಕೌಶಲ್ಯವನ್ನು ಪಡೆಯುವುದು ಕಷ್ಟವಲ್ಲ. ಸಮಸ್ತ ಕ್ಲೇಶಗಳನ್ನೂ ಮರೆತು, ದಿನಕ್ಕೆ ಎರಡುಮೂರು ಘಂಟೆಗಳನ್ನಾದರೂ, ಯಾವುದಾದರೊಂದು ಕೆಲಸವನ್ನು ಚೆನ್ನಾಗಿ ಮಾಡುವುದಕ್ಕೆ ವಿನಿಯೋಗಿಸಬಹುದು. ಹಾಗೆ ವಿನಿಯೋಗಿಸತಕ್ಕವರು, ಕ್ರಮೇಣ ಸಕಲ ಕ್ಲೇಶಗಳನ್ನೂ ತಪ್ಪಿಸಿಕೊಂಡು, ಇಷ್ಟಾರ್ಥಗಳನ್ನು ಹೊಂದುವುದಕ್ಕೆ ಅರ್ಹರಾಗುವರು.

ಜನಗಳ ಬುದ್ಧಿಯು ಒಂದೇ ವಿಧವಾಗಿರುವುದಿಲ್ಲ. ಎಲ್ಲ ಕೆಲಸಗಳಲ್ಲಿಯೂ ಎಲ್ಲರಿಗೂ ಪ್ರವೇಶವುಂಟಾಗುವುದಿಲ್ಲ. ಒಂದೊಂದು ಕೆಲಸದಲ್ಲಿ ಒಬ್ಬೊಬ್ಬರಿಗೆ ಸುಲಭವಾಗಿ ಪ್ರವೇಶವುಂಟಾಗುವುದು. ಕುಬೇರಪದವಿಯಲ್ಲಿರತಕ್ಕ ಬಹುಜನಗಳು, ತಮ್ಮ ಮಕ್ಕಳನ್ನು ಸರ್ವಜ್ಞರನ್ನಾಗಿ ಮಾಡಬೇಕೆಂದು ಬಹು ದ್ರವ್ಯವನ್ನು ವಿನಿಯೋಗಿಸಿ, ಸಕಲಶಾಸ್ತ್ರವಿಶಾರದರಾದ ಪಂಡಿತರನ್ನು ಪಾಠಕರನ್ನಾಗಿ ಮಾಡುವರು. ಪರಿಣಾಮದಲ್ಲಿ, ಪಾಠಕರಿಗೆ ಬಂದ ವಿದ್ಯೆ ಮರೆಯುವುದಿಲ್ಲ ;— ಮಕ್ಕಳಿಗೆ ಬರುವುದಿಲ್ಲ. ಹೀಗಾಗುತ್ತಲಿರುವುದು, ಎಲ್ಲರಿಗೂ ಅನುಭವಸಿದ್ಧವಾದುದು. ಇದಕ್ಕೆ ಕಾರಣವುಂಟು. ಇದರಿಂದ, ಹುಡುಗರು ಶುಂಠರೆಂದು ತಿಳಿಯಕೂಡದು. ಅವರಿಗೆ

ಅಂಥ ಪಾಠಕರು ಹೇಳುವ ವಿದ್ಯೆಯನ್ನು ಕಲಿಯುವುದರಲ್ಲಿ ಶ್ರದ್ಧೆಯಿಲ್ಲ ವೆಂದು ತಿಳಿದುಕೊಳ್ಳಬೇಕು. ಬಹುದ್ರವ್ಯವ್ಯಯದಿಂದ ಏರ್ಪಾಡುಮಾಡಲ್ಪಟ್ಟ ವ್ಯಾಸಂಗಗಳಲ್ಲಿ ಅಶ್ರದ್ಧೆಯಿಂದ ದಡ್ಡರಾಗಿದ್ದಾಗ್ಯೂ, ಹಾಗೆ ದಡ್ಡರೆಂದು ಭಾವಿಸಲ್ಪಟ್ಟವರು, ಅನೇಕವಾದ ಇತರ ವಿಷಯಗಳಲ್ಲಿ ಬಹಳ ನಿಪುಣರಾಗಿರುತ್ತಾರೆ. ಕಾವ್ಯಗಳಲ್ಲಿ ಆಸಕ್ತಿಯಿಲ್ಲದವನಿಗೆ ಗಣಿತಶಾಸ್ತ್ರದಲ್ಲಿ ಆಸಕ್ತಿಯಿರುವುದುಂಟು. ಇವೆರಡರಲ್ಲಿಯೂ ಆಸಕ್ತಿಯಿಲ್ಲದವನಿಗೆ ಯಾವುದಾದರೊಂದು ಕೈಗಾರಿಕೆಯಲ್ಲಿ ಆಸಕ್ತಿಯಿರುವುದುಂಟು. ಇವುಗಳಾವುದರಲ್ಲೂ ಅಭಿರುಚಿಯಿಲ್ಲದವನು, ವ್ಯಾಪಾರ ಮೊದಲಾದ ಯಾವುದಾದರೊಂದು ವೃತ್ತಿಯಲ್ಲಿ ಅಭಿನಿವೇಶವುಳ್ಳವನಾಗಿರುವುದುಂಟು. ಯಾವ ಹುಡುಗನಿಗೆ ಯಾವ ಕೆಲಸವನ್ನು ಮಾಡುವುದರಲ್ಲಿ ಶ್ರದ್ಧೆಯಿರುವುದೋ-ಅದನ್ನು ಪರೀಕ್ಷಿಸಿ, ಅದರಲ್ಲಿ ಅವನಿಗೆ ಶಿಕ್ಷೆಯನ್ನು ಕೊಡಿಸುವುದಕ್ಕೆ ಪ್ರಯತ್ನಮಾಡಿದರೆ, ಅದರಿಂದ ಇಷ್ಟಾರ್ಥಸಿದ್ಧಿಯಾಗುವುದು. ಬಹುಜನ ತಾಯಿತಂದೆಗಳೂ, ಪೋಷಕರೂ, ಇತರರೂ, ಈ ತತ್ವವನ್ನು ಗೊತ್ತು ಮಾಡುವುದರಲ್ಲಿ ಅನಾದರಣೆಯುಳ್ಳವರಾಗಿರುತ್ತಾರೆ. ಬಹುಜನ ವಿದ್ಯಾರ್ಥಿಗಳು ತಮ್ಮ ಶಕ್ತಿಗನುರೂಪವಾದ ಪದವಿಯನ್ನು ಹೊಂದದಿರುವುದಕ್ಕೆ, ಇದೇ ಮುಖ್ಯಕಾರಣವು.

ವಿಲಾಯಿತಿಯಲ್ಲಿ ಒಂದು ಗೋಪುರವಿರುವುದು. ಅದಕ್ಕೆ ವಿದ್ಯುಚ್ಛಕ್ತಿಯನ್ನು ಆಕರ್ಷಿಸುವ ಒಂದು ಸಲಾಕಿ ಹಾಕಲ್ಪಟ್ಟಿರುವುದು. ಆ ಗೋಪುರದ ಅಡಿಯಿಂದ ಸಲಾಕಿಯ ಶಿಖರಕ್ಕೆ ೧ ೫ ೫ ಅಡಿಗಳಾಗುವುವು. ಒಬ್ಬ ಹುಡುಗನು ಈ ಸಲಾಕಿಯ ಮೇಲೆ ಹತ್ತುತ್ತಿದ್ದನು. ಆಗ

ಹುಡುಗರು ಅಲ್ಲಿ ಸೇರಿದರು. ಗಾಳಿಯು ಬಲವಾಗಿ ಬೀಸುತಿದ್ದಿತು. ಈ ಹುಡುಗನು, ಕೆಳಗೆ ನೋಡದೆಯೇ, ದೃಷ್ಟಿಯನ್ನು ಆ ಸಲಾಕಿಯ ಶಿಖರದಲ್ಲಿಟ್ಟುಕೊಂಡು, ಕಪಿಯಂತೆ ಹತ್ತುತಿದ್ದನು. ಗಾಳಿಯ ವೇಗದಿಂದಲೂ, ಇವನ ಭಾರದಿಂದಲೂ, ಸಲಾಕಿಯು ಅಲ್ಲಾಡುತಿದ್ದಿತು. ಇವನೆಲ್ಲಿ ಬಿದ್ದು ದೇಹವನ್ನು ಬಿಡುವನೋ ಎಂದು, ಜನಗಳು ಭಯಭ್ರಾಂತರಾಗಿ ನೋಡುತಿದ್ದರು. ಈ ಹುಡುಗನೋ, ಲೇಶವೂ ಭಯವಿಲ್ಲದೆ ಶಿಖರಕ್ಕೆ ಹೋಗಿ, ಕಾಲನ್ನು ಅದರ ತುದಿಯಲ್ಲಿಟ್ಟು ಅದರ ಮೇಲಕ್ಕೆ ಹತ್ತಿ ನಿಂತುಕೊಂಡು, ನಿರ್ಭಯವಾಗಿ ಒಂದು ಪ್ರದಕ್ಷಿಣವನ್ನು ಮಾಡಿ ಇಳಿದುಬಂದನು. ಇಂಥ ಅಪಾಯಕರವಾದ ಮೇಲುಪಂಕ್ತಿಯನ್ನು ಇತರ ಹುಡುಗರಿಗೆ ಹಾಕಿದನೆಂದು, ಅವನಿಗೆ ಶಿಕ್ಷೆಯನ್ನು ಮಾಡಿದರು. ಅವನ ತಾಯಿತಂದೆಗಳಿಗಾಗಲಿ, ಗುರುಹಿರಿಯರಿಗಾಗಲಿ, ಅವನನ್ನು ಅವನ ಅದ್ಭುತವಾದ ಸಾಹಸಕ್ಕೆ ಅನುರೂಪವಾದ ಕೆಲಸದಲ್ಲಿ ನಿಯಮಿಸುವ ಶಕ್ತಿಯಿಲ್ಲದೆ ಹೋದುದನ್ನು ಕುರಿತು ವಿಷಾದಿಸಬೇಕಾಗಿದೆಯಲ್ಲವೆ! ಇಂಥ ಅದ್ಭುತವಾದ ಸ್ಥೈರ್ಯವೂ ಶಕ್ತಿಯೂ ಯಾರಿಗಿರುವುದೋ ಅದನ್ನು ಪರಿಶೀಲಿಸಿ, ಅವರಿಗೆ ಸರಿಯಾದ ಮಾರ್ಗದರ್ಶನವನ್ನು ಮಾಡುತ ಬಂದರೆ, ಅವರು ಹಿಡಿದ ಕೆಲಸಗಳಲ್ಲಿ ಅಸಾಧಾರಣವಾದ ಕೌಶಲ್ಯವನ್ನು ಹೊಂದಿ, ಪ್ರಪಂಚವನ್ನುದ್ಧರಿಸುವ ಮೇಲುಪಂಕ್ತಿಯನ್ನು ಹಾಕುವುದಕ್ಕೂ ಅರ್ಹರಾಗುವರು. ಈ ವಿಷಯಕ್ಕೆ, ತಾಯಿತಂದೆಗಳೂ ಪೋಷಕರೂ ಗಮನಕೊಡಬೇಕಾಗಿರುವಂತೆಯೇ, ಪಾಠಕರೂ ಗಮನಕೊಡಬೇಕಾಗಿರುವುದು.

ಆರೋಗದೃಢಕಾಯರಾದ ತಾಯಿತಂದೆಗಳಿಂದ ಜನಿಸಿದ ಮಕ್ಕಳು, ತಾವೂ ಆರೋಗದೃಢಕಾಯರಾಗಿರುವರು. ಬಲಿತ ವೀರ್ಯದಿಂದ ಜನನವನ್ನು ಹೊಂದಿದ ಮಕ್ಕಳು, ಒಳ್ಳೆಯ ಬುದ್ಧಿಶಕ್ತಿಯನ್ನು ಹೊಂದುವರು. ಅಂಥ ಬುದ್ಧಿಶಕ್ತಿಯುಳ್ಳ ಮಕ್ಕಳನ್ನು ಸುಶಿಕ್ಷಿತರನ್ನಾಗಿ ಮಾಡುವುದರಲ್ಲಿ, ತಾಯಿತಂದೆಗಳೂ ಪಾಲಕರೂ ಎಷ್ಟು ವ್ಯವಸಾಯಮಾಡುವರೋ, ಅಷ್ಟು ಫಲವುಂಟು. ಜನ್ಮವನ್ನೆತ್ತಿದ ಕೂಡಲೆ, ಮಕ್ಕಳಿಗೆ ವಿದ್ಯಾಭ್ಯಾಸವುಪಕ್ರಮಿಸುತ್ತದೆ. ಮಗುವಿನ ಸಮೀಪದಲ್ಲಿರತಕ್ಕವರೆಲ್ಲರೂ, ಆ ಮಗುವಿಗೆ ಪಾಲಕರಾಗುತ್ತಾರೆ. ಅವರ ಸುಗುಣಗಳೂ, ದುರ್ಗುಣಗಳೂ ಪ್ರಯತ್ನವಿಲ್ಲದೆಯೇ ಮಗುವಿನಲ್ಲಿ ಪ್ರತಿಫಲಿಸುತ್ತವೆ. ಜನಗಳು ಯಾರ ಸಹವಾಸದಲ್ಲಿರುವರೋ–ಅದನ್ನು ಹೇಳಿದರೆ, ಅವರು ಸಜ್ಜನರೋ ದುರ್ಜನರೋ–ಅದನ್ನು ಹೇಳುವುದು ಕಷ್ಟವಲ್ಲವೆಂದು, ಒಬ್ಬ ವಿದ್ವಾಂಸನು ಬರೆದಿರುವನು. ಇದು ನ್ಯಾಯವಾದ ಮಾತು. ಸಜ್ಜನರು ಸಜ್ಜನರ ಸಹವಾಸದಲ್ಲಿರುತ್ತಾರೆ; ದುರ್ಜನರು ದುರ್ಜನರ ಸಹವಾಸದಲ್ಲಿರುತ್ತಾರೆ. ತಿರ್ಯಗ್ಜಂತುಗಳಲ್ಲಿಯೂ ಕೂಡ ಈ ಸಂಬಂಧವಿರುತ್ತದೆ. ಹುಲಿಗಳ ಜತೆಯಲ್ಲಿ ಇಲಿಗಳಿರುವುದುಂಟೆ? ಸಿಂಹಗಳ ಜತೆಯಲ್ಲಿ ಆನೆಗಳಿರುವುದುಂಟೆ? ಹಾಗೆಯೇ, ದುಷ್ಟರ ಜತೆಯಲ್ಲಿ ಶಿಷ್ಟರಿರುವುದಿಲ್ಲ. ಸುಗುಣ ದುರ್ಗುಣಗಳೆರಡೂ, ಸಹವಾಸದಿಂದ ವೃದ್ಧಿಗೆ ಬರುತ್ತವೆ. ಆದುದರಿಂದ, ಮಕ್ಕಳಿಗೆ ಪ್ರಥಮತಃ ಸತ್ಸಹವಾಸವನ್ನುಂಟುಮಾಡಬೇಕು. ವಿದ್ಯಾವಿನಯಸಂಪತ್ತುಗಳನ್ನು ಸಮಗ್ರವಾಗಿ ಹೊಂದಬೇಕಾದರೆ, ಸಾವಧಾನವಾಗಿ ಶ್ರದ್ಧೆಯಿಂದಲೂ ಏಕಾಗ್ರಚಿತ್ತದಿಂದಲೂ, ವ್ಯಾಸಂಗಮಾಡುವುದು ಬರಬೇಕು.

ಇಂಥ ಶಕ್ತಿಯನ್ನು ವಿದ್ಯಾರ್ಥಿಗಳಲ್ಲಿ ಕಲ್ಪಿಸಿ ಅವರು ಅಸಹಾಯಶೂರ ರಾಗುವಂತೆ ಮಾಡುವುದೇ, ಪಾಠಕರ ಮುಖ್ಯಕರ್ತವ್ಯವು. ಅನೇಕಜನ ಪಾಠಕರು ತಾವು ಶ್ರಮಪಡುವರೇ ಹೊರತು, ವಿದ್ಯಾರ್ಥಿಗಳು ವ್ಯವಸಾಯ ಮಾಡುವಂತೆ ಪ್ರೋತ್ಸಾಹಮಾಡುವುದರಲ್ಲಿ ವಿಶೇಷಶ್ರದ್ಧೆಯನ್ನು ತೋರಿಸು ವುದಿಲ್ಲ. ಇದು ವಿದ್ಯಾರ್ಥಿಗಳ ದೌರ್ಭಾಗ್ಯವೆಂದು ತಿಳಿಯಬೇಕು. ಮಾರ್ಗದರ್ಶನವನ್ನು ಮಾಡಿ ವಿದ್ಯಾರ್ಥಿಗಳು ಸ್ವಶಕ್ತಿಯಿಂದ ಮುಂದಕ್ಕೆ ಬರುವಂತೆ ಪಾಠದ ಕ್ರಮಗಳನ್ನೂ ಕೆಲಸದ ಕ್ರಮಗಳನ್ನೂ ಯಾರು ಉಪದೇಶಿಸುವರೋ, ಅವರೇ ನಿಜವಾದ ಗುರುಗಳು ; ಮಿಕ್ಕವರು ಗುರು ಪದವಿಗೆಂದಿಗೂ ಅರ್ಹರಾಗುವುದಿಲ್ಲ. ಸರಿಯಾದ ಶಿಕ್ಷೆಯನ್ನು ಮಾಡು ವುದಕ್ಕೆ ಯೋಗ್ಯತೆಯನ್ನು ಪಡೆದು, ತನ್ನ ಕರ್ತವ್ಯವನ್ನು ತಿಳಿದುಕೊಂಡು, ದ್ರವ್ಯದ ಮೇಲೆ ಮಾತ್ರವೇ ಅಪೇಕ್ಷೆಯನ್ನಿಡದೆ, ಮಕ್ಕಳು ಬುದ್ಧಿಶಾಲಿ ಗಳಾಗಿಯೂ ಮೇಧಾವಿಗಳಾಗಿಯೂ ಆತ್ಮಾವಲಂಬನೆಯುಳ್ಳವರಾ ಗಿಯೂ ಪರೋಪಕಾರಿಗಳಾಗಿಯೂ ಆದರೆ-ತನ್ನ ಪರಿಶ್ರಮಕ್ಕೆ ಸಾರಿದ ಫಲವುಂಟಾಯಿತೆಂದು ಭಾವಿಸಿ, ವಿದ್ಯಾರ್ಥಿಗಳ ಯೋಗಕ್ಷೇಮಚಿಂತೆಯಲ್ಲಿ ಪರಾಯಣನಾಗಿ ಯಾವನಿರುವನೋ, ಅವನೇ ನಿಜವಾದ ಗುರುವು ; ಅವನೇ ಪರಬ್ರಹ್ಮಸ್ವರೂಪನೆಂದು ಮಹರ್ಷಿಗಳು ಕೂಡ ಹೇಳಿರುವರು. ಇದು ಸತ್ಯವಾದ ಮಾತು ; ಇದೆಂದಿಗೂ ಅಸತ್ಯವಾಗುವುದಿಲ್ಲ.

ಸಕಲವಿದ್ಯೆಗಳೂ ಉದರನಿಮಿತ್ತವಾಗಿರುವುವೆಂದು, ಕೆಲವುಜನ ಪಂಡಿತರು ಹೇಳುವರು. ಬಹುದೂರದವರೆಗೆ ಇದು ನಿಜವೇ ಸರಿ ; ಆದರೆ ಇದೇ ಮುಖ್ಯತತ್ವವೆಂದು ತಿಳಿದುಕೊಳ್ಳಕೂಡದು. ಆಹಾರ ಭಯ

ಮೊದಲಾದುವುಗಳು, ಮನುಷ್ಯನಿಗೆ ಹೇಗೋ-ಹಾಗೆ ಪಶುಗಳಿಗೂ ಇರುವುವು. ಅನ್ನೋದಕಗಳೂ ವಸ್ತ್ರಭೂಷಣಗಳೂ ಗೃಹಾರಾಮಗಳೂ ಪತ್ನೀ ಪುತ್ರಾದಿಗಳೂ ದ್ರವ್ಯಸಂಪತ್ತುಗಳೂ ಇದ್ದಮಾತ್ರದಿಂದಲೇ, ಸಕಲವಾದ ಇಷ್ಟಾರ್ಥವೂ ಹಸ್ತಗತವಾಯಿತೆಂದು ಹೇಳುವುದಕ್ಕಾಗುವುದಿಲ್ಲ. ಇವುಗಳೆಲ್ಲವೂ ಸಾಮಾನ್ಯಸುಖಹೇತುಗಳು. ಜ್ಞಾನೈಕಲಭ್ಯವಾದ ಸುಖವು ಪ್ರತ್ಯೇಕವಾಗಿರುತ್ತದೆ. ಈ ಪ್ರಪಂಚದ ಸೃಷ್ಟಿ ಸ್ಥಿತಿ ಪ್ರಳಯಗಳಿಗೆ ಸಂಬಂಧಪಟ್ಟ ಶಾಸ್ತ್ರಗಳು ಅನೇಕವಾಗಿರುತ್ತವೆ. ಅಂಥ ಶಾಸ್ತ್ರಗಳ ವ್ಯಾಸಂಗದಿಂದ ಉಂಟಾಗತಕ್ಕ ತತ್ವಾರ್ಥಜ್ಞಾನವೂ, ಅಂಥ ಜ್ಞಾನದಿಂದ ಉಂಟಾಗತಕ್ಕ ಸುಖವೂ ಅಮೂಲ್ಯವಾದುವುಗಳು. ಯಾವ ಭಾಷೆಯಲ್ಲಿ ಈ ಶಾಸ್ತ್ರಗಳೆಲ್ಲ ನಿರೂಪಿಸಲ್ಪಟ್ಟಿರುವುವೋ, ಅಂಥ ಭಾಷೆಯನ್ನು ಅಭ್ಯಾಸ ಮಾಡಿ, ಆ ತತ್ವಾರ್ಥಗಳನ್ನು ತಿಳಿದುಕೊಂಡು, ಮನುಷ್ಯನ ಉತ್ಪತ್ತಿ ಸ್ಥಿತಿ ಪ್ರಳಯ ಪರಿಣಾಮ ಗತಿ ಮೊದಲಾದುವುಗಳನ್ನು ಪರಿಶೀಲಿಸಿ ತಿಳಿದುಕೊಳ್ಳುವುದರಲ್ಲಿ, ಅನಿರ್ವಚನೀಯವಾದ ಸುಖವಿರುವುದು. ಇಂಥ ಸುಖ ಪ್ರಾಪ್ತಿಗೋಸ್ಕರ, ಶಾಸ್ತ್ರಜನ್ಯಜ್ಞಾನಕ್ಕೆ ಸಾಧಕಗಳಾದ ಸಂಸ್ಕೃತ ಇಂಗ್ಲಿಷ್ ಮೊದಲಾದ ಭಾಷೆಗಳನ್ನು, ಈ ಭಾಷೆಗಳ ಮರ್ಯಾದೆಗೆ ಅನುಸಾರವಾಗಿ ವ್ಯಾಸಂಗಮಾಡಬೇಕು. ಈ ಭಾಷೆಗಳಲ್ಲಿ ಅಸಾಧಾರಣವಾದ ಜ್ಞಾನವನ್ನು ಪಡೆದರೆ, ಆಗ ಸಕಲಶಾಸ್ತ್ರಗಳೂ ಸ್ವಾಧೀನವಾಗುವುವು; ವಾಕ್ಕು ಸಂಸ್ಕರಿಸಲ್ಪಡುವುದು; ಮನುಷ್ಯನು ವಾಗ್ಮಿಯಾಗುವನು; ಸಾರಾಸಾರಪರಿಜ್ಞಾನವೂ ಹಸ್ತಗತವಾಗುವುದು. ಇಂತಹ ಮನುಷ್ಯನು ಸರ್ವರಿಗೂ ಪೂಜ್ಯನಾಗುವುದರಲ್ಲಿ ಸಂದೇಹವಿಲ್ಲ. ಆದುದರಿಂದ, ಚತುರ್ವಿಧ

ಪುರುಷಾರ್ಥಗಳ ಪ್ರಾಪ್ತಿಗೂ ಪ್ರಥಮಸೋಪಾನವು, ಭಾಷಾಪರಿಜ್ಞಾನ
ವಾಗಿರುವುದು ಎರಡನೆಯ ಸೋಪಾನವು, ಸಕಲ ಶಾಸ್ತ್ರಗಳಲ್ಲಿಯೂ
ವ್ಯಾಸಂಗವು ಮೂರನೆಯ ಸೋಪಾನವು, ತತ್ವಾರ್ಥಗಳನ್ನು ನಿರ್ಣಯ
ಮಾಡಿಕೊಂಡು ಅವುಗಳನ್ನು ಅನುಷ್ಠಾನಕ್ಕೆ ತಂದುಕೊಳ್ಳುವುದು. ಈ
ಸೋಪಾನತ್ರಯದಲ್ಲಿ ಶ್ರದ್ಧೆಯಿಂದ ಕೃಷಿಮಾಡತಕ್ಕವನು, ಚಕ್ರವರ್ತಿ
ಗಳಿಗೂ ಚಕ್ರವರ್ತಿಯಾಗಿ ಪರಿಣಮಿಸುವನು. ಅವುಗಳಲ್ಲಿ ಯಾವುದಕ್ಕೆ
ಲೋಪಬಂದಾಗ್ಯೂ, ಕೃತಾರ್ಥತೆಯುಂಟಾಗುವುದಿಲ್ಲ. ಥಾಮಸ್
ಅನೆಲೋ ಎಂಬವನು, ನೇಪಲ್ಸ್ ಪಟ್ಟಣದಲ್ಲಿ ಬೆಸ್ತನಾಗಿದ್ದನು. ತನ್ನ
ವ್ಯಾಸಂಗಮಹಿಮೆಯಿಂದಲೂ, ಭಾಷಾಪರಿಜ್ಞಾನದಿಂದಲೂ, ಅಸಾಧಾರಣ
ವಾದ ವಾಙ್ಮಹಿಮೆಯಿಂದಲೂ, ಇವನು ಸೇನಾನಾಯಕನಾದನು. ಕ್ರಮ
ಕ್ರಮವಾಗಿ ಪ್ರಭುಪದವಿಗೂ ಬಂದನು. ಸಕಲರೂ ಇವನಿಗೆ ವಿಧೇಯ
ರಾದರು. ದುಷ್ಟರನ್ನು ನಿಗ್ರಹಿಸಿ ಶಿಷ್ಟರನ್ನು ಪರಿಪಾಲಿಸುತ್ತ ಬಂದನು.
ಇವನಿಗೆ ಈ ಗುಣಾತಿಶಯಗಳೆಲ್ಲವೂ, ನಿರಂಕುಶವಾದ ಅಧಿಕಾರ
ಬರುವವರೆಗೆ ಮಾತ್ರ ಇದ್ದುವು. ಸಂಪತ್ತು ಬರುವವರೆಗೂ ಜಿತೇಂದ್ರಿಯ
ರಾಗಿರುವುದು ಕಷ್ಟವಲ್ಲ. ಸಂಪತ್ತು ರೂಢಮೂಲವಾದ ಮೇಲೆ, ಸಂಪ
ದಾರ್ಜನೆಗೆ ಕಾರಣಗಳಾದ ಗುಣಾತಿಶಯಗಳು ಒಂದೇವಿಧವಾಗಿರುವುದು
ಅಪೂರ್ವ. ನಿರಂಕುಶವಾದ ಅಧಿಕಾರವುಳ್ಳವರನ್ನು, ಅವರಿಗೆ ಗೊತ್ತಾಗ
ದಂತೆಯೇ ಅಷ್ಟಮದಗಳು ಆಕ್ರಮಿಸುವುವು. ಅವುಗಳಿಂದ ಮೋಹಿತ
ರಾಗಿ ಧರ್ಮಮಾರ್ಗವನ್ನು ಬಿಟ್ಟು ನಡೆಯುವುದಕ್ಕೂ ಉಪಕ್ರಮವಾಗು
ವುದು. ಅಧರ್ಮಪ್ರವರ್ತನದಿಂದ, ಭಯಂಕರವಾದ ಪತನವುಂಟಾಗು

ವುದೂ ಉಂಟು. ಈ ಥಾಮಸ್ ಅನೆಲೋ ಎಂಬಾತನು, ಜಿತೇಂದ್ರಿಯನಾಗಿ ಸಕಲಸಂಪತ್ತುಗಳನ್ನೂ ಸಂಪಾದಿಸಿದನು ; ಇಂದ್ರಿಯಪರವಶನಾಗಿ ಅತ್ಯುನ್ನತವಾದ ಸಂಪತ್ತಿನಿಂದ ಉರುಳಿ, ಬೆಸ್ತರ ಪದವಿಗಿಂತಲೂ ಹೀನವಾದ ಸ್ಥಿತಿಗೆ ಬಂದು, ದೇಹವನ್ನು ಬಿಟ್ಟನು. ಅತ್ಯುನ್ನತಪದವಿಗೆ ಬಂದವರು, ಅಗಾಧಪತನಕ್ಕೆ ಕಾರಣವಾಗತಕ್ಕ ಕೆಲಸಗಳು ಯಾವುವೆಂದು ನಿರಂತರದಲ್ಲೂ ಯೋಚಿಸುತ, ಅಂಥ ಕಾರಣಗಳಿಗೆ ಅವಕಾಶವನ್ನು ಕೊಡದಿರುವುದು ಅತ್ಯಾವಶ್ಯಕವು.

ಉದ್ಯೋಗವೇ ಪುರುಷಲಕ್ಷಣವೆಂದು ನಮ್ಮ ಹಿರಿಯರು ಹೇಳುವರು. ಅದು ಪುರುಷರಿಗೆ ಮಾತ್ರ ಲಕ್ಷಣವೆಂದು ತಿಳಿದುಕೊಳ್ಳಕೂಡದು : ಸ್ತ್ರೀಯರಿಗೂ ಕೂಡ ಅದು ಮುಖ್ಯಲಕ್ಷಣವು. ಅನುದ್ಯೋಗಿಗಳು, ಅನ್ನೋದಕಗಳನ್ನು ಹೊಂದುವುದಕ್ಕೂ ಅರ್ಹರಾಗುವುದಿಲ್ಲ. ಭೋಗ್ಯವಸ್ತುಗಳನ್ನು ನಿರ್ಮಾಣಮಾಡುವ ಕೆಲಸದಲ್ಲಿಯೂ, ಅವುಗಳು ಬೇಕಾದ ಕಡೆಗಳಲ್ಲಿ ಅಪೇಕ್ಷಿಸತಕ್ಕವರಿಗೆ ಪ್ರತಿಫಲಕ್ಕೆ ದೊರೆಯುವಂತೆ ಮಾಡತಕ್ಕ ಕೆಲಸದಲ್ಲಿಯೂ, ಯಾರು ದಿನಕ್ಕೆ ಹತ್ತುಹನ್ನೆರಡು ಘಂಟೆಯಾದರೂ ಕೆಲಸ ಮಾಡುವರೋ, ಅವರು ಅಂಥ ಅಧ್ಯವಸಾಯದಿಂದ ಉತ್ಪನ್ನವಾದ ಪದಾರ್ಥಗಳನ್ನು ಅನುಭವಿಸುವುದಕ್ಕೆ ಅರ್ಹರಾಗುವರು ; ಹಾಗಿಲ್ಲದಿದ್ದರೆ ಅವರಿಗೆ ಅಂಥ ಅರ್ಹತೆಯುಂಟಾಗುವುದಿಲ್ಲ. ಭೋಗ್ಯವಸ್ತುಗಳಲ್ಲಿ ಎಲ್ಲರಿಗೂ ಆಸಕ್ತಿಯಿರುವುದು ; ಅದನ್ನು ನಿರ್ಮಾಣಮಾಡತಕ್ಕ ಕೆಲಸದಲ್ಲಿ ಆಸಕ್ತಿಯುಳ್ಳವರು ಮಾತ್ರ ಅಪೂರ್ವರಾಗಿರುವರು. ಚಿನ್ನದಲ್ಲಿ ಆಸಕ್ತಿಯುಳ್ಳವರು ಬೇಕಾದಹಾಗಿರುತ್ತಾರೆ ; ಗಣಿಯನ್ನಗೆಯುವುದರಲ್ಲಿ ಕಷ್ಟ

ಪಟ್ಟು ಅಲ್ಲಿ ಉಂಟಾಗತಕ್ಕ ಅಪಾಯಗಳಿಗೆ ತಲೆಕೊಡತಕ್ಕವರು ವಿರಳರಾಗಿ ರುತ್ತಾರೆ. ಕಷ್ಟಪಟ್ಟವರೇ, ಆ ಕಷ್ಟದಿಂದ ಉತ್ಪನ್ನವಾದ ಫಲಕ್ಕೆ ನಿಜ ವಾಗಿ ಪಾತ್ರರಾಗುವರು; ಉಳಿದವರೆಂದಿಗೂ ಪಾತ್ರರಾಗುವುದಿಲ್ಲ. ಸುಖವನ್ನು ಮಾತ್ರ ಅಪೇಕ್ಷಿಸಿ ಕಷ್ಟಪಡುವುದರಲ್ಲಿ ಇಷ್ಟವಿಲ್ಲದವರಿಗೆ, ನಿಜವಾದ ಸುಖವು ಎಂದಿಗೂ ದೊರೆಯುವುದಿಲ್ಲ. ಬಿಸಿಲಿನಲ್ಲಿ ಕಷ್ಟಪಟ್ಟು ಕೆಲಸಮಾಡತಕ್ಕವರಿಗೆ ನೆರಳಿನ ಸುಖವು ತಿಳಿಯುವಂತೆ, ನೆರಳಲ್ಲಿಯೇ ಅಜಗರದಂತೆ ಬಿದ್ದಿರತಕ್ಕವರಿಗೆ ಎಂದಿಗಾದರೂ ಅದರ ಸುಖವು ಗೊತ್ತಾಗು ವುದೆ? ಎಂದಿಗೂ ಗೊತ್ತಾಗುವುದಿಲ್ಲವೆಂದು ಧೈರ್ಯದಿಂದ ಹೇಳಬಹುದು.

ಫೆಸಿಫಿಕ್ ಸಾಗರದಲ್ಲಿ ಲಕ್ಷಾಂತರ ದ್ವೀಪಗಳಿರುತ್ತವೆ. ಈ ಸಾಗ ರಕ್ಕೆ ಇವುಗಳು ಒಡವೆಗಳಂತೆ ಪರಿಣಮಿಸಿವೆ. ಇವುಗಳು ಹೇಗೆ ಸೃಷ್ಟಿಸ ಲ್ಪಟ್ಟುವು? ಯಾರಿಂದ ಸೃಷ್ಟಿಸಲ್ಪಟ್ಟುವು? ಹವಳದ ಹುಳಗಳೆಂಬು ದಾಗಿ, ಸಮುದ್ರದಲ್ಲಿ ಕೆಲವು ಸೂಕ್ಷ್ಮವಾದ ಹುಳಗಳಿರುತ್ತವೆ. ಇವು ಗಳು ಅಸಂಖ್ಯಾತವಾಗಿ ಸೇರಿ, ಮರಳನ್ನು ಒಂದೊಂದು ಕಾಳಾಗಿ ತಂದು ಗುಂಪುಗೂಡಿಸುತ್ತವೆ. ಕೊನೆಗೆ ಈ ಮರಳಿನ ಕಾಳುಗಳೆಲ್ಲ ದೊಡ್ಡ ಪರ್ವತವಾಗಿ ಮೇಲಕ್ಕೆದ್ದು, ದ್ವೀಪಗಳೆನ್ನಿಸಿಕೊಳ್ಳುತ್ತವೆ. ಈ ದ್ವೀಪ ವನ್ನು ನಿರ್ಮಾಣಮಾಡುವ ಕೆಲಸದಲ್ಲಿ, ಲೆಕ್ಕವಿಲ್ಲದಷ್ಟು ಪ್ರಾಣಿಗಳು ಅವಿಚ್ಛಿನ್ನವಾಗಿ ವ್ಯವಸಾಯಮಾಡುತ್ತವೆ. ಅವುಗಳ ವ್ಯವಸಾಯವನ್ನು ನೋಡಿದರೆ, ನಮಗೆ ನಾಚುಗೆಯಾಗದಿರುವುದಿಲ್ಲ. ಪ್ರಾಣಿವರ್ಗದಲ್ಲಿ, ಹೆಚ್ಚಾದ ಬುದ್ಧಿಬಲವುಳ್ಳವರು ಮನುಷ್ಯರು. ಅಣುರೇಣುಗಳಂತಿರತಕ್ಕ ಪ್ರಾಣಿಗಳು ಕೂಡ ಅದ್ಭುತವಾದ ಕೆಲಸವನ್ನು ಮಾಡುತಿರುವಾಗ, ಮನು

ಷ್ಯರಲ್ಲಿ ಬಹುಜನಗಳು ಉದ್ಯೋಗವಿಹೀನರಾಗಿರುವುದನ್ನು ನೋಡಿದರೆ, ಯಾರುತಾನೆ ವಿಷಾದಪಡದಿರುವರು ? ಬಹುಜನಗಳು ಅನುದ್ಯೋಗಿಗಳಾಗಿದ್ದಾಗ್ಯೂ, ಕೆಲಸಮಾಡತಕ್ಕವರೂ ಬಹುಜನಗಳಿರುತ್ತಾರೆ. ಈ ಪ್ರಪಂಚದಲ್ಲಿನ ಅದ್ಭುತವಾದ ಕೆಲಸಗಳೆಲ್ಲವೂ, ಇವರ ಉದ್ಯೋಗಬಲದ ಪರಿಣಾಮವಾಗಿರುತ್ತವೆ ಒಬ್ಬನು ಒಂದಾನೊಂದು ಗೃಹದಲ್ಲಿ ಒಬ್ಬ ದೊಡ್ಡ ಮನುಷ್ಯನ ತಸ್ವೀರನ್ನು ನೋಡಿದನು ; ಆ ತಸ್ವೀರಿನಲ್ಲಿ ಒಂದು ಪರ್ವತವೂ, ಅದರ ತಪ್ಪಲಲ್ಲಿ ಒಂದು ಪಿಕಾಸಿಯನ್ನು ಹಿಡಿದುಕೊಂಡು ಅಗೆಯುವಂತೆ ನಿಂತಿದ್ದ ಒಬ್ಬ ಮನುಷ್ಯನೂ ಇದ್ದರು. ಅವನ ಸಮೀಪದಲ್ಲಿ “ ಕೊಂಚ ಕೊಂಚವಾಗಿ ” ಎಂದು ಬರೆದಿದ್ದಿತು. ಅವಿಚ್ಛಿನ್ನವಾಗಿ ಉದ್ಯೋಗ ಮಾಡತಕ್ಕವರನ್ನು ನೋಡಿದರೆ, ಇದು ಸ್ಮರಣೆಗೆ ಬರುತ್ತದೆ. ಮಾಡುವ ಪ್ರಯತ್ನವು ಭಗೀರಥಪ್ರಯತ್ನವಾದಾಗ್ಯೂ, ಬೇಜಾರನ್ನು ಹೊಂದದೆ ಕೊಂಚಕೊಂಚವಾಗಿ ಮಾಡುತ್ತ ಬಂದರೆ, ಎಂತಹ ಕಷ್ಟಸಾಧ್ಯವಾದ ಕೆಲಸವೂ ಕೂಡ ಸಮಗ್ರವಾಗಿ ಮಾಡಲ್ಪಡುವುದು. ಇದಕ್ಕೆ, ಚಾಣಕ್ಯನು ಗುರುದಕ್ಷಿಣೆಯನ್ನು ಕೊಡುವುದಕ್ಕೋಸ್ಕರ ತನಗೆ ಅರ್ಥಶಾಸ್ತ್ರ ಬರುವುದೆಂದು ದುಷ್ಟರಾದ ನಂದರನ್ನು ನಿರ್ಮೂಲೋತ್ಪಾಟನಮಾಡಿದುದೇ ಸಾಕ್ಷಿಯಾಗಿರುವುದು.

ವಿದ್ಯಾಭ್ಯಾಸಕ್ಕೆ ಮುಖ್ಯೋದ್ದೇಶವು, ಅತ್ಯಂತ ಚಂಚಲವಾದ ಮನಸ್ಸನ್ನು ಸುಶಿಕ್ಷೆಗೆ ಗುರಿಮಾಡುವುದಾಗಿರುವುದು. ಮನಸ್ಸು, ಅಶಿಕ್ಷಿತವಾಗಿ ಉತ್ಕಟಾವಸ್ಥೆಯಲ್ಲಿರುವ ಅಶ್ವದಂತಿರುವುದು. ಏಕಾಗ್ರಚಿತ್ತದಿಂದ ಮಾಡಬೇಕಾದ ಕೆಲಸವನ್ನು ಮಾಡುವುದಕ್ಕೋಸ್ಕರ ಪ್ರಯತ್ನಮಾಡಿದರೆ,

ಈ ಮನಸ್ಸಿನ ಚಾಂಚಲ್ಯ ಗೊತ್ತಾಗುವುದು, ನಮ್ಮ ಪರ್ಯಾಲೋಚನೆಗೆ ವಿಷಯವಾದ ಪದಾರ್ಥದ ಮೇಲೆ ಮನಸ್ಸನ್ನು ನಿಲ್ಲಿಸುವುದು ಬಹು ಕಷ್ಟವು. ವಿಷಯಾಂತರಗಳಲ್ಲಿ ಅದು ಆಸಕ್ತವಾಗುತ್ತದೆ. ಅವುಗಳನ್ನು ಬಿಟ್ಟು ಹಿಂದಿರುಗಿಬರುವಂತೆ ಮಾಡಿ, ಉದ್ದಿಷ್ಟವಾದ ಕೆಲಸದ ಮೇಲೆ ಅದನ್ನು ನಿಲ್ಲಿಸಬೇಕು. ಅಲ್ಲಿಂದ ಓಡಿಹೋಗದಂತೆ ಅದಕ್ಕೆ ನಿಗಳಬಂಧ ಮಾಡಬೇಕು. ಆಗಾಗ್ಗೆ ಅದು ಓಡಿಹೋಗುತ್ತದೆ ಪುನಃ ಅದನ್ನು ಹಿಡಿದುಕೊಂಡುಬಂದು, ಅದರಿಂದ ಆಗತಕ್ಕ ಕೆಲಸವನ್ನು ಮಾಡಿಸಬೇಕು. ಯಾವ ಮನುಷ್ಯನಿಗೆ ಮನೋನಿಗ್ರಹಮಾಡಿ ಉದ್ದಿಷ್ಟವಾದ ಕೆಲಸಗಳಲ್ಲಿ ಅದನ್ನು ನಿಲ್ಲಿಸುವುದು ಸಾಧ್ಯವೋ, ಆ ಮನುಷ್ಯನು ತಾನು ಹಿಡಿದ ಕೆಲಸವನ್ನು ಚೆನ್ನಾಗಿ ಮಾಡಿ ಉದ್ಯೋಗದ ಫಲವನ್ನು ಹೊಂದುತ್ತಾನೆ. ಈ ಶಕ್ತಿಯಿಲ್ಲದವನು ಇಂಥ ಫಲವನ್ನು ಹೊಂದಲಾರನು. ಬಹಳ ಕಷ್ಟ ಸಾಧ್ಯವಾದ ಪರೀಕ್ಷೆಗಳನ್ನು ಕೊಡತಕ್ಕವರೂ, ಅದ್ಭುತವಾದ ಕಾವ್ಯಗಳನ್ನು ಮಾಡತಕ್ಕವರೂ, ಪ್ರಜಾರಂಜನೆಯನ್ನು ಮಾಡುವುದರಲ್ಲಿ ಅದ್ವಿತೀಯರಾದವರೂ, ತಮ್ಮ ಪರೋಪಕಾರದ ಮಹಿಮೆಯಿಂದ ದಿಗಂತವಿಶ್ರಾಂತವಾದ ಕೀರ್ತಿಯನ್ನು ಪಡೆದು ಬಹುಜನಗಳ ಪ್ರೀತಿಗೆ ಪಾತ್ರರಾಗಿರತಕ್ಕವರೂ, ಇವರೆಲ್ಲರೂ ತಪಸ್ವಿಗಳೆಂದು ಹೇಳಬಹುದು. ತಪೋಬಲದಿಂದ ಇಂದ್ರಿಯಗಳೂ ಮನಸ್ಸೂ ಸ್ವಾಧೀನಕ್ಕೆ ಬಂದಹೊರತು, ಯಾರೂ ಒಳ್ಳೆಯ ಸ್ಥಿತಿಗೆ ಬರುವುದಿಲ್ಲ; ಇಷ್ಟಾರ್ಥಗಳನ್ನೂ ಪಡೆಯುವುದಿಲ್ಲ. ತಪಃಪ್ರಭಾವದಿಂದ ಜಿತೇಂದ್ರಿಯರಾಗಿ ಮನಸ್ಸಿನ ವ್ಯಾಪಾರವನ್ನು ಧರ್ಮಕ್ಕೆ ಅಧೀನವಾಗಿರುವಂತೆ ಮಾಡಿಕೊಳ್ಳತಕ್ಕವರು, ಇಹಪರ

ಗಳನ್ನು ಸೂರೆಗೊಂಬುದರಲ್ಲಿ ಸಂದೇಹವಿಲ್ಲ. ಆದುದರಿಂದ, ಕೃತಕೃತ್ಯರಾಗಬೇಕೆಂಬ ಅಭಿಲಾಷೆಯುಳ್ಳವರು, ಚಿಕ್ಕ ವಯಸ್ಸಿನಲ್ಲಿ ಇಂದ್ರಿಯಗಳೂ ಮನಸ್ಸೂ ದುರ್ವ್ಯಾಪಾರಗಳಿಗೆ ಹೋಗದಂತೆ ಇಟ್ಟುಕೊಳ್ಳಬೇಕು. ಹೀಗೆ ಮಾಡುವುದು, ವಿದ್ಯಾರ್ಥಿಗಳಿಗೆ ಅತ್ಯಂತ ಆವಶ್ಯಕವು.

ಶ್ರೇಯಸ್ಕರವಾದ ಕೆಲಸಗಳಿಗೆ ಅನೇಕ ವಿಘ್ನಗಳು ಬರುವುವು. ಅಜಿತೇಂದ್ರಿಯರಾದವರು, ಅಂಥ ವಿಘ್ನಗಳನ್ನು ಜಯಿಸಲಾರರು. ಜಿತೇಂದ್ರಿಯರಿಗೆ, ವಾರ್ಧಕ್ಯಜನ್ಯವಾದ ದೇಹದೌರ್ಬಲ್ಯವೂ, ಬುದ್ಧಿದೌರ್ಬಲ್ಯವೂ, ಬಹುಕಾಲದವರೆಗೂ ಬರುವುದಿಲ್ಲ. ಶಾಸ್ತ್ರಜ್ಞರಲ್ಲಿ ಶಿರೋಮಣಿಯಾದ ನ್ಯೂಟನ್ ಎಂಬವನು, ತನ್ನ ಎಂಬತ್ತೈದನೆಯ ವಯಸ್ಸಿನಲ್ಲಿ ಅತ್ಯಂತ ಸೂಕ್ಷ್ಮವಾದ ಬುದ್ಧಿಬಲದಿಂದ ಮಾಡತಕ್ಕ ಕೆಲಸಗಳನ್ನು ಮಾಡುತ್ತಿದ್ದನು. ವಾಲರಿಂಜ ಮಹಾಕವಿಯು, ಎಂಬತ್ತೆರಡನೆಯ ವಯಸ್ಸಿನಲ್ಲಿ ತಾನು ಬರೆದ ಕಾವ್ಯಗಳೊಳಗೆ, ಅತ್ಯುತ್ಕಟಪ್ರಾಯದಲ್ಲಿರತಕ್ಕವರು ತೋರಿಸುವ ಧೈರ್ಯ ಸ್ಥೈರ್ಯ ಮೊದಲಾದ ಮನೋಭಾವಗಳನ್ನು ತೋರಿಸಿರುವನು. ಅಕಾಲವಾರ್ಧಕ್ಯಕ್ಕೂ, ಅರುಳುಮರುಳುತನಕ್ಕೂ, ಅಮಿತವಾದ ಇಂದ್ರಿಯಪರವಶತೆಯೇ ಮುಖ್ಯಕಾರಣವು. ವಯಸ್ಸಾದಾಗ್ಯೂ, ಯಾವ ಮನುಷ್ಯನು ದೇಹಶಕ್ತಿಗೂ ಬುದ್ಧಿಶಕ್ತಿಗೂ ದೌರ್ಬಲ್ಯ ಬಾರದಿರುವಂತೆ ಇಟ್ಟುಕೊಂಡು ಹಿಡಿದ ಕೆಲಸವನ್ನು ಚೆನ್ನಾಗಿ ಮಾಡುವನೋ, ಅವನು ಜಿತೇಂದ್ರಿಯನೆಂದು ತಿಳಿದುಕೊಳ್ಳಬಹುದು. ಏಕಾಗ್ರಚಿತ್ತತೆ ಲಭ್ಯವಾಗಬೇಕಾದರೆ, ಇದಕ್ಕಾಗಿ ತಪಸ್ಸು ಮಾಡಲ್ಪಡಬೇಕು. ಈ ತಪಸ್ಸೇ ಇಂದ್ರಿಯನಿಗ್ರಹರೂಪವಾದುದು.

ನಮ್ಮ ಪೌರ್ವಿಕರಲ್ಲಿ, ವರರುಚಿಯ ಗುರುಕುಲವಾಸವು ಏಕಾಗ್ರ್ಯಕ್ಕೆ ಒಳ್ಳೆಯ ಉದಾಹರಣೆಯಾಗಿರುವುದು. ಈತನು ವಯಸ್ಸಾದಮೇಲೆ, ವಿದ್ಯಾಭ್ಯಾಸ ಮಾಡಬೇಕೆಂದು ಸಂಕಲ್ಪಮಾಡಿ, ಕಾಶಿಯಲ್ಲಿ ಒಬ್ಬ ಪಂಡಿತನ ಬಳಿಗೆ ಹೋದನು. ಆ ಪಂಡಿತನು, ಇಷ್ಟು ದೊಡ್ಡವನು ವಿದ್ಯಾರ್ಥಿಯಾಗಿರುವುದಕ್ಕೆ ಅರ್ಹನೋ ಅಲ್ಲವೋ ಎಂಬುದನ್ನು ಪರೀಕ್ಷಿಸುವುದಕ್ಕೋಸ್ಕರ, ಅವನ ಕೈಯಲ್ಲಿ ಸಂಪೂರ್ಣವಾಗಿ ಎಣ್ಣೆಯಿಂದ ತುಂಬಲ್ಪಟ್ಟ ಒಂದು ಬಟ್ಟಲನ್ನು ಕೊಟ್ಟು, ಆ ಬೀದಿಯ ಕೊನೆಯಲ್ಲಿದ್ದ ತನ್ನ ಮಿತ್ರನೊಬ್ಬನಿಗೆ ಅದನ್ನು ತಲುಪಿಸಿ ಬಂದರೆ ತಾನು ಪಾಠಹೇಳುವುದಾಗಿ ಹೇಳಿ, ಆ ಯೆಣ್ಣೆಯಲ್ಲಿ ಒಂದು ತೊಟ್ಟು ನಷ್ಟವಾದರೂ ಪಾಠ ಹೇಳುವುದಿಲ್ಲನೆಂದೂ ಹೇಳಿದನು. ಅದಕ್ಕೆ ಒಪ್ಪಿ, ವರರುಚಿಯು ಆ ಪಂಡಿತನ ಆಜ್ಞೆಯನ್ನು ನೆರವೇರಿಸುವುದಕ್ಕೆ ಹೊರಟನು. ಕೂಡಲೆ, ಆ ಪಂಡಿತನ ಅಜ್ಞೆಯಿಂದ, ಇವನಿಗೆದುರಾಗಿ ವಾದ್ಯವಿಶೇಷಗಳೊಡನೆ ಅನೇಕ ನರ್ತಕಿಯರು ಬಂದರು; ಅನಂತರ ಅನೇಕ ವಿದ್ಯಾರ್ಥಿಗಳು ನಾನಾವಿಧವಾದ ಕೋಲಾಹಲಗಳನ್ನು ಮಾಡಿಕೊಂಡು ಬಂದರು. ದನ ಕರು ಮೊದಲಾದುವುಗಳೂ ಬಂದುವು. ದೃಷ್ಟಿಯನ್ನೂ ಮನಸ್ಸನ್ನೂ ಆಕರ್ಷಿಸತಕ್ಕ ಅನೇಕ ವಿಘ್ನಗಳುಂಟಾದುವು. ಆದರೂ, ವರರುಚಿಯ ದೃಷ್ಟಿಯೂ ಬುದ್ಧಿಯೂ ಸಂಪೂರ್ಣವಾಗಿ ಆ ಬಟ್ಟಲಿನ ಮೇಲೂ ಎಣ್ಣೆಯ ಮೇಲೂ ಇದ್ದುವು. ಅವನು ಬಹುಜಾಗರೂಕನಾಗಿ ದಾರಿಯನ್ನೂ ಬಟ್ಟಲನ್ನೂ ನೋಡಿಕೊಂಡು, ಉದ್ದಿಷ್ಟನಾದ ಪಂಡಿತನ ಮನೆಗೆ ಹೋಗಿ, ಅದನ್ನು ಕೊಟ್ಟು, ಅದು ತಲುಪಿದುದಕ್ಕೆ ಆ ಪಂಡಿತನ ಲೇಖನವನ್ನು ತೆಗೆದು

ಕೊಂಡು, ಮತ್ತೆ ತನ್ನ ಗುರುವಿನ ಬಳಿಗೆ ಹೋದನು. ಆ ಗುರುವು "ನೀನು ಬಟ್ಟಲನ್ನು ತೆಗೆದುಕೊಂಡು ಹೋಗುವಾಗ್ಗೆ ಏನನ್ನು ನೋಡಿದೆ? ಏನನ್ನು ಕೇಳಿದೆ?" ಎಂದು ಪ್ರಶ್ನೆಮಾಡಿದನು. ದಾರಿಯಲ್ಲಿ ನೋಡುವುದಕ್ಕೆ ಏನೂ ಇರಲಿಲ್ಲವೆಂಬುದಾಗಿಯೂ, ಯಾವ ಶಬ್ದವೂ ಆಗಲಿಲ್ಲವೆಂಬುದಾಗಿಯೂ, ವರರುಚಿಯು ಹೇಳಿದನು. ಸಕಲವಿದ್ಯಾವಿಶಾರದನಾಗುವುದಕ್ಕೆ ಇವನು ಸರಿಯಾದ ಯೋಗ್ಯತೆಯುಳ್ಳವನೆಂದು ತಿಳಿದು, ಆ ಪಂಡಿತನು ಇವನಿಗೆ ವಿದ್ಯಾಭ್ಯಾಸವನ್ನು ಮಾಡಿಸಿದನು. ನಿಶ್ಚಲವಾದ ವ್ಯಾಸಂಗದ ಪ್ರಭಾವದಿಂದ, ಇವನು ಅದ್ವಿತೀಯಪಂಡಿತನಾದನು. ಇದಕ್ಕೆ ಅಮೇರಿಕಾಖಂಡದಲ್ಲಿ ಈಗ ಇನ್ನೊಂದುದಾಹರಣೆಯಿರುವುದು.

ಗ್ರಾಮಫೋನ್ ಮೊದಲಾದುವುಗಳನ್ನು ನಿರ್ಮಾಣಮಾಡಿದ ಎಡಿಸನ್ನನು, ಈಗ ಅಮೇರಿಕಾವಲ್ಲಿರುವನು. ಇವನು ನಿರ್ಮಾಣಮಾಡಿರತಕ್ಕ ಗ್ರಾಮಫೋನಿನಂತಹ ಯಂತ್ರಗಳನ್ನು ನೆಲದಮೇಲೆ ಹರಡಬೇಕಾದರೆ, ಹದಿಮೂರು ಎಕ್ಕರೆಯಷ್ಟು ಜಮೀನು ಬೇಕಾಗುತ್ತದೆ ಈ ಮಹಾತ್ಮನು, ಅಭಿನವತಪಸ್ವಿಗಳಲ್ಲಿ ಅಗ್ರಗಣ್ಯನು. ವಿಶ್ವಾಮಿತ್ರ ಮೊದಲಾದವರ ಕಥೆಗಳೂ ಕೂಡ, ಇವನು ಮಾಡುತಿರುವ ಕೆಲಸಗಳೊಡನೆ ಹೋಲಿಸಿದರೆ ಆಶ್ಚರ್ಯಕರವಾಗಿ ತೋರುವುದಿಲ್ಲ. ವಸ್ತುನಿರ್ಮಾಣವನ್ನು ಮಾಡುವುದರಲ್ಲಿಯೂ, ಶಾಸ್ತ್ರರಹಸ್ಯಗಳನ್ನು ಗೊತ್ತುಮಾಡುವುದರಲ್ಲಿಯೂ, ಇವನು ಆಗಾಗ್ಗೆ ತನ್ನ ಮನಸ್ಸಿಗೆ ಆಲೋಚನೆಯ ಕೆಲಸವನ್ನು ಕೊಡುವುದುಂಟು. ಕುರ್ಚಿಯ ಮೇಲೆ ಕುಳಿತುಕೊಂಡು ಕಣ್ಣುಗಳನ್ನು ಬಿಟ್ಟುಕೊಂಡು ಇವನು ಯೋಚಿಸುತ್ತ ಇರುವನು. ಸ್ನಾನಕ್ಕೆ ಸಿದ್ಧಮಾಡಿ, ಪರಿಚಾರಕರು

ಘಂಟೆಯನ್ನು ಹೊಡೆಯುವರು. ಅದು ಇವನಿಗೆ ಕೇಳುವುದಿಲ್ಲ. ಇವನು ಸ್ನಾನಕ್ಕೆ ಬಾರದಿರುವುದನ್ನು ನೋಡಿದಕೂಡಲೆ, ಇವನ ಹೆಂಡತಿಯು ಕೊಟ್ಟಡಿಗೆ ಹೋಗಿ ನೋಡುವಳು; ಏಕಾಗ್ರಚಿತ್ತದಿಂದ ಏನೋ ವಿಷಯವನ್ನು ಪರ್ಯಾಲೋಚಿಸುತ್ತಿರುವನೆಂದು, ಅವಳಿಗೆ ಗೊತ್ತಾಗುವುದು. ಕೂಡಲೇ ಬಾಗಿಲುಗಳನ್ನು ಹಾಕಿಸಿ, ಯಾರು ಬಂದಾಗ್ಯೂ ಒಳಕ್ಕೆ ಬಿಡಕೂಡದೆಂದು ಆಜ್ಞೆಮಾಡುವಳು. ತಾನು ಯೋಚಿಸುತ್ತಿರುವ ವಿಷಯ ಗೊತ್ತಾಗುವವರೆಗೂ, ಇವನು ಅಂತರ್ಮುಖನಾಗಿರುವನು. ಆ ಕಾಲದಲ್ಲಿ ಸೂಜಿಯಿಂದ ಚುಚ್ಚಿದಾಗ್ಯೂ ಇವನಿಗೆ ನೋವಾಗುವುದಿಲ್ಲ; ಇವನು ಬಹಿರ್ಮುಖನಾಗುವುದೂ ಇಲ್ಲ. ಒಂದೊಂದು ವೇಳೆ, ಅವನು, ಎರಡೂ ಮೂರೂದಿವಸಗಳು ಈ ರೀತಿಯಾಗಿ ಸಮಾಧಿಯಲ್ಲಿದ್ದು, ಬಹಿರ್ಮುಖನಾದ ಕೂಡಲೆ ಘಂಟೆಯನ್ನು ಹೊಡೆಯುವನು. ಅವನ ಹೆಂಡತಿಯು, ಆ ಕ್ಷಣದಲ್ಲಿಯೇ ಬರುವಳು. ಅವನು, ಹಸಿವಾಗುತ್ತದೆಂದು ಹೇಳಿ; ಕಾಫಿ ಮೊದಲಾದುವುಗಳನ್ನು ತರಿಸಿಕೊಂಡು, ಕ್ಷುದ್ಬಾಧೆಯನ್ನು ತಪ್ಪಿಸಿಕೊಂಡು, ಅನಂತರ ಇತರ ಕೆಲಸಗಳಿಗೆ ಮನಸ್ಸನ್ನು ಕೊಡುವನು. ಮನಸ್ಸನ್ನು ಯಾರು ಈರೀತಿಯಾಗಿ ತಮ್ಮ ವಶದಲ್ಲಿಟ್ಟುಕೊಳ್ಳುವರೋ, ಅವರೇ ನಿಜವಾದ ತಪಸ್ವಿಗಳು. ಇಂಥ ತಪಸ್ವಿಗೆ ಲಕ್ಷಾಂತರ ದೃಷ್ಟಾಂತಗಳಿರುತ್ತವೆ. ಆದರೆ, ಇನ್ನೊಂದು ದೃಷ್ಟಾಂತವನ್ನು ಹೇಳಿ ಈ ವಿಷಯವು ಉಪಸಂಹರಿಸಲ್ಪಡತಕ್ಕುದಾಗಿರುತ್ತದೆ.

ಗ್ರೀಸ್ ದೇಶದ ರಾಜಧಾನಿಯಾದ ಅಥೆನ್ಸ್ ಪಟ್ಟಣದಲ್ಲಿ, ಡಿಮಾಸ್ತನೀಸ್ ಎಂಬ ವಾಗ್ಮಿಯೊಬ್ಬನಿದ್ದನು. ಅಲೆಕ್ಸಾಂಡರ್ ದಿ ಗ್ರೇಟ್ ಎಂಬ

ವನ ತಂದೆಯಾದ ಎರಡನೆಯ ಫಿಲಿಪ್ಸ್ ಎಂಬವನು, ಈ ಪ್ರಪಂಚವನ್ನೆಲ್ಲ ಗೆಲ್ಲಬೇಕೆಂದು, ಲಕ್ಷಾಂತರ ಸೈನ್ಯವನ್ನು ಕೂಡಿಸಿ, ದಿಗ್ವಿಜಯಕ್ಕೆ ಹೊರಡುವ ಪ್ರಯತ್ನವನ್ನು ಮಾಡಿದನು. ಡಿಮಾಸ್ತನೀಸನು, ಈ ದಿಗ್ವಿಜಯದಿಂದುಂಟಾಗತಕ್ಕ ಅನರ್ಥಗಳನ್ನು ವರ್ಣಿಸಿ, ಕೋಟ್ಯಂತರ ಜನರು ವಿತಂತುಗಳಾಗುವರೆಂಬುದಾಗಿಯೂ, ಅನೇಕಕೋಟಿ ಬಾಲಕರು ಅನಾಥರಾಗುವರೆಂಬುದಾಗಿಯೂ, ಕುಟುಂಬಭರಣಮಾಡತಕ್ಕವರು ಸಾಯುವುದರಿಂದ ಅನೇಕಕೋಟಿ ಜನಗಳು ಅನ್ನೋದಕಗಳಿಗೂ ಮಾರ್ಗವಿಲ್ಲದೆ ಮೃತಪಡುವರೆಂಬುದಾಗಿಯೂ, ಇಂಥ ಪಾಪಕೃತ್ಯಗಳಿಗೆ ಕಾರಣವಾದ ದಿಗ್ವಿಜಯಾರ್ಥವಾದ ಈ ಅಭಿಷೇಣನದಿಂದ ಬಹುಜನ ಯೋಧರೂ ಕೂಡ ಸಾಯಬಹುದೆಂಬುದಾಗಿಯೂ, ಇಂಥ ಘೋರವಾದ ಪಾಪಗಳಿಗೆ ಗುರಿಯಾಗಿ ಇಹಪರಗಳನ್ನು ಕಳೆದುಕೊಳ್ಳುವುದು ಸುತರಾಂ ಯೋಗ್ಯವಾದುದಲ್ಲವೆಂಬುದಾಗಿಯೂ, ಗ್ರಿಸ್ ದೇಶದ ಯೋಧರಿಗೆ ಉಪದೇಶಮಾಡಿದನು. ಅವರಲ್ಲಿ ಬಹುಜನರು, ಚಕ್ರವರ್ತಿಯ ಆಜ್ಞೆಯನ್ನುಲ್ಲಂಘಿಸಿ, ಈ ಪಾಪಕೃತ್ಯಗಳನ್ನು ಮಾಡುವುದಕ್ಕೆ ತಾವು ಒಡಂಬಡುವುದಿಲ್ಲವೆಂದು, ಸಿಥ್ಯಯವಾಗಿ ಏಕಮತ್ಯದಿಂದ ಹೇಳಿದರು. ಈ ಡಿಮಾಸ್ತನೀಸನ ಮೇಲೆ ಎರಡನೆಯ ಫಿಲಿಪ್ಪಿಗೆ ಬಹಳ ಕೋಪವುಂಟಾಯಿತು. ಇವನನ್ನು ಕೊಲ್ಲಿಸಬೇಕೆಂದು, ಐದುಜನ ಕಟುಗರನ್ನು, ಕರೆಸಿ ಇವನ ತಲೆಯನ್ನು ತಂದು ಕೊಟ್ಟರೆ ಆ ಐದುಜನರಲ್ಲಿ ಪ್ರತಿಯೊಬ್ಬನಿಗೂ ಲಕ್ಷ ವರಹಗಳನ್ನು ಕೊಡುವುದಾಗಿ ಹೇಳಿದನು. ಅವರು ಅದಕ್ಕೆ ಒಪ್ಪಿ, ರಾತ್ರಿ ಎರಡುಘಂಟೆಯ ವೇಳೆಯಲ್ಲಿ ಡಿಮಾಸ್ತನೀಸನ ಮನೆಗೆ ಹೋಗಿ ಬಾಗಿಲುತಟ್ಟಿದರು. ಅವನೇ

ಒಂದು ಬಾಗಿಲು ತೆಗೆದು, ಬಂದುದಕ್ಕೆ ಕಾರಣವನ್ನು ಕೇಳಿದನು. “ನಿನ್ನ ಶಿರಸ್ಸನ್ನು ಛೇದಿಸಿ ತೆಗೆದುಕೊಂಡು ಹೋಗುವುದಕ್ಕೋಸ್ಕರ ಬಂದಿದ್ದೇವೆ” ಎಂದು ಅವರು ಹೇಳಿದರು. ಆಗ ಅವನು “ನನ್ನ ಶಿರಸ್ಸನ್ನು ಛೇದಿಸಿ ತೆಗೆದುಕೊಂಡು ಹೋಗುವುದರಿಂದ ಯಾರಿಗೆ ಪ್ರಯೋಜನವಾದಾಗ್ಯೂ, ಆ ಕೆಲಸವನ್ನು ಮಾಡಬಹುದು; ನಾನು ಸಿದ್ಧನಾಗಿದ್ದೇನೆ. ಇಲ್ಲಿ ಈ ಕೆಲಸವನ್ನು ಮಾಡುವುದಕ್ಕಿಂತ, ಬೇರೆಯ ಕಡೆಯಲ್ಲಿ ಮಾಡುವುದು ಉತ್ತಮ. ನನ್ನ ಜನಗಳಿಗೆ ಎಚ್ಚರವಾದರೆ, ನಿಮ್ಮ ಪರಿಣಾಮವಾಗುವುದು ಕಷ್ಟ. ನಿಮ್ಮ ಜತೆಯಲ್ಲಿ ನಾನೇ ಬರುತ್ತೇನೆ, ನಿರ್ಮಾನುಷವಾದ ಪ್ರದೇಶದಲ್ಲಿ ನನ್ನ ತಲೆಯನ್ನು ಕತ್ತರಿಸಿ ತೆಗೆದುಕೊಂಡು ಹೋಗಬಹುದು” ಎಂದು ಹೇಳಿದನು. ಅದಕ್ಕೆ ಅವರು ಒಪ್ಪಿ, ಶಿಬಿರದ ಸಮೀಪದಲ್ಲಿದ್ದ ಒಂದು ಕಾಡಿಗೆ ಇವನನ್ನು ಕರೆದುಕೊಂಡು ಹೋದರು. ಅಲ್ಲಿ ಡಿಮಾಸ್ತನೀಸನು “ಶಿರಚ್ಛೇದನವನ್ನು ಮಾಡಿಸಿಕೊಳ್ಳುವುದಕ್ಕೆ ನಾನು ಸಿದ್ಧನಾಗಿದ್ದೇನೆ. ಆದರೆ, ನನ್ನನ್ನು ಎಲ್ಲರೂ ಬಹಳ ತಿಳಿದವನೆಂದು ಹೇಳುತ್ತಾರೆ. ನಾನು ಸಾಯುವುದಕ್ಕೆ ಮುಂಚೆ ನನ್ನಿಂದ ಯಾವುದಾದರೊಂದು ಹಿತೋಪದೇಶವನ್ನು ಮಾಡಿಸಿಕೊಳ್ಳುವುದಕ್ಕೆ ನಿಮಗಿಷ್ಟವಿದ್ದರೆ, ಒಂದು ಪನ್ಯಾಸಪೂರ್ವಕವಾಗಿ ನಿಮಗೆ ಹಿತೋಪದೇಶಮಾಡುತ್ತೇನೆ” ಎಂದು ಹೇಳಿದನು. ಆಪಕ್ಕವರು, ಎರಡನೆಯ ಫಿಲಿಪ್ಪನು ಕೊಟ್ಟಿರುವ ಆಜ್ಞೆಯನ್ನೂ, ಅವನ ಶಿರಸ್ಸನ್ನು ತೆಗೆದುಕೊಂಡು ಹೋಗಿ ಕೊಡುವುದರಿಂದ ತಮ್ಮಲ್ಲಿ ಪ್ರತಿಯೊಬ್ಬನಿಗೂ ಬರತಕ್ಕ ಪ್ರತಿಫಲದ ವಿಷಯವನ್ನೂ ಅವನಿಗೆ ತಿಳಿಯಿಸಿ, ಆಮೇಲೆ ಉಪನ್ಯಾಸಮಾಡುವುದಕ್ಕೆ ಅಪ್ಪಣೆಯನ್ನು ಕೊಟ್ಟರು.

ಅನಂತರ ಅವನು, ಮನುಷ್ಯನ ಕರ್ತವ್ಯವನ್ನೂ, ಇಷ್ಟಾರ್ಥಗಳ ಸ್ವಭಾವಗಳನ್ನೂ, ಧರ್ಮಾಧರ್ಮಗಳ ಸ್ವರೂಪವನ್ನೂ, ಧರ್ಮಪ್ರವರ್ತನದಿಂದುಂಟಾಗತಕ್ಕ ಪ್ರಯೋಜನಗಳನ್ನೂ, ಅಧರ್ಮಪ್ರವರ್ತನದಿಂದುಂಟಾಗತಕ್ಕ ಅನರ್ಥಗಳನ್ನೂ, ತನ್ನ ಶಕ್ತಿಯನ್ನೆಲ್ಲ ಬಿಟ್ಟು ಗಟ್ಟಿಯಾಗಿ ಹೇಳುವುದಕ್ಕುಪಕ್ರಮಿಸಿದನು. ಇವನ ಉಪನ್ಯಾಸದ ಶಬ್ದವನ್ನು ಕೇಳಿ, ಶಿಬಿರದಿಂದ ಒಬ್ಬೊಬ್ಬರಾಗಿ ಬರುವುದಕ್ಕುಪಕ್ರಮವಾಯಿತು. ಇವನ ವಾಜ್ಮಾಧುರ್ಯದಿಂದ ಪರವಶರಾದ ಆ ಕಟುಗರು, ಏಕಾಗ್ರಚಿತ್ತರಾಗಿ ಅವನ ಧರ್ಮೋಪದೇಶವನ್ನು ಕೇಳುತ್ತಿದ್ದರು. ಬೆಳಗ್ಗೆ ಏಳುಘಂಟೆಯುವರೆಗೂ ಉಪನ್ಯಾಸ ನಡೆಯಿತು. ಇಷ್ಟರೊಳಗಾಗಿ, ಲಕ್ಷಾಂತರ ಜನ ಯೋಧರು ಬಂದು ಸೇರಿದರು. ಆಗ ಉಪನ್ಯಾಸವನ್ನು ಉಪಸಂಹರಿಸಿ, ಆ ಕಟುಗರನ್ನು ಕುರಿತು, ಈಗ ನನ್ನ ಶಿರಶ್ಛೇದವನ್ನು ಮಾಡಿ ನೀವು ಪ್ರತಿಯೊಬ್ಬರೂ ಎರಡನೆಯ ಫಿಲಿಪ್ಪನಿಂದ ಕೊಡಲ್ಪಡತಕ್ಕ ಬಹುಮಾನವನ್ನು ಹೊಂದಬಹುದೆಂದು, ಡಿಮಾಸ್ತನೀಸನು ಹೇಳಿದನು. ಅವರು ಭಯಭ್ರಾಂತರಾಗಿ ಓಡಿಹೋಗುವುದಕ್ಕುಪಕ್ರಮಿಸಿದರು. ಅಲ್ಲಿನ ಯೋಧರು, ಇವರನ್ನು ಹಿಡಿದು ವಿಚಾರಣೆಮಾಡಿ, ನಡೆದ ವಿದ್ಯಮಾನಗಳು ಗೊತ್ತಾದಕೂಡಲೆ, ಅಲ್ಲಿಯೇ ಆ ಐದುಜನಗಳಿಗೂ ಶಿರಶ್ಛೇದನವನ್ನು ಮಾಡಿ, ಚಕ್ರವರ್ತಿಯಾದ ಎರಡನೆಯ ಫಿಲಿಪ್ಪನನ್ನು ಹಿಡಿದುತಂದು ಡಿಮಾಸ್ತನೀಸನಿಗೆ ಬದುಲಾಗಿ ಅವನ ಶಿರಶ್ಛೇದವನ್ನು ಮಾಡಬೇಕೆಂದು ಅರಮನೆಯ ಕಡೆಗೆ ಹೊರಡಲಾಗಿ, ಚಕ್ರವರ್ತಿಯಾದ ಫಿಲಿಪ್ಪನು, ರಾಜಧಾನಿಯನ್ನು ಬಿಟ್ಟು ಓಡಿಹೋದನು. ಈ ಅದ್ಭುತವಾದ ವಾಜ್ಮಾಧುರ್ಯಶಕ್ತಿಯು ಡಿಮಾಸ್ತನೀಸನಿಗೆ ಹೇಗೆ ಬಂದಿತೋ-ಅದನ್ನು ತಿಳಿದುಕೊಳ್ಳುವುದು, ವಿದ್ಯಾರ್ಥಿಗಳಿಗೆ ಆವಶ್ಯಕವಾದುದು.

ಡಿಮಾಸ್ತನೀಸನು ಚಿಕ್ಕವನಾಗಿದ್ದಾಗ, ಇವನಿಗೆ ಪಿತೃವಿಯೋಗವಾಯಿತು. ಇವನ ಚಿಕ್ಕಪ್ಪನು, ಇವನ ಪಿತ್ರಾರ್ಜಿತವನ್ನೆಲ್ಲ ಅಪಹರಿಸಿದನು. ಇವನಿಗೆ ಅನ್ನಕ್ಕಿಲ್ಲದೆ ಹೋಯಿತು. ಚಿಕ್ಕಪ್ಪನಮೇಲೆ ನ್ಯಾಯಸ್ಥಾನದಲ್ಲಿ ವ್ಯವಹಾರಮಾಡಿದನು. ಆಗ ಇವನ ಚಿಕ್ಕಪ್ಪನು, ಸಮರ್ಥರಾದ ಲಾಯರುಗಳನ್ನಿಟ್ಟು, ಸಾಕ್ಷಿಗಳನ್ನು ಸೃಷ್ಟಿಮಾಡಿ, ಆಸ್ತಿಯೆಲ್ಲ ತನ್ನದೆಂದು ಸ್ಥಾಪಿಸಿಕೊಂಡನು. ಡಿಮಾಸ್ತನೀಸನಿಗೆ ಧಾರಾಳವಾಗಿ ಮಾತನಾಡುವುದಕ್ಕೂ ಆಗುತ್ತಿರಲಿಲ್ಲ. ನೆತ್ತಿಯ ಬಾಧೆ ಬಹಳವಾಗಿತ್ತು. ನ್ಯಾಯಾಧಿಪತಿಯು, ಇವನ ಚಿಕ್ಕಪ್ಪನು ಹೇಳುವುದೇ ನ್ಯಾಯವಾಗಿರಬಹುದೆಂದು ನಂಬಿ, ಆತನಪಕ್ಷವಾಗಿ ಫೈಸಲುಕೊಟ್ಟನು, ಆಗ ಡಿಮಾಸ್ತನೀಸನು ಒಬ್ಬ ದೊಡ್ಡ ಡಾಕ್ಟರನ್ನು ನೋಡಿ "ಈ ನೆತ್ತಿಗೆ ಚಿಕಿತ್ಸೆಯುಂಟೆ?" ಎಂದು ಕೇಳಿದನು. ಅವನು, ಸಣ್ಣ ಸಣ್ಣ ಕಲ್ಲುಗಳನ್ನು ಚೆನ್ನಾಗಿ ತೊಳೆದು ಬಾಯೊಳಗೆ ಹಾಕಿಕೊಂಡು ಗಟ್ಟಿಯಾಗಿ ಕೂಗುತ್ತ ಓಡಾಡಿದರೆ ಐದಾರು ತಿಂಗಳುಗಳಲ್ಲಿ ನೆತ್ತಿಯ ಬಾಧೆಗೆ ಕಾರಣವಾದ ಕೆಲವು ನರಗಳು ಸಡಿಲವಾಗುತ್ತವೆಂಬುದಾಗಿಯೂ, ಅನಂತರ ಧಾರಾಳವಾಗಿ ಮಾತನಾಡಬಹುದೆಂಬುದಾಗಿಯೂ ಹೇಳಿದನು. ಡಿಮಾಸ್ತನೀಸನು, ಮಾರನೆಯ ದಿವಸದಿಂದಲೇ, ಬೆಳಗ್ಗೆ ನಾಲ್ಕು ಘಂಟೆಗೆದ್ದು, ಕಲ್ಲುಗಳನ್ನು ಬಾಯಲ್ಲಿ ಹಾಕಿಕೊಂಡು, ಸಮುದ್ರತೀರದಲ್ಲಿ ಒಂದೆರಡು ಘಂಟೆಗಳ ವರೆಗೂ ಕೂಗುತ್ತಾ ಓಡುತ್ತಾ ಬಂದನು. ನಾಲ್ಕೈದು ತಿಂಗಳುಗಳಲ್ಲಿ, ನೆತ್ತಿಯ ಬಾಧೆ ನಿಂತುಹೋಯಿತು; ಧಾರಾಳವಾಗಿ ಮಾತನಾಡತಕ್ಕ ಶಕ್ತಿಯೂ ಬಂದಿತು. ಅನಂತರ, ಈ ಡಿಮಾಸ್ತನೀಸನು ಪ್ರಸಂಗಮಾಡುವುದಕ್ಕುಪಕ್ರಮಿಸಿ,

ಗದ್ಯ ಪದ್ಯಾತ್ಮಕವಾದ ಅನೇಕ ಗ್ರಂಥಗಳನ್ನು ವಾಚೋವಿಧೇಯವಾಗು ವಂತೆ ವ್ಯಾಸಂಗಮಾಡಿ, ಧರ್ಮಸೂಕ್ಷ್ಮಗಳನ್ನು ತಿಳಿದುಕೊಂಡನು. ಹೀಗೆ ವ್ಯಾಸಂಗಮಾಡತಕ್ಕ ಕಾಲದಲ್ಲಿ, ಒಂದು ನೆಲಮಾಳಿಗೆಯನ್ನು ಮಾಡಿ ಕೊಂಡು, ತಾನಿರುವ ಸ್ಥಳವು ಯಾರಿಗೂ ಗೊತ್ತಾಗದಂತೆ ಏರ್ಪಡಿಸಿ, ತಲೆಯಲ್ಲಿಯೂ ಮುಖದಲ್ಲಿಯೂ ಒಂದು ಭಾಗ ಮಾತ್ರ ಕ್ಷೌರಮಾಡಿ ಕೊಂಡು, ಮತ್ತೊಂದು ಭಾಗದಲ್ಲಿ ಕೂದಲುಗಳನ್ನು ಬೆಳೆಯಿಸಿಕೊಂಡಿ ದ್ದನು ಹೀಗೆ ಮಾಡಿಕೊಳ್ಳುವುದಕ್ಕೆ ಕಾರಣವನ್ನು ಅವನೇ ಬರೆದಿರು ವನು. ಅವನು ಹೇಳಿರುವುದೇನೆಂದರೆ:—

ವ್ಯಾಸಂಗಮಾಡತಕ್ಕವರಿಗೆ, ಸ್ನೇಹಿತರೂ ಪರಿಚಿತರೂ ಇರಕೂಡದು. ಏಕಾಗ್ರಚಿತ್ತದಿಂದ ಓದುವುದಕ್ಕೆ ಅವಕಾಶವಿರಬೇಕು. ಅಂಥ ಅವಕಾಶ ವಿದ್ದಾಗ್ಯೂ, ಬಂಧುಮಿತ್ರರನ್ನು ನೋಡಬೇಕೆಂಬ ಅಭಿಲಾಷೆ ಬರುವು ದುಂಟು. ಇಂಥ ಅಭಿಲಾಷೆ ನೆರವೇರದಿರಲೆಂದು, ವಿರೂಪವಾಗಿ ಕ್ಷೌರ ಮಾಡಿಕೊಂಡು, ವಿಷಯಾಂತರಗಳಿಗೆ ಮನಸ್ಸನ್ನು ಕೊಡದೆ, ನಾನು ಮೂರು ವರುಷಗಳು ವ್ಯಾಸಂಗಮಾಡಿದೆನು. ಈ ಮೂರು ವರುಷಗಳಲ್ಲಿ, ಸಕಲ ಶಾಸ್ತ್ರಗಳನ್ನೂ ಎಲ್ಲ ಕಾನೂನುಗಳನ್ನೂ ಓದಿದೆನು. ಮುವ್ವತ್ತು ವರು ಷಗಳಲ್ಲಿಯೂ ಅಸಾಧ್ಯವಾದಷ್ಟು ವ್ಯಾಸಂಗವು, ಈ ಯೇರ್ಪಾಡಿನಿಂದ ಮೂರು ವರುಷಗಳಲ್ಲಿ ಸಾಧ್ಯವಾಯಿತು.

ಈ ಡಿಮಾಸ್ತನೀಸನು, ಈ ರೀತಿಯಲ್ಲಿ ವ್ಯಾಸಂಗಮಾಡಿ, ಧರ್ಮಶಾಸ್ತ್ರ ಗಳಲ್ಲಿ ಅಸಾಧಾರಣವಾದ ಕೌಶಲ್ಯವನ್ನು ಹೊಂದಿ, ತನ್ನ ಚಿಕ್ಕಪ್ಪನ ಮೇಲೆ ತನ್ನ ಆಸ್ತಿಗೋಸ್ಕರ ಪುನಃ ವ್ಯವಹಾರಮಾಡಿ. ಅವನ ಕಡೆಯು

ಕಾಯುರುಗಳ ಇಂದ್ರಜಾಲ ಮಹೇಂದ್ರಜಾಲ ವಿದ್ಯೆಗಳನ್ನೆಲ್ಲ ಭೇದಿಸಿ, ಅವರ ಅಧರ್ಮವಾದಗಳನ್ನು ನ್ಯಾಯಾಧಿಪತಿಗೆ ತೋರಿಸಿ, ಕೊನೆಗೆ ತನ್ನ ಆಸ್ತಿಯನ್ನು ತಾನು ಪಡೆದನು. ಈ ರೀತಿಯಾಗಿ ಮೂರು ವರ್ಷ ತಪಸ್ಸು ಮಾಡಿದುದರಿಂದ, ಅವನ ಆಸ್ತಿಯು ಅವನಿಗೆ ದೊರೆತುದುದಲ್ಲದೆ, ಚಕ್ರವರ್ತಿಯೂ ಕೂಡ "ಈ ಪ್ರಪಂಚವನ್ನೆಲ್ಲ ಗೆಲ್ಲುವುದು ಕಷ್ಟವಲ್ಲ; ಶಿವಾಸ್ತ್ರಸೇನನನ್ನು ಗೆಲ್ಲುವುದು ಅಸಾಧ್ಯ." ಎಂದು ಹೇಳುವ ಸ್ಥಿತಿಗೆ ಬಂದನು.

ಈ ಮೂರು ಜನಗಳ ಚರಿತ್ರೆಗಳನ್ನೂ ಪರಿಶೀಲಿಸಿ, ವಿದ್ಯಾರ್ಥಿಗಳು, ವ್ಯಾಸಂಗಮಾಡುವುದರಲ್ಲಿ ಯಾವರೀತಿಯಾದ ತಪಸ್ಸು ಅವಶ್ಯಕವೋ-ಅದನ್ನು ಗೊತ್ತುಮಾಡಿಕೊಂಡು, ಅದನ್ನು ಆಚರಣೆಗೆ ತಂದುಕೊಳ್ಳುವುದು ಮುಖ್ಯ ಕರ್ತವ್ಯವು. ಈ ವಿಷಯಕ್ಕೆ ವಿದ್ಯಾರ್ಥಿಗಳ ಗಮನವು ಕೊಡಲ್ಪಟ್ಟ ಹೊರತು, ಅವರಿಗೆ ಶ್ರೇಯಸ್ಸುಂಟಾಗುವುದಿಲ್ಲ.

ಹಿಡಿದ ಕೆಲಸಗಳು ಸಮರ್ಪಕವಾಗಿ ನಡೆಯಬೇಕಾದರೆ, ಆ ಕೆಲಸಗಳ ಮರ್ಮಗಳನ್ನು ತಿಳಿದುಕೊಂಡು, ಏಕಾಗ್ರಚಿತ್ತದಿಂದ ಆ ಕೆಲಸವನ್ನು ಮಾಡಬೇಕು. ಅಂತಹ ಕೆಲಸವನ್ನು ಮಾಡುವುದರಲ್ಲಿ, ನಿಮಿಷಾರ್ಧದೊಳಗಾಗಿ ಫಲವಾಗಬೇಕೆಂದು ಅಪೇಕ್ಷಿಸಬಾರದು. ಗೊಡ್ಡಿಯಾದವಳಿಗೆ ಅಶ್ವತ್ಥಪ್ರದಕ್ಷಿಣದಿಂದ ಪುತ್ರಸಂತಾನವಾಗುವುದೆಂದು ಹೇಳಲ್ಪಟ್ಟಿರುವುದು. ಒಂದು ಪ್ರದಕ್ಷಿಣವನ್ನು ಮಾಡಿದ ಕೂಡಲೇ, ಗರ್ಭೋತ್ಪತ್ತಿಯಾಯಿತೇ ಇಲ್ಲವೇ ಎಂದು ಹೊಟ್ಟೆಯನ್ನು ಮುಟ್ಟಿ ನೋಡಿಕೊಂಡರೆ, ಅವಳು ಪರಿಹಾಸಕ್ಕೆ ಗುರಿಯಾಗುವಳಲ್ಲವೆ! ಗೊಡ್ಡಿಯರಿಗೆ ಗರ್ಭಕೋಶವು ತಲೆಕೆಳ

ಗಾಗಿರುವುದು. ಅವರು ಪ್ರತಿದಿನವೂ ಸ್ನಾನವನ್ನು ಮಾಡಿ ಪ್ರದಕ್ಷಿಣ ಮಾಡಿ ನೂರೆಂಟಾವೃತ್ತಿ ನಮಸ್ಕಾರ ಮಾಡಿದರೆ, ಆ ತಲೆಕೆಳಗಾಗಿರುವ ಗರ್ಭಕೋಶವು, ಈ ನಮಸ್ಕಾರಾದಿಗಳಿಂದ ಉಂಟಾಗತಕ್ಕ ಚಲನದಿಂದ ಕೊಂಚಕೊಂಚವಾಗಿ ನೆಟ್ಟಗಾಗುವುದಕ್ಕುಪಕ್ರಮಿಸುವುದು. ನಾಲ್ವತ್ತು ದಿನಗಳು ಕಳೆದ ಬಳಿಕ ಮೂರುದಿನಗಳೊಳಗಾಗಿ ಅದು ನೆಟ್ಟಗಾಗುವುದು. ತರುವಾಯ ಆ ಕೋಶವು ಗರ್ಭವನ್ನು ಧರಿಸುವ ಸನ್ನಿವೇಶಕ್ಕೆ ಬರುವುದು. ಅದುವರೆಗೂ ಸಹನವಿಲ್ಲದಿದ್ದರೆ, ಅವರು ಭಗ್ನಮನೋರಥರಾಗುವರಲ್ಲವೆ!

ಪ್ರೊಫೇಸರ್ ರಾಮಮೂರ್ತಿ ಮೊದಲಾದ ಜನಗಳು, ಚಿಕ್ಕ ಆನೆಯನ್ನು ಕೂಡ ಎತ್ತುವರು. ಆನೆಯನ್ನು ಎತ್ತತಕ್ಕವರು, ಆನೆಯ ಮರಿಯನ್ನು ಎತ್ತುವುದಕ್ಕೆ ಮೊದಲು ಪ್ರಯತ್ನಮಾಡಿ, ಕೊಂಚಕೊಂಚವಾಗಿ ಅಭ್ಯಾಸಮಾಡುತಬರಬೇಕು. ಪರ್ವತಾಗ್ರಕ್ಕೆ ಹೋಗಲು ಅಭಿಲಾಷೆಯುಳ್ಳವರು, ಒಂದೊಂದು ಮೆಟ್ಟಲಾಗಿ ಹತ್ತಬೇಕು. ವಿದ್ಯುಚ್ಛಕ್ತಿಯ ಮಹಿಮೆಯನ್ನು ಕಂಡುಹಿಡಿದ ಫ್ರಾಂಕ್ಲಿನ್ನನು, ನಿಮಿಷಾರ್ಧದಲ್ಲಿ ದಿಗಂತವಿಶ್ರಾಂತವಾದ ಕೀರ್ತಿಯನ್ನು ಹೊಂದಲಿಲ್ಲ. ಅನೇಕ ವರುಷಗಳು, ಹಗಲೂ ರಾತ್ರಿಯೂ ಕೆಲಸಮಾಡಿ, ಕೋಟ್ಯಂತರ ಜನಗಳು ಮಾಡತಕ್ಕ ಕೆಲಸವನ್ನು ಯಾವ ಶಕ್ತಿಯಿಂದ ಈಗ ಮಾಡಿಸುತ್ತಲಿರುವರೋ-ಅಂಥ ವಿದ್ಯುಚ್ಛಕ್ತಿಯನ್ನು ಕಂಡು ಹಿಡಿದು, ಚಕ್ರವರ್ತಿಗಳಿಗೂ ಲಭ್ಯವಲ್ಲದ ಕೀರ್ತಿಯನ್ನು ಹೊಂದಿದನು. ಅವನು ಅಹೋರಾತ್ರಿಯಲ್ಲಿಯೂ ಸಾವಧಾನವಾಗಿಯೂ ಆತುರವಿಲ್ಲದೆಯೂ ಕೆಲಸಮಾಡದೆ ಇದ್ದಿದ್ದರೆ, ಅವನಿಗೆ ಇಂಥ

ಅಸಾಧಾರಣವಾದ ಯಶಸ್ಸು ಬರುತಿದ್ದಿತೇ? ನ್ಯೂಟನ್ ಎಂಬ ಗಣಿತ ಶಾಸ್ತ್ರಜ್ಞನು ಆ ಶಾಸ್ತ್ರದಲ್ಲಿ ರಚಿಸಿರತಕ್ಕ ಗ್ರಂಥಗಳನ್ನು ನೋಡೋಣ. ಅವನಿಗೆ ಅಸಾಧಾರಣವಾದ ಸಹನವಿಲ್ಲದಿದ್ದರೆ, ಅವನು ಮಾಡಿರತಕ್ಕ ಅದ್ಭುತವಾದ ಶೋಧನೆಗಳು ಮಾಡಲ್ಪಡುತ್ತಲಿರಲಿಲ್ಲ; ಅವನು ರಚಿಸಿರ ತಕ್ಕ ಗ್ರಂಥಗಳೂ ರಚಿಸಲ್ಪಡುತ್ತಲಿರಲಿಲ್ಲ. ಅವನು, ಪ್ರತಿದಿನವೂ ಹದಿ ನೈದು ಹದಿನಾರು ಘಂಟೆಗಳಿಗೆ ಕಡಮೆಯಿಲ್ಲದೆ, ಇಪ್ಪತ್ತಾರು ವರುಷ ಗಳು ಕಷ್ಟಪಟ್ಟು ತುಂಬ ಯೋಚಿಸಿ, ಅನೇಕ ಗ್ರಂಥಗಳನ್ನು ಬರೆದನು. ಒಂದು ದಿನ, ಬೇಸರಾದುದರಿಂದ ಮೇಣದ ಬತ್ತಿಯ ದೀಪವನ್ನು ಮೇಜಿನ ಮೇಲೆ ಇಟ್ಟು ಗಾಳಿಸವಾರಿಗೆ ಹೊರಟುಹೋದನು. "ಡೈಮೆಂಡ್" ಎಂಬ ಅವನ ನಾಯಿಯು, ಅದನ್ನು ಉರುಳಿಸಿಬಿಟ್ಟಿತು. ಅವನು ಹಿಂದಿರುಗಿ ಬರುವುದರೊಳಗಾಗಿ, ಇಪ್ಪತ್ತಾರು ವರುಷದಿಂದ ಬರೆದಿದ್ದ ಗ್ರಂಥಗಳೆಲ್ಲ ಸುಟ್ಟುಹೋಗಿದ್ದುವು. ಆ ನಾಯಿಯು, ತಾನು ಮಾಡಿದ ಅನರ್ಥವನ್ನು ಅವನಿಗೆ ತಿಳಿಯಿಸುವುದಕ್ಕೋಸ್ಕರ ಹೋಗಿ, ಅವನನ್ನು ಮುಂದಕ್ಕೆ ಬಿಡದೆ, ಹಿಂದಿರುಗಿ ಕರೆದುಕೊಂಡು ಬಂದಿತು ಎಲ್ಲ ಗ್ರಂಥಗಳೂ ಸುಟ್ಟುಹೋಗಿ ರುವುದನ್ನು ನೋಡಿ, ಅನಿರ್ವಚನೀಯವಾದ ವಿಷಾದವನ್ನು ಹೊಂದಿ "ಅಯ್ಯೋ! ಪ್ರಾಣೀ! ನೀನು ಮಾಡಿದ ನಷ್ಟವೆಷ್ಟೆಂಬುದನ್ನು ನೀನ ರಿಯೆ!" ಎಂದು ಹೇಳಿ, ಪುನಃ ಕೆಲಸಕ್ಕೆ ಉಪಕ್ರಮಿಸಿ, ವಿಶೇಷವಾಗಿ ವ್ಯವಸಾಯ ಮಾಡಿ, ಆ ಗ್ರಂಥಗಳನ್ನೆಲ್ಲ ಮತ್ತೆ ಬರೆದನು. ಇಂತಹ ಸಹನಶೀಲರಾದ ಮಹಾನುಭಾವರುಗಳು ಅನೇಕರಿರುತ್ತಾರೆ. ಪ್ರಪಂಚದ ಅಭ್ಯುದಯಕ್ಕೆ ಇವರೇ ಕಾರಣಭೂತರು. ಏಕಾಗ್ರಚಿತ್ತದಿಂದ ಕೆಲಸವೂ

ಡುವ ಶಕ್ತಿಯೂ ಸಹನವೂ ಸಂಪಾದಿಸಿಕೊಳ್ಳಲ್ಪಡದಿದ್ದರೆ, ಯಾವ ಕೆಲಸವೂ ತೃಪ್ತಿಕರವಾಗಿ ನೆರವೇರುವುದಿಲ್ಲ.

ವೃದ್ಧಿಗೆ ಬರಬೇಕೆಂದು ಅಪೇಕ್ಷೆಯುಳ್ಳವರು, ಕೆಲಸಮಾಡುವುದಕ್ಕೆ ಮುಂಚೆ, ಸಾವಧಾನವಾಗಿ, ತಾವು ಮಾಡಬೇಕಾದ ಕೆಲಸದ ಪೂರ್ವಾಪರಗಳನ್ನು ಪರ್ಯಾಲೋಚಿಸಬೇಕು. ಅನಂತರ ಆ ಕೆಲಸವನ್ನು ಮಾಡುವುದಕ್ಕುಪಕ್ರಮಿಸಬೇಕು. ಯಾವ ಕೆಲಸವೂ, ಉಪಕ್ರಮದಲ್ಲಿಯೇ ಚೆನ್ನಾಗಿ ಮಾಡುವುದಕ್ಕಾಗುವುದಿಲ್ಲ. ಲೇಖಕರೂ ಕೂಡ, ಪ್ರಥಮತಃ ವಕ್ರವಾಗಿ ಬರೆಯುತ್ತಾರೆ. ಯಾರು ಆತುರಪಡದೆ ಅವಿಚ್ಛಿನ್ನವಾಗಿ ಬೆರಳುಗಳಿಗೆ ಚೆನ್ನಾಗಿ ಬರೆಯುವುದನ್ನು ಕ್ರಮೇಣ ಅಭ್ಯಾಸಮಾಡಿಸುತ್ತಾರೆಯೋ, ಅವರ ಅಕ್ಷರಗಳು ಪರಿಣಾಮದಲ್ಲಿ ಮುಕ್ತಾಫಲಗಳಂತಾಗುವುವು. ಹಾಗಾಗಬೇಕಾದರೆ, ಅನೇಕ ದಿವಸಗಳ ವರೆಗೂ ಒಳ್ಳೆಯ ಅಕ್ಷರಗಳನ್ನು ನೋಡುತ್ತ, ಅವುಗಳಂತೆ ಬರೆಯುವ ಪ್ರಯತ್ನವನ್ನು ಮಾಡುತ್ತ ಬರಬೇಕು. ಕೆಲಸ ನಡೆಯಬೇಕೆಂದು, ಮನಸ್ಸಿಗೆ ಬಂದಹಾಗೆಲ್ಲ ಗೀಚಬಾರದು. ಸ್ವಲ್ಪ ಸಾವಕಾಶವಾದಾಗ್ಯೂ ಚಿಂತೆಯಿಲ್ಲವೆಂಬುದಾಗಿಯೂ, ಲಕ್ಷಣವಾಗಿ ಬರೆಯುವುದೇ ಮುಖ್ಯೋದ್ದೇಶವೆಂಬುದಾಗಿಯೂ ತಿಳಿದುಕೊಂಡು, ಕೆಲಸಮಾಡಬೇಕು. ಬರೆಯುವುದರಲ್ಲಿ ಮಾತ್ರವೇ ಈ ಶ್ರದ್ಧೆಯಿರಬೇಕೆಂದರ್ಥವಲ್ಲ; ಯಾವ ಕೆಲಸ ಚೆನ್ನಾಗಿ ಮಾಡಲ್ಪಡಬೇಕಾದರೂ, ಆಲೋಚನೆಯೂ, ಪೂರ್ವಾಪರಜ್ಞಾನವೂ, ಸಾವಧಾನದಿಂದ ಕೆಲಸಮಾಡುವಸ್ತು ಸಹನವೂ ಬರಬೇಕು. ಒಂದು ಕೆಲಸವನ್ನು ಮಾಡತಕ್ಕವರು, ಅದೇ ಕೆಲಸವನ್ನು ಇತರರು ಹೇಗೆ ಮಾಡಿರುವರೋ ಅದನ್ನು ನೋಡು

ಸಂಕ್ತಿಯಾಗಿಟ್ಟುಕೊಳ್ಳುವುದುಂಟು. ಆದರೆ, ಈ ಮೇಲುಪಂಕ್ತಿಗಳಲ್ಲಿ ಗುಣಗಳನ್ನೂ ನ್ಯೂನಾತಿರಿಕ್ತಗಳನ್ನೂ ಹೇಗೆ ಬಿಡಬೇಕೋ, ಅದನ್ನು ಕಲಿತುಕೊಳ್ಳಬೇಕು. ಮೇಲುಸಂಕ್ತಿಯನ್ನು ಹಾಕತಕ್ಕ ತಾಯಿತಂದೆಗಳು, ಈ ವಿಷಯದಲ್ಲಿ ವಿದ್ಯಾರ್ಥಿಗಳಿಗೆ ಸಹಾಯ ಮಾಡಬೇಕು. ಪಾಠಕರೂ ತಾಯಿತಂದೆಗಳೂ ಮಾಡುವ ಅವಿವೇಕದಿಂದಲೂ, ಅವರ ಅಜ್ಞಾನದಿಂದಲೂ, ಅನರ್ಥಗಳಿಗೆ ಅವಕಾಶವಾಗುವುದುಂಟು.

ಅಲಗ್ಸಾಂಡರ್ ದಿ ಗ್ರೇಟ್ ಎಂಬವನಿಗೆ, ಅವನ ಉಪಾಧ್ಯಾಯನಾದ ಲಿಸಿಮೇಕಸ್ ಎಂಬವನು, ಮಹಾಶೂರನಾದ ಎಕಲಿಸ್ ಎಂಬವನು ತನ್ನ ಶತ್ರುವನ್ನು ತನ್ನ ರಥಕ್ಕೆ ಕಟ್ಟಿ ಎಳೆದುಕೊಂಡುಹೋದ ವಿಷಯವನ್ನೂ ತಿಳಿಯಿಸಿದ್ದನು. ಅಲೆಗ್ಸಾಂಡರನು, ತನ್ನ ಕಾಲದಲ್ಲಿ ಗೊತ್ತಾಗಿದ್ದ ದೇಶಗಳನ್ನೆಲ್ಲ ಜಯಿಸುವಾಗ್ಗೆ, ತನ್ನಿಂದ ಸೋತುಹೋದ ಒಂದು ಪಟ್ಟಣದ ಒಬ್ಬ ಪ್ರಭುವನ್ನು ತನ್ನ ರಥಕ್ಕೆ ಕಟ್ಟಿಸಿ ಬೀದಿಯಲ್ಲಿ ಎಳೆಯಿಸಿದನು. ಬ್ರಿಟಿಷ್ ಜನರು, ತಮ್ಮ ದೊರೆಗಳಲ್ಲಿ ಧರ್ಮವನ್ನುಲ್ಲಂಘಿಸಿದ ಚಾರಲ್ಸ್ ದಿ ಫಸ್ಟ್ ಎಂಬ ದೊರೆಯ ಶಿರಸ್ಸನ್ನು ಛೇದಿಸಿದರು. ಇವರ ಮೇಲುಪಂಕ್ತಿಯನ್ನನುಸರಿಸಿ, ಲೂಯಿ ದಿ ಸಿಕ್ಸ್ಟೀನ್ ಎಂಬ ದೊರೆಯನ್ನು, ಫ್ರೆಂಚುಜನಗಳು ಗಲ್ಲಿಗೆ ಹಾಕಿದರು. ಜನಗಳು ಮಾತ್ರವೇ ಅಲ್ಲದೆ, ಜನಾಂಗಗಳು ಕೂಡ, ತಾವನುಸರಿಸುವ ಮೇಲುಪಂಕ್ತಿಗಳಲ್ಲಿ ಗುಣಾಂಶಗಳನ್ನು ಬಿಟ್ಟು ದುರ್ಗುಣಗಳನ್ನನುಸರಿಸುತ್ತಾರೆ. ಜಾನ್ಸನ್ ಎಂಬವನು, ಇಂಗ್ಲೀಷು ಬರೆಯುವುದರಲ್ಲಿ ಅತ್ಯಂತ ವಾಗ್ವಿಜೃಂಭಣೆಯುಳ್ಳವನು. ಅನೇಕರು ಅವನ ಶಬ್ದಾಡಂಬರವನ್ನು ಕಲಿತುಕೊಂಡು, ತಾವೂ ಅವನಂತೆ

ಪಂಡಿತರೆಂದು ಅಭಿನಯಿಸುವರು. ಅವನ ಸಾರಾಸಾರ ವಿಚಾರವನ್ನೂ ಅವನ ಪೂರ್ವಾಪರಜ್ಞಾನವನ್ನೂ ಅನುಸರಿಸುವುದು ಅಪೂರ್ವವಾಗಿದೆ ಬೈರನ್ ಎಂಬ ಇಂಗ್ಲೀಷ್‌ಮಹಾಕವಿಯು, ಇಂಗ್ಲಿಷ್‌ಕವಿತ್ವವನ್ನು ಬಹಳ ಚೆನ್ನಾಗಿ ಬರೆದಿದ್ದಾನೆ ಇವನ ಕವಿತಾಶಕ್ತಿಯಿಂದ, ಪ್ರಪಂಚಕ್ಕೆ ಎಷ್ಟೋ ಉಪಕಾರವಾಗಿರುವುದು. ಆದರೆ, ಇವನು, ಶೃಂಗಾರಚೇಷ್ಟೆಗಳನ್ನು ವರ್ಣಿಸುವುದಲ್ಲಿಯೂ, ಪರಸ್ತ್ರೀಯರನ್ನು ಕೆಡಿಸುವುದರಲ್ಲಿಯೂ ನಿಸ್ಸೀಮ ನಾಗಿದ್ದನು. ಇವನ ಗ್ರಂಥಗಳಲ್ಲಿರತಕ್ಕ ಗುಣಗಳು ಅವಲಂಬನೀಯವಾ ಗಿಯೂ, ದುರ್ಗುಣಗಳು ಪರಿತ್ಯಾಜ್ಯವಾಗಿಯೂ ಇರುವುವು. ಇವನನ್ನು ಮೇಲುಪಂಕ್ತಿಯಾಗಿಟ್ಟುಕೊಳ್ಳತಕ್ಕವರಲ್ಲಿ ಅನೇಕರು, ಇವನ ದೋಷ ಗಳನ್ನು ಮಾತ್ರ ಅನುಸರಿಸುವರು. ಇದು ತುಂಬ ಶೋಚನೀಯವಾದುದು. ಆಂಡ್ರೂವ್ಹುಲ್ಲರೆಂಬವನು, ರಹಿತ(ಒಕ್ಕಲಿಗ)ನಾಗಿದ್ದನು. ರಹಿತರು ಕೃಷಿ ಶಾಸ್ತ್ರವನ್ನೂ ವಿದ್ಯೆಯನ್ನೂ ಅಭ್ಯಾಸಮಾಡಿ ನ್ಯೂನಾತಿರಿಕ್ತಗಳನ್ನು ಮಾಡದೆ ಶಾಸ್ತ್ರವಿಧಿಗನುಸಾರವಾಗಿ ನಾನಾವಿಧವಾದ ಭೋಗ್ಯವಸ್ತುಗ ಳನ್ನು ಬೆಳೆಯುವುದಕ್ಕೆ ಹೇಗೆ ವ್ಯವಸಾಯಮಾಡಬೇಕೋ ಅದನ್ನೆಲ್ಲ ಪರಿಶೀಲಿಸಿ ತಿಳಿದುಕೊಳ್ಳುತ್ತ, ತಿಳಿದುಕೊಂಡುದುದನ್ನು ಅನುಷ್ಠಾನಕ್ಕೆ ತರುತ, ಪರಿಣಾಮದಲ್ಲಿ ಪ್ರಪಂಚಕ್ಕೆ ವಿಶೇಷವಾಗಿ ದವಸ ಮೊದಲಾದ ಆಹಾರಪದಾರ್ಥಗಳು ದೊರೆಯುವಂತೆಯೂ, ತಾನೂ ಆದರಿಂದ ಉಪ ಪನ್ನನಾಗುವಂತೆಯೂ ಮಾಡಿಕೊಂಡನು. ಫ್ರಾಂಕ್ಲಿನ್ನನು, ಬಾಲ್ಯದಲ್ಲಿ ಅನ್ನವಸ್ತ್ರಗಳಿಗೂ ಇಲ್ಲದೆ, ಅನಿರ್ವಚನೀಯವಾದ ಕ್ಲೇಶಗಳಿಗೆ ಗುರಿಯಾ ಗಿದ್ದನು. ಆದರೂ, ಒಂದು ಬಿಳಿಯ ಬ್ರೆಂಡಿನ ಬುಕ್ಕು, ಒಂದು ಕರಿಯ

ಬೈಂಡಿನ ಬುಕ್ಕು, ಇವೆರಡನ್ನೂ ಇಟ್ಟುಕೊಂಡು, ಹಾಸಿಗೆಯಿಂದ ಎದ್ದು ಮತ್ತೆ ಮಲಗುವವರೆಗೂ ಮನೋವಾಕ್ಕಾಯಗಳಲ್ಲಿ ಯಾವಯಾವ ವ್ಯಾಪಾರಗಳು ನಡೆಯುವುವೋ ಅವುಗಳಲ್ಲಿ ಒಳ್ಳೆಯದನ್ನು ಬಿಳಿಯ ಬೈಂಡಿನ ಬುಕ್ಕಿನಲ್ಲಿಯೂ ಕೆಟ್ಟುದುದನ್ನು ಕರಿಯ ಬೈಂಡಿನ ಬುಕ್ಕಿನಲ್ಲಿಯೂ ಬರೆಯುವುದಕ್ಕುಪಕ್ರಮಿಸಿದನು. ಮೊದಲಿನಲ್ಲಿ ಕರಿಯ ಬೈಂಡಿನ ಬುಕ್ಕಿನ ಬರವಣಿಗೆಯು ಬಹಳ ಹೆಚ್ಚಾಗಿದ್ದಿತು; ಬಿಳಿಯ ಬೈಂಡಿನ ಬುಕ್ಕಿನಲ್ಲಿ ಬರೆಯಲ್ಪಟ್ಟ ವಿಷಯಗಳು ಕಡಮೆಯಾಗಿದ್ದುವು. ಬರೆದಾಗುತ್ತಲೂ, ಪ್ರತಿ ರಾತ್ರಿಯೂ ಮಲಗುವುದಕ್ಕೆ ಮುಂಚೆ ಅದುವರೆಗೆ ತಾನು ಯೋಚಿಸಿದ್ದ ದುಷ್ಟವಾದ ಯೋಚನೆಯನ್ನೂ, ಆಡಿದ ದುಷ್ಟವಾದ ಮಾತನ್ನೂ, ಮಾಡಿದ ದುಷ್ಟವಾದ ಕೆಲಸವನ್ನೂ ಕುರಿತು, ತನಗೆತಾನೇ ಸಿಂಬಿಸಿಕೊಳ್ಳುತಿದ್ದನು. ಹೀಗೆ ಮೂವತ್ತು ವರುಷಗಳು ಮಾಡುವುದರಲ್ಲಿ, ಕರಿಯಬೈಂಡಿನ ಬುಕ್ಕಿನೊಳಗೆ ಒಂದು ಪಂಕ್ತಿಯನ್ನೂ ಬರೆಯುವುದಕ್ಕವಕಾಶವಾಗಲಿಲ್ಲ. ಬಿಳಿಯ ಬೈಂಡಿನ ಬುಕ್ಕು ತುಂಬಿ, ಇನ್ನೂ ಅನೇಕ ಅಂಥ ಬುಕ್ಕುಗಳನ್ನು ಹೊಸದಾಗಿ ಇಡಬೇಕಾಯಿತು.

ಶ್ರೀ ಶಂಕರಾಚಾರ್ಯರು, ನಾನೇ ಜಗದೀಶ್ವರನೆಂದು ಹೇಳಿರುವರಷ್ಟೆ! ಈ ಜಗದೀಶ್ವರಪದವಿ ಬರಬೇಕಾದರೆ, ಮನಸ್ಸಿನಲ್ಲಿ ದುರಾಲೋಚನೆಯೂ, ವಾಕ್ಕಿನಲ್ಲಿ ದುರ್ಭಾಷೆಯೂ, ಕಾಯದಲ್ಲಿ ದುಷ್ಕಾರ್ಯವೂ, ಎಂದಿಗೂ ಇರಬಾರದು. ಮನುಷ್ಯನು ಮೂರ್ತಿಮತ್ತಾದ ಸತ್ವಗುಣವಾಗಿ ಪರಿಣಮಿಸಬೇಕು. ಇಂಥ ಪರಿಣಾಮವನ್ನು ಹೊಂದಿ ಜಿತೇಂದ್ರಿಯನಾಗಿ ಜಗದೀಶ್ವರನಂತೆ ಲೋಕಕ್ಕೆ ಉಪಯುಕ್ತವಾದ ಕೆಲಸವನ್ನು

ಮಾಡಿ ಕೃತಾರ್ಥನಾಗುವುದಕ್ಕೆ, ಫ್ರಾಂಕ್ಲಿನ್ನನಿಗೆ ಮೂವತ್ತುವರ್ಷ ಅವಿಚ್ಛಿನ್ನವಾದ ಪ್ರಯತ್ನ ಬೇಕಾಯಿತು. ಒಬ್ಬ ಮನುಷ್ಯನು ಮಾಡಿದ ಕೆಲಸವನ್ನು, ಅವನು ಮಾಡಿದ ಹಾಗೆಯೇ ವ್ಯವಸಾಯಮಾಡಿದರೆ, ಪ್ರತಿಯೊಬ್ಬ ಮನುಷ್ಯನೂ ಮಾಡಬಹುದು. ಆದರೆ ಆ ಕೆಲಸವನ್ನು ಮಾಡುವುದರಲ್ಲಿ, ಶ್ರೀ ಶಂಕರಾಚಾರ್ಯರಂತೆಯೂ, ಫ್ರಾಂಕ್ಲಿನ್ನನಂತೆಯೂ, ಜಿತೇಂದ್ರಿಯನಾಗಿಯೂ ವೈರಾಗ್ಯಚಕ್ರವರ್ತಿಯಾಗಿಯೂ ಆದಹೊರತು, ನಿಸರ್ಗವಾದ ವಸ್ತುತತ್ವಜ್ಞಾನವುಂಟಾಗುವುದಿಲ್ಲ. ಅಂಥ ವಸ್ತುತತ್ವಜ್ಞಾನವಿಲ್ಲದವನಿಗೆ ನಿಜವಾದ ಮೋಕ್ಷವೂ ದೊರೆಯುವುದಿಲ್ಲವೆಂಬುದು ನಿರ್ಧಾರಿತವಾದ ಮಾತು.

ವಿದ್ಯಾರ್ಥಿಗಳು ಜೇನುಹುಳಗಳಿಂದ ಕಲಿತುಕೊಳ್ಳತಕ್ಕ ವಿದ್ಯೆಯೂ ಇರುವುದು. ಈ ಹುಳಗಳು, ಅನೇಕ ಪುಷ್ಪಗಳಮೇಲೆ ಕುಳಿತು, ಅವುಗಳ ಮಕರಂದವನ್ನು ಮಾತ್ರ ಪರಿಗ್ರಹಿಸುತ್ತವೆ; ನಿಸ್ಸಾರವಾದ ಇತರ ಪದಾರ್ಥಗಳನ್ನು ಪರಿತ್ಯಾಗಮಾಡುತ್ತವೆ ಎಲ್ಲ ಪುಸ್ತಕಗಳಲ್ಲಿಯೂ, ಸಾರವಾದ ವಿಷಯಗಳು ಹೇಗೋ-ಹಾಗೆ ನಿಸ್ಸಾರವಾದ ವಿಷಯಗಳೂ ಇರುವುದುಂಟು; ವಿಷದಂತೆ ಆಚರಿಸುವ ವಿಷಯಗಳೂ ಉಂಟು. ಆದರಿಂದಲೇ ನಮ್ಮ ಹಿರಿಯರು ಅಸತ್ಕಾವ್ಯಾಲಾಪವು ಪರಿತ್ಯಾಜ್ಯವೆಂದು ಹೇಳಿರುವರು. " ಮಾಘವೋದಿ ಮಗ ಕೆಟ್ಟ " ಎಂಬ ಗಾದೆಯು ಸುಳ್ಳಲ್ಲ; ಇದು ಸತ್ಯವಾದುದು. ಅನೇಕ ವಿದ್ಯಾರ್ಥಿಗಳು, ಬಹಳ ಶ್ರದ್ಧೆಯಿಂದ ವ್ಯಾಸಂಗ ಮಾಡುತ್ತಾರೆ; ತಾವು ಓದತಕ್ಕ ಪುಸ್ತಕಗಳಲ್ಲಿ ಇಂತಹದು ಪರಿಗ್ರಾಹ್ಯವೆಂಬುದಾಗಿಯೂ, ಇಂತಹದು ತ್ಯಾಜ್ಯವೆಂಬುದಾಗಿಯೂ ಸಮ್ಯಕ್ಪರ್

ಮಾಡಿಕೊಂಡು, ವ್ಯಾಸಂಗಮಾಡಿದರೆ, ಅಂಥವರು ತಮ್ಮ ವ್ಯಾಸಂಗದ ಫಲವನ್ನು ಹೊಂದುವರು. ಹಾಗಲ್ಲದೆ ವಿಚಾರಶೂನ್ಯತೆಯಿಂದ ವ್ಯಾಸಂಗ ಮಾಡತಕ್ಕವರು, ಉದ್ದಿಷ್ಟಫಲವನ್ನು ಹೊಂದದಿರುವುದು ಮಾತ್ರವಲ್ಲದೆ, ಅನರ್ಥಕ್ಕೂ ಗುರಿಯಾಗುವುದುಂಟು. ವಿದ್ಯಾರ್ಥಿಗಳು ಯಾವ ವ್ಯಾಸಂಗಕ್ಕೆ ಉಪಕ್ರಮಮಾಡಿದಾಗ್ಯೂ, ಅದರ ಪರಿಣಾಮಫಲವನ್ನು ಪ್ರಥಮತಃ ಪರ್ಯಾಲೋಚಿಸಬೇಕು. ಅದರಿಂದ ಒಳ್ಳೆಯ ಫಲವುಂಟಾಗುವುದೆಂದು ಗೊತ್ತಾದರೆ ಆ ವ್ಯಾಸಂಗವನ್ನು ಹಿಡಿಯಬೇಕೇ ಹೊರತು, ಹಾಗಿಲ್ಲದಿದ್ದರೆ ಹಿಡಿಯಕೂಡದು. ಬಹುಜನ ವಿದ್ಯಾರ್ಥಿಗಳಿಗೂ, ಅವರಿಗೆ ಹಿತೋಪದೇಶ ಮಾಡತಕ್ಕವರಿಗೂ, ಈರೀತಿಯಾದ ವಿಚಾರದಲ್ಲಿ ಆಸಕ್ತಿಯಿರುವುದಿಲ್ಲ. ಇದರಿಂದ ಲಾಭನಿವಾರಣೆಯೊಂದು ಮಾತ್ರವೇ ಅಲ್ಲದೆ, ಅನರ್ಥಪ್ರಾಪ್ತಿಯೂ ಆಗುವುದು. ಇದಕ್ಕೊಂದುದಾಹರಣೆಯನ್ನು ಹೇಳುವುದು ಆವಶ್ಯಕವಾಗಿರುವುದು.

ವಿಚಾರಪರನಾದ ಒಬ್ಬ ಫಕೀರನು, ಒಂದು ಲಕ್ಷರೂಪಾಯಿಕೊಟ್ಟರೆ ಒಂದು ಹಿತೋಪದೇಶವನ್ನು ಮಾಡುತ್ತೇನೆಂದು ಗಟ್ಟಿಯಾಗಿ ಕೂಗುತ್ತ, ಒಂದು ರಾಜಧಾನಿಯ ಬೀದಿಗಳಲ್ಲಿ ಹೋಗುತ್ತಿದ್ದನು. ಈ ಮಾತು, ಅಲ್ಲಿನ ಪ್ರಭುವಿಗೆ ತಿಳಿಯಿತು. ಅವನು, ಆ ಫಕೀರನನ್ನು ಕರೆಯಿಸಿ, ಅವನಿಗೆ ಒಂದುಲಕ್ಷರೂಪಾಯಿಗಳನ್ನುಕೊಟ್ಟು, "ನೀನು ಹೇಳುವ ಹಿತೋಕ್ತಿಯಾವುದು ?" ಎಂದು ಕೇಳಿದನು. ಅದಕ್ಕೆ ಆ ಫಕೀರನು, "ನೀನು ಯಾವ ಕೆಲಸವನ್ನುಪಕ್ರಮಿಸಬೇಕಾದರೂ, ಆ ಕೆಲಸದ ಪರಿಣಾಮಫಲವನ್ನು ಪರ್ಯಾಲೋಚಿಸದೆ ಮಾಡಬೇಡ" ಎಂದು ಹೇಳಿದನು. ದೊರೆಯು

ಇದನ್ನು ಕೇಳಿ ಸಂತುಷ್ಟನಾಗಿ, ಆ ಫಕೀರನನ್ನು ಬಹುಮಾನಿಸಿ ಕಳುಹಿಸಿ ಕೊಟ್ಟನು. ತರುವಾಯ, ಆ ವುಪದೇಶವನ್ನು, ತಾನು ಕುಳಿತುಕೊಳ್ಳ ತಕ್ಕ ಸ್ಥಳಗಳಲ್ಲೆಲ್ಲ ಚಿನ್ನದ ಅಕ್ಷರಗಳಲ್ಲಿ ಕೆತ್ತಿಸಿದನು. ಒಂದಾನೊಂದು ದಿವಸ, ಆಯುಷ್ಕರ್ಮವಾಡಿಸಿಕೊಳ್ಳುವುದಕ್ಕೆ ಸಿದ್ಧನಾಗಿ, ನಾಪಿತನನ್ನು ಕರೆಯಿಸಿದನು. ನಾಪಿತನು ಬಂದು, ಕತ್ತಿಯನ್ನು ಉಜ್ಜಿ ಸರಿಮಾಡಿಕೊಂಡು, ತಲೆಯನ್ನು ಮೇಲಕ್ಕೆತ್ತಿದಾಗ, ಎದುರಿಗೆ ಗೋಡೆಯ ಮೇಲೆ ಚಿನ್ನದ ಅಕ್ಷರಗಳಲ್ಲಿ ಥಳಥಳಿಸುತ್ತಲಿರುವ ಒಂದು ಲಕ್ಷ ರೂಪಾಯಿಗಳಿಗೆ ಕೊಂಡುಕೊಳ್ಳಲ್ಪಟ್ಟ ಹಿತೋಕ್ತಿಯನ್ನು ಓದಿದನು. ಕೂಡಲೆ ಅವನಿಗೆ ತೇಜಸ್ಸು ಕಡಮೆಯಾಯಿತು ; ಕೈಕಾಲುಗಳು ನಡುಗಿದುವು. ಇದನ್ನು ನೋಡಿ ಭೃತ್ಯರು ಅವನ ಕೈಯಿಂದ ಕತ್ತಿಯನ್ನು ಕಿತ್ತುಕೊಂಡರು. ಆ ಪ್ರಭುವು" ನಿನಗೆ ಈ ಅವಸ್ಥೆಯಾಗುವುದಕ್ಕೆ ಕಾರಣವೇನು? ನಿಜವನ್ನು ಹೇಳು ''ಎಂದುಕೇಳಿದನು. ಆ ನಾಪಿತನು,ಭಯಪಟ್ಟು "ಮಹಾಸ್ವಾಮಿ! ನಾನು ದೊಡ್ಡ ಕುಟುಂಬವುಳ್ಳವನು ; ಬಹಳ ದರಿದ್ರನು. ಕ್ಷೌರಮಾಡುವಾಗ್ಗೆ ತಮ್ಮ ಶಿರಶ್ಛೇದವನ್ನು ಮಾಡಿದರೆ ಲಕ್ಷಾಂತರರೂಪಾಯಿಗಳನ್ನು ಕೊಡುವುದಾಗಿ, ತಮ್ಮ ಶತ್ರುವಾದ ದುರ್ಬುದ್ಧಿಯೆಂಬವನು ನನಗೆ ಹೇಳಿದನು. ನಾನು ದುರಾಶೆಯುಳ್ಳವನಾಗಿ, ಈ ಪಾಪಕೃತ್ಯಕ್ಕೊಪ್ಪಿಕೊಂಡೆನು. ಇಲ್ಲಿ ಈ ಗೋಡೆಯಮೇಲಿರತಕ್ಕ ಜಾಜ್ವಲ್ಯಮಾನವಾದ ಹಿತೋಕ್ತಿಯು ನನ್ನ ದೃಷ್ಟಿಗೆ ಬಿದ್ದಿತು. ಅದನ್ನು ನೋಡಿದಕೂಡಲೆ, ನಾನು ಇಂಥ ಪಾಪಕೃತ್ಯವನ್ನು ಮಾಡಿದರೆ ನನಗೂ ನನ್ನಕುಟುಂಬಕ್ಕೂ ಉಂಟಾಗಬಹುದಾದ ಅನರ್ಥಗಳು ಮನಸ್ಸಿಗೆ ತೋರಿದುವು. ಆದುದರಿಂದ ಉಂಟಾದ

ಭಯವೇ, ಈ ಕಂಪನಕ್ಕೆ ಕಾರಣವು. ನನ್ನನ್ನು ರಕ್ಷಿಸುವುದಕ್ಕೂ ಮಹಾ ಸ್ವಾಮಿಯವರ ಜನಗಳನ್ನು ಮೂಲೋತ್ಪಾಟನಮಾಡಿ ಈ ರಾಜಧಾನಿಯನ್ನೂ ಈ ರಾಜ್ಯವನ್ನೂ ಆಕ್ರಮಿಸುವುದಕ್ಕೂ, ದುರ್ಬುದ್ಧಿಯೂ ಅವನ ಸೈನಿಕರೂ ಸನ್ನದ್ಧರಾಗಿರುತ್ತಾರೆ. ಮಹಾಸ್ವಾಮಿಯವರು, ನನ್ನ ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ನನಗೆ ಮಾಡಿ, ಸನ್ನಿಹಿತವಾಗಿರತಕ್ಕ ಅಪಾಯವನ್ನು ತಪ್ಪಿಸಿಕೊಂಡು, ನನ್ನ ಕುಟುಂಬವನ್ನು ರಕ್ಷಿಸಬೇಕು.'' ಎಂದು ಪ್ರಾರ್ಥಿಸಿದನು. ಕೂಡಲೆ, ಆ ರಾಜನು, ನಾಪಿತನ ಅಪರಾಧವನ್ನು ಕ್ಷಮಿಸಿ, ಸೈನ್ಯಗಳನ್ನು ಸಿದ್ಧಮಾಡಿಕೊಂಡು, ದುರ್ಬುದ್ಧಿಯನ್ನೂ ಅವನ ಸೈನಿಕರನ್ನೂ ಸೋಲಿಸಿ, ಅವರುಗಳಿಗೆ ತಕ್ಕ ಪ್ರತೀಕಾರವನ್ನು ಮಾಡಿ, ಫಕೀರನಿಂದ ಕೊಂಡುಕೊಳ್ಳಲ್ಪಟ್ಟ ಹಿತೋಕ್ತಿಗಾಗಿ ಕೊಟ್ಟ ದ್ರವ್ಯಕ್ಕೆ ಲಕ್ಷದಷ್ಟು ಪ್ರತಿಫಲ ದೊರೆಯಿತೆಂದು ಸಂತುಷ್ಟನಾದನು. ಬಳಿಕ, ಆ ನಾಪಿತನ ಕುಟುಂಬರಕ್ಷಣೆಗೆ ತಕ್ಕ ಏರ್ಪಾಡನ್ನು ಮಾಡಿದನು.

ಪೂರ್ವಾಪರಗಳನ್ನು ಪರ್ಯಾಲೋಚಿಸುವ ಶಕ್ತಿಯನ್ನು ಪಡೆಯುವುದೇ, ಸಕಲ ವಿದ್ಯೆಗಳಿಗೂ ಮುಖ್ಯ ಲಕ್ಷಣವು. ಅಂಥ ಶಕ್ತಿಯನ್ನುಂಟುಮಾಡತಕ್ಕ ವಿದ್ಯಾಭ್ಯಾಸವೇ, ನಿಜವಾದ ವಿದ್ಯಾಭ್ಯಾಸವು. ಹಾಗೆ ಮಾಡುವುದಕ್ಕೆ ಸಾಧಕವಾಗದಿರತಕ್ಕ ವಿದ್ಯಾಭ್ಯಾಸವು, ಎಂದಿಗೂ ಸದ್ವಿದ್ಯಾಭ್ಯಾಸವಾಗುವುದಿಲ್ಲ. ಅದನ್ನು ದುರ್ವಿದ್ಯಾಭ್ಯಾಸವೆಂದು ಹೇಳಬೇಕು. ಏತಕ್ಕೆಂದರೆ, ಅಂಥ ವಿದ್ಯಾಭ್ಯಾಸದಿಂದ ಪ್ರಯೋಜನವಿಲ್ಲದೆ ಹೋಗುವುದು ಮಾತ್ರವಲ್ಲದೆ, ಕೆಲವು ಸಂದರ್ಭಗಳಲ್ಲಿ ಅನರ್ಥಗಳೂ ಆಗಬಹುದು.

ಕೆಲವುಜನ ವಿದ್ಯಾರ್ಥಿಗಳೂ, ವಿದ್ಯಾರ್ಥಿನಿಯರೂ, ಹಿಡಿದ ಕೆಲಸವನ್ನು ಮಾಡುವುದರಲ್ಲಿ ಬಹಳ ಶ್ರದ್ಧೆಯನ್ನೂ ಐಕಾಗ್ರ್ಯವನ್ನೂ ತೋರಿಸುವರು. ಕೆಲವುಜನ ವಿದ್ಯಾರ್ಥಿನಿಯರು, ನಾಲ್ಕಯ್ದು ಗೋಲಿಗಳನ್ನೂ ನಿಂಬೆಯಹಣ್ಣುಗಳನ್ನೂ ಒಂದೊಂದಾಗಿ ಮೇಲಕ್ಕೆ ಎಸೆಯುತ್ತ, ಎರಡು ಮೂರು ನಿಮಿಷಗಳವರೆಗೂ, ಒಂದು ಗೋಲಿ ಅಥವಾ ಒಂದು ನಿಂಬೆಹಣ್ಣು ಕೈಗೆ ತಗುಲುತಿದ್ದರೆ, ಮೂರು ನಾಲ್ಕು ಗೋಲಿ ಅಥವಾ ನಿಂಬೆಯಹಣ್ಣುಗಳು ಆಕಾಶದಲ್ಲಿರುವಂತೆ ಹಾರಿಸುವುದರಲ್ಲಿ ನೈಪುಣ್ಯವನ್ನು ತೋರಿಸುತ್ತ, ವಿನೋದದಿಂದ ಕಾಲಹರಣಮಾಡುವರು. ಇದೇ ರೀತಿಯಲ್ಲಿ ನಾನಾವಿಧವಾದ ಆಟಗಳಲ್ಲಿ ಚಿಕ್ಕವರು ಮಾತ್ರವಲ್ಲದೆ ದೊಡ್ಡವರುಕೂಡ ಅಸಾಧಾರಣವಾದ ಕೌಶಲ್ಯವನ್ನು ತೋರಿಸುತ್ತ ಬಹುಕಾಲವನ್ನು ಕಳೆಯುವರು. ಇದೇ ಕಾಲವನ್ನು ಫಲಕಾರಿಗಳಾದ ಶಾಸ್ತ್ರಾಭ್ಯಾಸಗಳನ್ನು ಮಾಡುವುದಕ್ಕೆ ವಿನಿಯೋಗಿಸಿದರೆ, ಹಾಗೆ ವಿನಿಯೋಗಿಸತಕ್ಕವರು ಸಕಲ ಶಾಸ್ತ್ರವಿಶಾರದರಾಗಿ ಸಂಪತ್ತನ್ನೂ ಯಶಸ್ಸನ್ನೂ ಹೊಂದುವುದು ದುರ್ಲಭವಲ್ಲ. ಈ ಆಟಗಳಲ್ಲಿ ಉತ್ಸಾಹವೂ ಅಕ್ಲೇಶವೂ ಸಂತೋಷವೂ ಹುಟ್ಟಲೆಂದು, ಅನೇಕರು ಜೂಜಾಡುವುದರಲ್ಲಿಯೂ ಕೌಶಲ್ಯವನ್ನು ತೋರಿಸುವರು. ಈಜೂಜಾಟಗಳಿಂದ ಆಗತಕ್ಕ ಅನರ್ಥಗಳನ್ನು ಅನೇಕರು ಚೆನ್ನಾಗಿ ತಿಳಿದುಕೊಂಡಿರುವುದಿಲ್ಲ. ಅದನ್ನು ಸಮಗ್ರವಾಗಿ ತಿಳಿದುಕೊಳ್ಳಲಪೇಕ್ಷೆಯುಳ್ಳವರು, ಪಾಂಡವರು ಜೂಜಾಟದಲ್ಲಿ ಸರ್ವಸ್ವವನ್ನೂ ತಮ್ಮನ್ನೂ ತಮ್ಮ ಹೆಂಡತಿಯನ್ನೂ ಕಳೆದುಕೊಂಡು ಹೇಗೆ ಅನಿರ್ವಚನೀಯವಾದ ಕ್ಲೇಶಕ್ಕೆ ಗುರಿಯಾದರೋ ಅದನ್ನು ಪರ್ಯಾಲೋಚಿಸುವುದುತ್ತಮವು.

ವಿದ್ಯಾರ್ಥಿಗಳಿಗೆ ಮಾರ್ಗದರ್ಶನವು ಅತ್ಯಂತ ಆವಶ್ಯಕವಾದುದು. ಈ ಚರಾಚರಾತ್ಮಕವಾದ ಪ್ರಪಂಚದಲ್ಲಿ, ತಿಳಿದುಕೊಳ್ಳುವುದಕ್ಕೆ ಅರ್ಹವಾದ ವಿಷಯಗಳು ಗೊತ್ತಿಲ್ಲದಷ್ಟಿರುತ್ತವೆ. ವಿದ್ಯಾರ್ಥಿದಶೆಯಲ್ಲಿ ಯಾವುದನ್ನು ಮೊದಲು ತಿಳಿದುಕೊಳ್ಳಬೇಕೋ, ಯಾವಯಾವ ಗ್ರಂಥಗಳನ್ನು ಯಾವಯಾವ ರೀತಿಯಲ್ಲಿ ವ್ಯಾಸಂಗಮಾಡಿದರೆ ಸುಲಭವಾಗಿ ಜ್ಞಾನವುಂಟಾಗುವುದೋ, ಯಾವ ರೀತಿಯಲ್ಲಿ ವ್ಯಾಸಂಗಮಾಡಿದರೆ ಗ್ರಂಥಗಳು ಸ್ವಾಧೀನವಾಗುವುದಿಲ್ಲವೋ, ಇವುಗಳೆಲ್ಲ ಗುರುಮುಖದಿಂದ ತಿಳಿದುಕೊಳ್ಳಲ್ಪಡಬೇಕು. ಯಾರು ತಾವು ಪಾಠಹೇಳತಕ್ಕ ಗ್ರಂಥಗಳ ಪೂರ್ವಾಪರಗಳನ್ನೂ ರಹಸ್ಯವನ್ನೂ ಸಮಗ್ರವಾಗಿ ತಿಳಿದುಕೊಂಡಿರುವರೋ, ಅವರೇ ಅಂತಹ ಗ್ರಂಥಗಳನ್ನು ಪಾಠಹೇಳುವುದಕ್ಕೆ ಸಮರ್ಥರು. ಗ್ರಂಥಗಳನ್ನು ಉಪರಿಪ್ಲವವಾಗಿ ತಿಳಿದುಕೊಂಡು ಪಾಠಹೇಳತಕ್ಕವರು, ಗುರುಗಳಾಗುವುದಕ್ಕೆಂದಿಗೂ ಅರ್ಹರಲ್ಲ. ಅಂಥವರಲ್ಲಿ ವ್ಯಾಸಂಗಮಾಡತಕ್ಕ ವಿದ್ಯಾರ್ಥಿಗಳೂ, ತಾವು ಓದತಕ್ಕ ಶಾಸ್ತ್ರಗಳ ಮರ್ಮವನ್ನು ಸಮಗ್ರವಾಗಿ ತಿಳಿದುಕೊಳ್ಳುವುದಕ್ಕೆಂದಿಗೂ ಶಕ್ತರಾಗುವುದಿಲ್ಲ. ಅನೇಕವಾದ ಪಬ್ಲಿಕ್ ಸ್ಕೂಲುಗಳಲ್ಲಿಯೂ ಕಾಲೇಜುಗಳಲ್ಲಿಯೂ ಒಳ್ಳೆಯ ಪಾಠಕರಲ್ಲಿ ವ್ಯಾಸಂಗಮಾಡಿದವರು, ಅದ್ವಿತೀಯ ಪಾಂಡಿತ್ಯವನ್ನು ಹೊಂದಿ, ಅಸಾಧಾರಣವಾದ ಪದವಿಗೆ ಬಂದಿರುವರು. ನಮ್ಮ ವೈಸ್‌ರಾಯರಾಗಿದ್ದ ಲಾರ್ಡ್ ಕರ್ಜನ್‌ರವರು, ವಿಲಾಯಿತಿಯ ಪಬ್ಲಿಕ್ ಸ್ಕೂಲಿನಲ್ಲಿ ಶಿಕ್ಷೆಯನ್ನು ಹೊಂದಿದವರು. ಇವರಿಗೆ ಪಾಠವನ್ನು ಹೇಳಿದವರು, ಬಹಳ ಸಮರ್ಥರಾಗಿದ್ದರು. ಗುರುವಿನಂತೆ ಶಿಷ್ಯನೆಂಬ ಗಾದೆಗೆ, ಇವರೇ

ದೃಷ್ಟಾಂತವು. ಮದರಾಸ್ ಪ್ರೆಸಿಡೆನ್ಸಿ ಕಾಲೇಜಿನ ಪೂರ್ವಾವಸ್ಥೆ ಯಲ್ಲಿ, ಮೆ|| ಪವಲ್‌ರವರು ಪಾಠಕರಾಗಿದ್ದರು. ಇವರಲ್ಲಿ ವ್ಯಾಸಂಗ ಮಾಡಿದವರೊಳಗೆ ಪ್ರಾಯಕವಾಗಿ ಮುಕ್ಕಾಲುಪಾಲು ಜನಗಳು, ದಿವಾನ ಗಿರಿಯನ್ನೂ, ಅಥವಾ ದಿವಾನಗಿರಿಗೆ ಸಮಾನವಾದ ಇತರ ಅಧಿಕಾರಗ ಳನ್ನೂ ಮಾಡಿ, ಸಕಲವಿದ್ಯಾವಿಶಾರದರೆಂಬ ಕೀರ್ತಿಯನ್ನೂ, ಧರ್ಮಮಾ ರ್ಗೈಕಪರಾಯಣರೆಂಬ ಯಶಸ್ಸನ್ನೂ ಸಂಪಾದಿಸಿದರು. ನಮ್ಮ ಸಂಸ್ಥಾ ನಕ್ಕೆ ಮೊದಲನೆಯ ದಿವಾನರಾದ ಮ|| ರಂಗಾಚಾರ್ಯರವರೂ, ನಮ್ಮ ರಿಟೈರ್ಡ್ ದಿವಾನರಾದ ಮ|| ಆನಂದರಾಯರವರ ತಂದೆಗಳಾದ ರಾಜಾ. ಸರ್. ಟಿ. ಮಾಧವರಾಯರವರೂ, ಟ್ರಾವನ್ಕೂರ್ ದಿವಾನಗಿರಿಮಾಡಿದ ವರಲ್ಲಿ ಅದ್ಭುತವಾದ ಶಕ್ತಿಯನ್ನು ಹೊಂದಿದ್ದ ಸರ್. ಶೇಷಯ್ಯಶಾಸ್ತ್ರಿ ಗಳವರೂ, ಇಂದೂರ್ ದಿವಾನಗಿರಿಯನ್ನು ಮಾಡಿ ಭಾರತೀಯರಲ್ಲಿ ನಿಸ್ಪೃ ಹಚಕ್ರವರ್ತಿಗಳೆಂಬುದಾಗಿಯೂ ಅಭಿನವಮಹರ್ಷಿಗಳೆಂಬುದಾಗಿಯೂ ದಿಗಂತ ವಿಶ್ರಾಂತವಾದ ಕೀರ್ತಿಯನ್ನು ಪಡೆದ ದಿವಾನ್ ಬಹದ್ದೂರ್ ರಘುನಾಥರಾಯರವರೂ, ಇನ್ನೂ ಇವರಂತಹ ಅನೇಕ ದೊಡ್ಡಮನು ಷ್ಯರೂ, ಮೆ|| ಪವಲ್‌ರವರ ಶಿಷ್ಯರು.

ಶರೀರಸಂಬಂಧವಾದ ಮಾತಾಪಿತೃಗಳ ಗುಣಗಳು ಮಕ್ಕಳಲ್ಲಿ ಕಾಣು ವುವು. ಅದೇರೀತಿಯಲ್ಲಿ ವಿದ್ಯಾಗುರುಗಳ ಗುಣಾತಿಶಯಗಳೂ ಶಿಷ್ಯರಲ್ಲಿ ಮೂರ್ತೀಭವಿಸುವುವು. ಯಾವ ಗುರುಗಳು, ತಾವು ಹೇಳತಕ್ಕ ಪಾಠ ಗಳನ್ನು ಸಮಗ್ರವಾಗಿ ತಿಳಿದುಕೊಂಡಿರುವರೋ, ಅಂಥವರಿಗೆ, ತಾವು ಹೇಳ ತಕ್ಕ ಗ್ರಂಥದ ಪುಸ್ತಕಗಳನ್ನು ಅವಲೋಕಿಸುವುದು ಕೂಡ ಆವಶ್ಯಕ

ವಿಲ್ಲ. ಅವರು ಹೇಳಿದುದನ್ನು ಶ್ರವಣಮಾಡಿದ ಮಾತ್ರದಿಂದಲೇ, ಮನ
ನಕ್ಕೂ ನಿದಿಧ್ಯಾಸನಕ್ಕೂ ಅವಕಾಶವಾಗುವುದು. ಸಮರ್ಥರಾದ ಪಾಠ
ಕರು, ಯಾವ ಸ್ಕೂಲುಗಳಲ್ಲಿಯೂ ಕಾಲೇಜುಗಳಲ್ಲಿಯೂ ಪಾಠಹೇಳು
ವರೋ, ಅಲ್ಲಿ ವಿದ್ಯಾರ್ಥಿಗಳು ಪುಸ್ತಕಗಳನ್ನು ಕೂಡ ಕೊಂಡುಕೊಳ್ಳು
ವುದು ಅಪೂರ್ವವಾಗಿರುವುದು. ಒಂದು ನೋಟುಬುಕ್ಕನ್ನೂ, ಒಂದು
ಪೆನ್ಸಿಲನ್ನೂ ತೆಗೆದುಕೊಂಡು ಹೋಗಿ, ಅವರು ಹೇಳುವುದನ್ನು ಮನ
ಸ್ಸಿಟ್ಟು ತಿಳಿದುಕೊಂಡು, ಅವುಗಳನ್ನು ನೋಟುಬುಕ್ಕಿನಲ್ಲಿ ಬರೆದುಕೊಂಡು,
ವಿರಾಮಕಾಲದಲ್ಲಿ ಚಿಂತನೆಯನ್ನು ಮಾಡಿ, ಬಹಳ ಕಠಿನವಾದ ಪರೀಕ್ಷೆಗಳ
ಲ್ಲಿಯೂ ವಿದ್ಯಾರ್ಥಿಗಳು ಉತ್ತೀರ್ಣರಾಗುತ್ತಿದ್ದಾರೆ ಜರ್ಮನಿ ಅಮೆರಿಕಾ
ಮೊದಲಾದ ದೇಶಗಳ ಹೈಸ್ಕೂಲುಗಳಲ್ಲಿಯೂ ಕಾಲೇಜುಗಳಲ್ಲಿಯೂ
ವಿದ್ಯಾರ್ಥಿಗಳು ವಿಷಯಗಳಿಗೆ ಗಮನಕೊಡುವರೇ ಹೊರತು, ಪುಸ್ತಕ
ಗಳಿಗೆ ವಿಶೇಷ ಗಮನಕೊಡುವುದಿಲ್ಲ. ನಮ್ಮ ದೇಶದಲ್ಲಿ, ವಿದ್ಯಾರ್ಥಿಗಳು
ಪ್ರಥಮತಃ ಇಂಗ್ಲೀಷ್ ಭಾಷೆಯನ್ನು ಕಲಿತು, ಅನಂತರ ಈ ಭಾಷೆಯಲ್ಲಿ
ಗರ್ಭಿತವಾಗಿರತಕ್ಕ ಲೌಕಿಕಶಾಸ್ತ್ರಗಳನ್ನು ಕಲಿಯಬೇಕಾಗಿರುವುದು.
ಆದುದರಿಂದ, ಲೌಕಿಕಶಾಸ್ತ್ರ ಪ್ರಯೋಜನಗಳು ನಮಗೆ ವಿಶೇಷವಾಗಿ
ಲಭ್ಯವಾಗುವುದಿಲ್ಲ. ನಮ್ಮ ಸ್ವಭಾಷೆಯಲ್ಲಿ ಲೌಕಿಕ ಶಾಸ್ತ್ರಗಳೆಲ್ಲವೂ
ಬರೆಯಲ್ಪಟ್ಟರೆ, ಗುರುಮುಖದಿಂದ ಪ್ರತಿಯೊಂದು ಶಾಸ್ತ್ರವನ್ನೂ ಲೀಲೆ
ಯಿಂದ ಕಲಿಯುವುದಕ್ಕೆ ನಮಗೆ ಅವಕಾಶವಾಗುವುದು. ಜಪಾನ್ ದೇಶ
ದವರು, ಕೋಟ್ಯಂತರದ್ರವ್ಯ ವ್ಯಯಮಾಡಿ, ಸಕಲ ಲೌಕಿಕಶಾಸ್ತ್ರಗಳನ್ನೂ
ತಮ್ಮ ದೇಶಭಾಷೆಗೆ ತರ್ಜುಮೆಮಾಡಿಕೊಂಡು, ಸಮಸ್ತ ಸ್ತ್ರೀಪುರುಷರನ್ನೂ

ಸುಶಿಕ್ಷಿತರನ್ನಾಗಿ ಮಾಡುತ್ತ ಬಂದುದರಿಂದ, ಆ ದ್ವೀಪ ನಿವಾಸಿಗಳು, ಸಕಲ ಭಾಗಗಳಲ್ಲಿಯೂ ಪಾಶ್ಚಾತ್ಯರಿಗೆ ಸಮಾನರಾಗಿ ಪರಿಣಮಿಸಿರುತ್ತಾರೆ. ಇಂಡಿಯಾ ಗವರ್ನಮೆಂಟಿನವರೂ, ನೇಟಿವ್ ಪ್ರಭುಗಳೂ, ಈ ವಿಷಯವನ್ನು ಪರ್ಯಾಲೋಚಿಸಿ, ಸಕಲ ಲೌಕಿಕಶಾಸ್ತ್ರಗಳನ್ನೂ ಈ ಭರತ ಖಂಡದ ದೇಶಭಾಷೆಗಳಲ್ಲಿ ಪಾಠಹೇಳುವಂತೆ ಮಾಡಿದರೆ, ಭಾರತೀಯರು ಶೀಘ್ರದಲ್ಲಿಯೇ ಸಮಸ್ತ ಭಾಗಗಳಲ್ಲಿಯೂ ಬ್ರಿಟಿಷ್ ಪ್ರಜೆಗಳೆನ್ನಿಸಿಕೊಳ್ಳುವುದಕ್ಕೆ ಅರ್ಹರಾಗುತ್ತಾರೆ.

ಜನಗಳ ಮನಸ್ಸು, ಅವರು ಜನ್ಮವೆತ್ತಿದಾಗ ಜೇನುಮೇಣದಂತಿರುವುದೆಂದು, ನಾವು ಪೂರ್ವದಲ್ಲಿಯೇ ಹೇಳಿರುವೆವು. ಚಿನ್ನದಿಂದ ನಾನಾವಿಧವಾದ ಆಭರಣಗಳನ್ನು ಮಾಡಬಹುದು. ಜೇಡಿಯಮಣ್ಣಿನಿಂದಲೂ, ಇತರ ಲೋಹಗಳಿಂದಲೂ, ಇದೇ ರೀತಿಯಲ್ಲಿ ಬೇಕಾದ ವಸ್ತುಗಳನ್ನು ನಿರ್ಮಾಣ ಮಾಡಬಹುದು. ಹಾಗೆ ನಿರ್ಮಾಣ ಮಾಡಲ್ಪಟ್ಟ ವಸ್ತುಗಳನ್ನು ನಾಶ ಮಾಡಿ, ಪುನಃ ಲೋಹಗಳ ಅವಸ್ಥೆಗೂ ಜೇಡಿಯಮಣ್ಣಿನ ಅವಸ್ಥೆಗೂ ತರುವುದುಕೂಡ ಸಾಧ್ಯವಾದುದು. ಜನಗಳ ಮನಸ್ಸೂ ಕೂಡ, ಮೇಣ ಜೇಡಿಮಣ್ಣು ಚಿನ್ನ ಮೊದಲಾದ ವಸ್ತುಗಳಂತೆ, ಇಷ್ಟಾನುಸಾರವಾದ ರೂಪವನ್ನು ಹೊಂದುವ ರೀತಿಯಲ್ಲಿ ಮಾಡಲ್ಪಡಬಹುದು. ಅದರಮೇಲೆ ಯಾವ ಮುದ್ರಣವನ್ನು ಮಾಡಿದರೂ ಅದರ ಸ್ವರೂಪವನ್ನು ಅದು ಹೊಂದುವಂತೆಯೂ ಮಾಡಬಹುದು. ಬಾಲ್ಯದಲ್ಲಿ ಎಲ್ಲರ ಮನಸ್ಸೂ ಸ್ವರೂಪ ಸ್ವೀಕಾರವನ್ನು ಹೊಂದುವ ಸ್ಥಿತಿಯಲ್ಲಿರುವುದು. ಆಗ ತಾಯಿತಂದೆಗಳೂ ಪಾಠಕರೂ ಪೂರ್ವಾಪರ ಯೋಚನೆಯನ್ನು ಮಾಡಿ, ಒಳ್ಳೆಯ ವಿಷಯಗಳು

ಅವರ ಮನಸ್ಸಿನಮೇಲೆ ಮುದ್ರಿಸಲ್ಪಡುವಂತೆ ಸುಶಿಕ್ಷೆಯನ್ನು ಮಾಡಿದರೆ, ಅವರು ಜನಕಾದಿಗಳಂತೆಯೂ, ವಸಿಷ್ಠಾದಿಗಳಂತೆಯೂ, ಹರಿಶ್ಚಂದ್ರಾದಿಗಳಂತೆಯೂ, ದಧೀಚಿ ಕರ್ಣ ಮೊದಲಾದ ಲೋಕಬಾಂಧವರಂತೆಯೂ ಪರಿಣಮಿಸುವರು. ಬಾಲ್ಯದಲ್ಲಿ ಇಂದ್ರಿಯಪರವಶತೆಗೆ ಸಾಧಕವಾದ ವಿಷಯಾಸಕ್ತಿರೂಪವಾದ ಮುದ್ರಣಗಳಿಗೆ ಜನಗಳ ಮನಸ್ಸನ್ನು ಗುರಿಮಾಡಿದರೆ, ಅತ್ಯಂತ ಮೇಧಾವಿಗಳೂ ಕೂಡ, ತಾವು ಜಿತೇಂದ್ರಿಯರಾಗಿರುವವರೆಗೂ ಮಹೋನ್ನತಿಗೆ ಬಂದು, ಆಮೇಲೆ ಇಂದ್ರಿಯಪರವಶರಾಗಿ ದುರ್ಮಾರ್ಗಕ್ಕೆ ಬಿದ್ದಕೂಡಲೆ ಭಯಂಕರವಾದ ಪತನವನ್ನು ಹೊಂದಿ, ಅತ್ಯಂತ ಶೋಚನೀಯವಾದ ಸ್ಥಿತಿಗೆ ಬರುವರು. ಈ ವಿಷಯವನ್ನು ತಾಯಿತಂದೆಗಳೂ ಪಾಠಕರೂ ಪರ್ಯಾಲೋಚಿಸುವಂತೆಯೇ, ವಿದ್ಯಾರ್ಥಿಗಳೂ ಕೂಡ ಪರ್ಯಾಲೋಚಿಸಿ, ವಿದ್ಯಾರ್ಥಿದಶೆಯಲ್ಲಿ ತಮ್ಮ ಮನಸ್ಸು ದುರ್ವಿದ್ಯೆಗಳಿಗೆ ಗುರಿಯಾಗದಂತೆ ಮಾಡಿಕೊಳ್ಳಬೇಕು. ಸಕಲ ಮತಗ್ರಂಥಗಳಲ್ಲಿಯೂ ತಪ್ಪುತಿಳಿವಳಿಕೆಯನ್ನುಂಟುಮಾಡತಕ್ಕ ಅನೇಕ ಕಥೆಗಳು ಹೇಳಲ್ಪಟ್ಟಿರುವುವು. ಇವುಗಳ ಜತೆಯಲ್ಲಿ ಧರ್ಮಾರ್ಥಕಾಮಮೋಕ್ಷಗಳಿಗೆ ಸಂಪೂರ್ಣವಾಗಿ ಸಾಧಕಗಳಾದ ಕಥೆಗಳೂ ಕೂಡ ಹೇಳಲ್ಪಟ್ಟಿರುವುವು. ಅವುಗಳೆಲ್ಲವನ್ನೂ ಪರಿಶೋಧಿಸಿ, ಸದಿಷ್ಟಾರ್ಥಸಿದ್ಧಿಗೆ ಸಾಧಕವಾದುವುಗಳನ್ನು ಮಾತ್ರ ಪರಿಗ್ರಹಿಸುವ ಶಕ್ತಿಯೂ, ದುರ್ಗತಿಗೆ ಸಾಧಕವಾದ ವಿಷಯಗಳನ್ನು ಪರಿತ್ಯಾಗಮಾಡುವ ಶಕ್ತಿಯೂ, ವಿದ್ಯಾರ್ಥಿಗಳಿಗಿರುವುದು ಅಪೂರ್ವ. ಗುರುಪದವಿಯಲ್ಲಿರತಕ್ಕ ಜನಗಳಲ್ಲಿಯೂ, ದುರಭಿಮಾನರಹಿತರಾದವರು ಬಹಳ ವಿರಳರಾಗಿರುತ್ತಾರೆ. ತಾಯಿತಂದೆ

ಗಳೂ, ಪಾಠಕರೂ, ಸಹಾಧ್ಯಾಯಿಗಳೂ, ಯಾವ ದುರಭಿಮಾನದಿಂದ ತುಂಬಿರುತ್ತಾರೋ, ಆ ದುರಭಿಮಾನವು, ವಿದ್ಯಾರ್ಥಿಗಳಿಗೂ ಪ್ರಯತ್ನ ವಿಲ್ಲದೆಯೇ ಬರುವುದು. ಯಾವ ವಿಷಯಗಳನ್ನು ಹೇಳಬೇಕಾದರೂ, ಗುಣದೋಷಗಳನ್ನು ಸಾವಧಾನವಾಗಿ ಪರಿಶೀಲಿಸಿ ಸಾರಭೂತವಾದುದನ್ನು ಪರಿಗ್ರಹಿಸಿ ಯುಕ್ತಿಗೆ ವಿರುದ್ಧವಾದುದನ್ನು ಪರಿತ್ಯಾಗಮಾಡುವ ಶಕ್ತಿ ಯನ್ನು ಪ್ರಥಮತಃ ಗುರುಪದವಿಯಲ್ಲಿರತಕ್ಕವರು ಸಂಪಾದಿಸಿಕೊಳ್ಳಬೇಕು. ಹಾಗೆ ಸಂಪಾದಿಸಿಕೊಳ್ಳತಕ್ಕವರೇ ನಿಜವಾದ ಗುರುಗಳು. ಅಂಥ ಗುರು ಗಳೇ ಪರಬ್ರಹ್ಮನಿಗೂ ಸಮಾನರು; ಅವರೇ ಸರ್ವರಿಗೂ ಪೂಜ್ಯರು. ಮೂರ್ತೀಭವಿಸಿದ ದುರಭಿಮಾನದೇವತೆಗಳು, ಗುರುಪದವಿಗೆಂದಿಗೂ ಅರ್ಹ ರಾಗುವುದಿಲ್ಲ. ಅಂಥವರಲ್ಲಿ ಶಿಷ್ಯರಾಗುವುದರಿಂದ, ಅಧೋಗತಿಗೆ ಸೋಪಾನಗಳನ್ನು ಕಟ್ಟಿದಂತಾಗುವುದೆಂದು ಸಾರಾಸಾರವಿಚಾರಜ್ಞರು ಅಭಿಪ್ರಾಯಪಡುವರು.

ಎಲ್ಲ ಜ್ಞಾನಗಳಿಗಿಂತಲೂ, ಲೋಕವ್ಯವಹಾರಜ್ಞಾನವು ಅತ್ಯಂತ ಪ್ರಯೋಜನಕರವಾದುದು. ಗ್ರಂಥಾವಲೋಕನದಿಂದ ಬರತಕ್ಕ ಜ್ಞಾನದಲ್ಲಿ ನ್ಯೂನಾತಿರಿಕ್ತಗಳಿರುವುದುಂಟು. ಸಾಕ್ಷಾತ್ತಾಗಿ ಜನಗಳಲ್ಲಿ ಸೇರಿ, ಅವರ ಮಾತುಗಳಲ್ಲಿಯೂ ಕೆಲಸಗಳಲ್ಲಿಯೂ ತೋರುವ ಮನೋಧರ್ಮಗಳನ್ನೂ, ಆಶೆಯೆಂಬ ಪಿಶಾಚದಿಂದ ಹಿಡಿಯಲ್ಪಟ್ಟವರು ಯಾವಯಾವ ಸಂದರ್ಭ ಗಳಲ್ಲಿ ಹೇಗೆಹೇಗೆ ನಡೆದುಕೊಳ್ಳುವರೋ ಅದನ್ನೂ ಸಾಕ್ಷಾತ್ತಾಗಿ ನೋಡು ವವರಿಗೆ ಲಭ್ಯವಾಗತಕ್ಕ ಜ್ಞಾನದಲ್ಲಿ, ವಿಶೇಷನ್ಯೂನಾತಿರಿಕ್ತಗಳಿರುವುದಿಲ್ಲ. ಗ್ರಂಥಾವಲೋಕನದಿಂದ ಪಡೆಯಬೇಕಾದ ಜ್ಞಾನವನ್ನು ಪ್ರಥಮತಃ

ಪಡೆದು, ಅನಂತರ ತೀರ್ಥಯಾತ್ರೆಯ ವ್ಯಾಜದಿಂದ ದೇಶಾಟನವನ್ನೂ ಪಂಡಿತಭಾಷಣವನ್ನೂ ಮಾಡುತ್ತ ತಾವು ಆರ್ಜಿಸಿರತಕ್ಕ ಜ್ಞಾನದಲ್ಲಿ ಯಾವುದು ಸಿದ್ಧಾಂತರೂಪವಾದುದೋ ಅದನ್ನು ಗೊತ್ತುಮಾಡಿಕೊಳ್ಳುವುದಕ್ಕೂ, ಯಾವುದು ಮಿಥ್ಯಾರೂಪವಾದುದೋ ಅದನ್ನು ಪರಿತ್ಯಾಗ ಮಾಡುವುದಕ್ಕೂ ಅವಕಾಶವನ್ನು ಹೊಂದುವುದಕ್ಕೋಸ್ಕರ, ಪಂಡಿತರೇ ಮೊದಲಾದ ಸರ್ವಜನಗಳಲ್ಲಿಯೂ ಸೇರಿ, ಅವರ ಉದ್ಯೋಗಗಳನ್ನೂ ಅವರ ಮನೋಗತಗಳನ್ನೂ ಅವರ ವಾಕ್ಯಗಳನ್ನೂ ಅವುಗಳಿಗಿರತಕ್ಕ ಪರಸ್ಪರಸಂಬಂಧವನ್ನೂ ಪರಿಶೀಲಿಸಿ ತಿಳಿದುಕೊಳ್ಳಬೇಕು. ಈ ರೀತಿಯಲ್ಲಿ ಆರ್ಜಿಸಲ್ಪಟ್ಟ ಜ್ಞಾನವನ್ನು ಲೋಕವ್ಯವಹಾರ ಜ್ಞಾನವೆನ್ನುವರು. ಎಲ್ಲ ಜ್ಞಾನಗಳಿಗಿಂತಲೂ ಈ ವ್ಯವಹಾರಜ್ಞಾನವು ಅತ್ಯುತ್ತಮವಾದುದು. ಲೋಕವ್ಯವಹಾರಜ್ಞಾನವುಳ್ಳವನಾಗಿಯೂ, ಧರ್ಮಮಾರ್ಗೈಕಪರಾಯಣನಾಗಿಯೂ ಇರತಕ್ಕವನು, ಇಹಪರ ಸೌಖ್ಯಗಳೆರಡನ್ನೂ ಹೊಂದುವನು. ಲೋಕವ್ಯವಹಾರಜ್ಞಾನವನ್ನು ಮಾತ್ರ ಪಡೆದು ಧರ್ಮಮಾರ್ಗಾವಲಂಬನೆಯಲ್ಲಿ ಪರಾಙ್ಮುಖನಾದವನು, ಈ ಪ್ರಪಂಚದ ಸಂಪತ್ತನ್ನು ಹೊಂದಿದಾಗ್ಯೂ, ಇದರಿಂದುಂಟಾಗಬೇಕಾದ ಪರಮಸುಖವನ್ನು ಹೊಂದುವುದಿಲ್ಲ. ಇವನು, ಈ ಲೋಕದ ಸಂಪತ್ತನ್ನು ಹೊಂದಿ, ಹೊನ್ನು ಹೆಣ್ಣು ಮಣ್ಣುಗಳಿಗೆ ಭ್ರಮಿಸಿ, ಅಜ್ಞಾನದಿಂದುಂಟಾಗತಕ್ಕ ತಾಪತ್ರಯಗಳೆಂಬ ಸುಳಿಯಲ್ಲಿ ಸಿಕ್ಕಿ, ತಪ್ಪಿಸಿಕೊಳ್ಳುವುದಕ್ಕೆ ಶಕ್ತಿಯಿಲ್ಲದೆ, ಕೊನೆಗೆ ಅಧೋಗತಿಯನ್ನು ಹೊಂದುವನು. ಇದಕ್ಕೆ ಸರ್ವೋತ್ತಮವಾದ ಉದಾಹರಣೆಯು ಜ್ಞಾನವಾಸಿಷ್ಠದಲ್ಲಿರುವುದು.

ಶ್ರೀರಾಮನು, ವಿದ್ಯಾಭ್ಯಾಸವನ್ನು ಪೂರಯಿಸಿ, ತೀರ್ಥಯಾತ್ರೆಗೆ ಹೋಗಿ, ಪ್ರಪಂಚದಲ್ಲಿ ಸೃಷ್ಟಿ ಸ್ಥಿತಿ ಪ್ರಳಯಗಳು ಹೇಗೆ ನಡೆಯುತ್ತಿವೆಯೋ ಅದನ್ನು ಪರಿಶೀಲಿಸಿ, ಚಿಕ್ಕ ಪ್ರಾಣಿಗಳು ದೊಡ್ಡ ಪ್ರಾಣಿಗಳಿಗೆ ಹೇಗೆ ತುತ್ತಾಗುತ್ತಲಿವೆಯೋ, ಶಕ್ತಿಯುಳ್ಳ ಪ್ರಾಣಿಗಳು ದುರ್ಬಲವಾದ ಪ್ರಾಣಿಗಳನ್ನು ಹೇಗೆ ಹಿಂಸೆಮಾಡುತ್ತವೆಯೋ, ದುರ್ಬಲವಾದ ಪ್ರಾಣಿಗಳು ಬಲವುಳ್ಳ ಪ್ರಾಣಿಗಳದೆಸೆಯಿಂದ ತಮ್ಮನ್ನು ರಕ್ಷಿಸಿಕೊಳ್ಳುವುದಕ್ಕೆ ಪ್ರಯತ್ನ ಮಾಡಿದಾಗ್ಯೂ ಅನೇಕ ಸಂದರ್ಭಗಳಲ್ಲಿ ಹೇಗೆ ಭಗ್ನಮನೋರಥಗಳಾಗಿ ಪರಿಣಮಿಸುತ್ತವೆಯೋ, ಜನಗಳು ಕಾರ್ಯತಃ ಸ್ವಕಾರ್ಯಧುರಂಧರರಾಗಿದ್ದುಗೊಂಡು ತಾವೇ ಅಭಿನವಹರಿಶ್ಚಂದ್ರರಂತೆ ಹೇಗೆ ನಟಿಸುವರೋ, ಇವರ ನಟನೆಗೆ ಊಹಾಪೋಹಗಳಿಲ್ಲದವರು ಹೇಗೆ ಮರುಳಾಗುತ್ತಾರೋ, ಧರ್ಮಕ್ಕೆ ಲೋಪವೂ ಅಧರ್ಮಕ್ಕೆ ಪ್ರಾಶಸ್ತ್ಯವೂ ಹೇಗೆ ಉಂಟಾಗಿರುವುವೋ, ಇವುಗಳನ್ನೆಲ್ಲ ನೋಡಿ, ಇಂಥ ಅಧರ್ಮಮಯಪ್ರಪಂಚದ ಸೃಷ್ಟಿ ಸ್ಥಿತಿ ಪ್ರಳಯಗಳಿಗೆ ದೇವರು ಎಂದಿಗಾದರೂ ಕಾರಣಭೂತನಾದಾನೇ-ಎಂಬ ಸಂದೇಹವನ್ನು ಹೊಂದಿ, ಆಹಾರವಿಹಾರಗಳಲ್ಲಿಯೂ ಕೂಡ ಉದಾಸೀನನಾಗಿ, ಇಂಥ ಪ್ರಪಂಚದಲ್ಲಿ ಬದುಕುವುದಕ್ಕಿಂತ ದೇಹವನ್ನು ಬಿಡುವುದುತ್ತಮವೇ ಅಲ್ಲವೇ ಎಂಬುದನ್ನು ಪರ್ಯಾಲೋಚಿಸುತ್ತ, ಸ್ನಾನಾದಿಗಳನ್ನು ಕೂಡ ಬಿಟ್ಟು, ತಾಯಿತಂದೆಗಳು ಪ್ರವೃತ್ತಿಮಾರ್ಗಕ್ಕೆ ಒರುವಂತೆ ಉಪದೇಶ ಮಾಡಿದಾಗ್ಯೂ ಅದನ್ನು ಕೇಳದೆ, ಜಡಭರತನಂತೆ ಅಂತರ್ಮುಖನಾಗಿದ್ದಾಗ, ವಿಶ್ವಾಮಿತ್ರರು ಬಂದು ದುಷ್ಟನಿಗ್ರಹಾರ್ಥವಾಗಿ ಶ್ರೀರಾಮಲಕ್ಷ್ಮಣರನ್ನು ಕಳುಹಿಸಬೇಕೆಂದು ಪ್ರಾರ್ಥಿಸಲು, ಶ್ರೀರಾಮನು ಬಂದರೆ

ಕರೆದುಕೊಂಡು ಹೋಗಬಹುದೆಂದು ದಶರಥನು ಹೇಳಿದನು. ಆಗ ಅರ
ಮನೆಯಲ್ಲಿ ಸೇರಿಸಲ್ಪಟ್ಟ ಮಹಾಸಭೆಯಲ್ಲಿ, ಶ್ರೀರಾಮನು ಮಾಡಿದ ಪ್ರಶ್ನೆ
ಗಳಿಗೆ ಉತ್ತರವನ್ನು ಕೊಡುವುದು ಅಸಾಧ್ಯವಾಗಿ ತೋರಲು, ವಿಶ್ವಾಮಿ
ತ್ರರು ವಸಿಷ್ಠರನ್ನು ಕುರಿತು, ಈ ಪ್ರಶ್ನೆಗಳಿಗೆ ನೀವು ಹೊರತು ಮತ್ತಾರೂ
ಸರಿಯಾದ ಉತ್ತರವನ್ನು ಕೊಡುವುದಕ್ಕೆ ಶಕ್ತರಲ್ಲವೆಂದು ಹೇಳಿ, ಉತ್ತರ
ವನ್ನಪ್ಪಣೆಕೊಡಬೇಕೆಂದು ಪ್ರಾರ್ಥಿಸಲು, ವಸಿಷ್ಠರು, ಶ್ರೀರಾಮನಿಗೆ
ಸದ್ಧರ್ಮಗಳನ್ನು ಉಪದೇಶಮಾಡಿ, ಪ್ರವೃತ್ತಿಮಾರ್ಗಕ್ಕೆ ಅವನು ಬರು
ವಂತೆಯೂ ದುಷ್ಟನಿಗ್ರಹ ಶಿಷ್ಟಪರಿಪಾಲನೆಗಳಿಂದ ದೇಶವನ್ನು ರಕ್ಷಿಸಿ
ಕೃತಕೃತ್ಯನಾಗುವಂತೆಯೂ ಮಾಡಿದರು. ಶ್ರೀರಾಮನು ತೀರ್ಥಯಾತ್ರೆಗೆ
ಹೋಗದೆ ದೇಶಾಟನವನ್ನೂ ಪಂಡಿತಭಾಷಣವನ್ನೂ ಮಾಡದೆ ಕೂಪ
ಕೂರ್ಮದಂತೆ ಅಯೋಧ್ಯೆಯಲ್ಲಿಯೇ ಇದ್ದಿದ್ದರೆ, ಎಂದಿಗೂ ಅವತಾರ
ಪುರುಷನೆಂದು ಗಣಿಸಲ್ಪಡುತ್ತಿರಲಿಲ್ಲ ; ಸೇತುವಿನಿಂದ ಹಿಡಿದು ಹಿಮಾಚಲ
ದವರೆಗೂ ಮಹಾವಿಷ್ಣುವಿನ ಅವತಾರಪುರುಷನೆಂದು ಲಕ್ಷಾಂತರವರುಷ
ಗಳಿಂದ ಎಂದಿಗೂ ಪೂಜಿಸಲ್ಪಡುತ್ತಿರಲಿಲ್ಲ. ಲೋಕವ್ಯವಹಾರಜ್ಞಾನವೂ,
ಮನೋವಾಕ್ಕರ್ಮಗಳಲ್ಲಿ ಧರ್ಮದಿಂದ ನಡೆಯಬೇಕೆಂಬ ಸಂಕಲ್ಪವೂ, ಈ
ಸಂಕಲ್ಪಕ್ಕೆ ವಿರೋಧವಾಗಿ ನಡೆಯುವಂತೆ ಮಾಡತಕ್ಕ ಆಶೆಗಳು ಎಷ್ಟು
ಬಂದಾಗ್ಯೂ ಅವಕ್ಕಧೀನನಾಗದೆ ಸತ್ಯಕ್ಕೆ ಲೋಪಬರುವುದಾದರೆ ಪ್ರಾಣ
ವನ್ನು ಬಿಡುವುದೇ ಉತ್ತಮವೆಂಬ ನಿಷ್ಕರ್ಷೆಯೂ ಶ್ರೀರಾಮನಲ್ಲಿ ಪರಿ
ಪೂರ್ಣವಾಗಿದ್ದುವು. ಈ ಗುಣಾತಿಶಯಗಳಿಂದಲೇ, ಶ್ರೀರಾಮನು
ಅವತಾರಪುರುಷನಾಗಿ ಪರಿಣಮಿಸಿದನು. ಈ ಜ್ಞಾನವಾಸಿಷ್ಠದ ಸಾರ

ವನ್ನು ಸ್ವಲ್ಪಮಾತ್ರ ಸಂಗ್ರಹಿಸಿ "ಪೌರುಷಪ್ರಕಾಶ" ವೆಂಬ ಹೆಸರಿನಿಂದ ಒಂದು ಗ್ರಂಥವನ್ನು, ನಮ್ಮ ಶ್ರೀಮನ್ಮಹಾರಾಜರವರ ಆಸ್ಥಾನಪಂಡಿತ ರೊಬ್ಬರು, ಬಹುಕಾಲದ ಹಿಂದೆಯೇ ಮುದ್ರಿಸಿರುವರು. ಈಗ ಅವರಿಂದಲೇ ಈ ವಾಸಿಷ್ಠವು ಕರ್ಣಾಟಕಭಾಷಾ ಟೀಕಾತಾತ್ಪರ್ಯಗಳೊಡನೆ ಮುದ್ರಿಸ ಲ್ಪಡುತಿರುವುದು. ತಮ್ಮ ಪ್ರಜೆಗಳನ್ನು ಹೇಗಾದರೂ ಮಾಡಿ ಮುಂದಕ್ಕೆ ತರಬೇಕೆಂಬ ದೃಢಸಂಕಲ್ಪವುಳ್ಳವರಾಗಿಯೂ, ತಮ್ಮ ರಾಜ್ಯವನ್ನು ರಾಮ ರಾಜ್ಯವೆಂದೆನ್ನಿಸಬೇಕೆಂದು ಶ್ರಮಪಡತಕ್ಕವರಾಗಿಯೂ ಇರುವ, ಪ್ರಾಜ್ಞ ಶಿರೋಮಣಿಗಳಾದ, ನಮ್ಮ ಶ್ರೀಮನ್ಮಹಾರಾಜರವರು, ಈ ಜ್ಞಾನ ವಾಸಿಷ್ಠದ ಟೀಕೆಗೆ ತಮ್ಮ ದಿವ್ಯನಾಮಾಂಕಿತವನ್ನು ಅನುಗ್ರಹಿಸಿರುವರು. ವಸಿಷ್ಠರು ಶ್ರೀರಾಮನಿಗೆ ಮಾಡಿದ ಉಪದೇಶವನ್ನು ವಿಸ್ತಾರವಾಗಿ ತಿಳಿದು ಕೊಳ್ಳಲಪೇಕ್ಷೆಯುಳ್ಳವರಿಗೆ, ಈ ಗ್ರಂಥಗಳು ಬಹಳಪ್ರಯೋಜನಕರವಾಗಿ ರುವುವು.

"ತುಂಬಿದ ಕೊಡ ತುಳುಕುವುದಿಲ್ಲ" ಎಂಬ ಗಾದೆಯನ್ನು ಎಲ್ಲರೂ ಕೇಳಿರುವರು. ಆದರೆ, ಅದರ ಪ್ರಯೋಜನವನ್ನು ಹೊಂದಿರ ತಕ್ಕವರು ಬಹಳವಿರಳರಾಗಿರುವರು. ಈ ಪ್ರಪಂಚದಲ್ಲಿ ವ್ಯಾಸಂಗಮಾಡು ವುದಕ್ಕೆ ಯೋಗ್ಯವಾದ ಶಾಸ್ತ್ರಗಳು ಅಸಂಖ್ಯಾತವಾಗಿರುತ್ತವೆ ಈ ಭೂಮಿಯಂತೆ ಇರತಕ್ಕ ಲೋಕಗಳು, ಈ ಸೂರ್ಯನ ಸುತ್ತಲೂ ಅನೇಕ ವಾಗಿರುವುವು ; ಇಂಥ ಸೂರ್ಯಮಂಡಲಗಳೂ ಕೋಟ್ಯಂತರವಾಗಿರುವುವು, ಬರೀಕಣ್ಣಿಗೆ ಗೊತ್ತಾಗತಕ್ಕ ಭೂಮಂಡಲಗಳೂ, ಸೂರ್ಯಮಂಡಲಗಳೂ, ಚಂದ್ರಮಂಡಲಗಳೂ ಎಷ್ಟೋ ಇರುವುವು. ನಮ್ಮ ಕಣ್ಣುಗಳಿಗಿರುವ

ದೂರದೃಷ್ಟಿಯನ್ನು ನಾಲ್ವತ್ತು ಸಾವಿರದಷ್ಟು ಹೆಚ್ಚಿಸತಕ್ಕ ದುರ್ಬೀನುಗಳು ಈಗ ನಿರ್ಮಿತವಾಗಿರುವುವು. ಬರೀಕಣ್ಣಿಗೆ ಕಾಣತಕ್ಕ ನಕ್ಷತ್ರಗಳಿಗಿಂತಲೂ, ಗ್ರಹಗಳಿಗಿಂತಲೂ, ದುರ್ಬೀನಿನಲ್ಲಿ ನೋಡತಕ್ಕವರ ಕಣ್ಣಿಗೆ, ಹೆಚ್ಚಾಗಿ ಕೋಟ್ಯಂತರ ನಕ್ಷತ್ರಗಳೂ ಗ್ರಹಗಳೂ ಕಾಣುತ್ತವೆ. ಈ ಅಖಂಡ ಬ್ರಹ್ಮಾಂಡಕ್ಕೆ ಕೊನೆ ಮೊದಲೊಂದೂ ಗೊತ್ತಾಗುವುದಿಲ್ಲ. ಆದ್ದರಿಂದಲೇ, ಈ ಬ್ರಹ್ಮಾಂಡವು ಆದ್ಯಂತರಹಿತವಾದುದೆಂಬುದಾಗಿಯೂ, ಇದಕ್ಕೆ ಒಡೆಯನಾಗಿಯೂ ಇದರಲ್ಲಿ ವ್ಯಾಪ್ತನಾಗಿಯೂ ಇರತಕ್ಕ ಜಗದೀಶ್ವರನು ಅನಂತನೆಂಬುದಾಗಿಯೂ, ಬುದ್ಧಿಶಾಲಿಗಳು ತಿಳಿಯುವರು ಈ ಸೃಷ್ಟಿಕ್ರಮವನ್ನು ನೋಡಿದರೆ, ಮನುಷ್ಯನು ಈ ಬ್ರಹ್ಮಾಂಡದಲ್ಲಿ ಒಂದು ಪಿಪೀಲಿಕೆಯಂತೆ ಪರಿಣಮಿಸುವನು. ಇವನ ಜ್ಞಾನವೂ ಬುದ್ಧಿಯೂ ಅಲ್ಪವಾಗಿದ್ದಾಗ್ಯೂ, ಜ್ಞಾನವಿಹೀನರಾದವರು ತಾವು ಸರ್ವಜ್ಞರೆಂದು ವಿಜೃಂಭಿಸುವರು. ಇಂಥ ವಿಜೃಂಭಣೆಗೆ, ಅಲ್ಪವಿದ್ಯೆಯೂ ಅಲ್ಪಜ್ಞಾನವೂ ಕಾರಣವಾಗಿರುವುವು. ನಿಷ್ಕೃಷ್ಟವಾದ ಜ್ಞಾನಕ್ಕೆ, ಆಚರಣೆಯೇ ಲಕ್ಷಣವು. ಜ್ಞಾನಶಾಲಿಗಳೆಂದು ವಿಜೃಂಭಿಸತಕ್ಕವರಲ್ಲಿ, ಅವರು ಪಡೆದಿರತಕ್ಕ ಅಲ್ಪಜ್ಞಾನವು ಎಷ್ಟುಮಟ್ಟಿಗೆ ಆಚರಣೆಯಲ್ಲಿರುವುದೋ ಅದನ್ನು ಪರಿಶೀಲಿಸಿದರೆ, ಎಂಥವರಿಗಾದರೂ ಬಹಳ ವಿಷಾದವಾಗದಿರಲಾರದು. ಸರ್ವವಿದ್ಯಾವಿಶಾರದರೆಂದು ತಿಳಿದುಕೊಂಡಿರತಕ್ಕ ಜನಗಳೂ ಕೂಡ ಇಂದ್ರಿಯಪರವಶರಾಗಿ ತಮ್ಮ ಜ್ಞಾನಕ್ಕೆ ಅನನುರೂಪವಾದ ಕೆಲಸಗಳನ್ನು ಮಾಡಿ ಪತಿತರಾಗುತ್ತಲಿರುವುದನ್ನು, ನಾವು ಪ್ರತಿದಿನದಲ್ಲಿಯೂ ನೋಡುತ್ತಲಿದ್ದೇವೆ. ವೈರಾಗ್ಯಚಕ್ರವರ್ತಿಗಳ ವೇಷವನ್ನು ಧರಿಸಿ, ಅದಕ್ಕನನುರೂಪವಾದ ಕೆಲ

ಸಗಳನ್ನು ಮಾಡತಕ್ಕವರು, ಎಲ್ಲೆಲ್ಲಿಯೂ ಬೇಕಾದಹಾಗಿರುತ್ತಾರೆ. ಸರ್ವ ಸಂಗಪರಿತ್ಯಾಗಮಾಡಿದ ಸನ್ಯಾಸಿಗಳ ವೇಷವೆಲ್ಲಿ? ಧರ್ಮಾಧರ್ಮ ವಿಚಾರವಿಲ್ಲದೆ ಪರರ ಸ್ವತ್ತನ್ನು ಅಪೇಕ್ಷಿಸುವುದೆಲ್ಲಿ? ಎಷ್ಟು ವಿದ್ಯಾವಂತ ರಾದಾಗ್ಯೂ, ಎಷ್ಟು ಜ್ಞಾನಶಾಲಿಗಳಾದಾಗ್ಯೂ, ವೃದ್ಧಿಗೆ ಬರಬೇಕೆಂಬ ಅಪೇಕ್ಷೆಯುಳ್ಳವರು, ತಮ್ಮ ದೇಹಶಕ್ತಿ ಬುದ್ಧಿಶಕ್ತಿಗಳ ಪ್ರಮಾಣವನ್ನು ತಿಳಿದುಕೊಳ್ಳಬೇಕು. ಜಾರ್ಜ್ ಸನ್ ಎಂಬಾತನು, ದರ್ಜಿಕೆಲಸದಿಂದ ಅಮೆ ರಿಕಾಖಂಡದ ಸಂಯುಕ್ತಸಂಸ್ಥಾನಗಳ ಪ್ರೆಸಿಡೆಂಟ್ ಪದವಿಗೆ ಬಂದನು. ಆರ್ಕ್‌ರೈಟ್ ಎಂಬವನು ಕ್ಷೌರಕನಾಗಿದ್ದು, ಸ್ಪಿನಿಂಗ್ ಜೆನಿ ಎಂಬ ನೂಲುವ ಯಂತ್ರವನ್ನು ನಿರ್ಮಾಣಮಾಡಿ, ತಾನು ಕುಬೇರನಾದುದಲ್ಲದೆ, ಸಮಸ್ತ ರಿಂದಲೂ ಪೂಜಿಸಲ್ಪಡುವ ಸ್ಥಿತಿಗೆ ಬಂದನು. ವಿದ್ಯಾರ್ಥಿದಶೆಯಲ್ಲಿ ಸಂಸಾರ ಸುಖಗಳ ಮೇಲೆ ಅಪೇಕ್ಷೆಯನ್ನಿಡದೆ ಸರ್ವತೋಮುಖವಾದ ಪ್ರಜ್ಞೆ ಯನ್ನು ಸಂಪಾದಿಸುವುದರಲ್ಲಿ ಯಾರು ಸಂಪೂರ್ಣವಾಗಿ ವ್ಯವಸಾಯ ಮಾಡುತ್ತಾರೋ, ಅವರು ಮಹೋನ್ನತಸ್ಥಿತಿಗೆ ಬರುವರು.

ನಾಗೋಜಿದೀಕ್ಷಿತರೆಂಬವರು, ಶೇಖರ ಮೊದಲಾದ ವ್ಯಾಕರಣ ಗ್ರಂಥಗಳನ್ನು ಬರೆದು, ಸಂಸ್ಕೃತಪಂಡಿತರಲ್ಲಿ ಅದ್ವಿತೀಯವಾದ ಮಹಿಮೆ ಯನ್ನು ಹೊಂದಿದ್ದರು. ಇವರು ದಕ್ಷಿಣದೇಶಸ್ಥರು. ಇವರಿಗೆ ಬಾಲ್ಯ ದಲ್ಲಿಯೇ ವಿವಾಹವಾಯಿತು. ವಿವಾಹವಾದ ಕೆಲವು ದಿವಸಗಳಲ್ಲಿಯೇ, ಇವರು ನವದ್ವೀಪಕ್ಕೆ ಪ್ರಯಾಣಮಾಡಿದರು. ಅಲ್ಲಿ ಅನೇಕ ಶಾಸ್ತ್ರಗಳನ್ನು ವ್ಯಾಸಂಗಮಾಡಿದರು. ವ್ಯಾಕರಣವನ್ನು ವಿಶೇಷವಾಗಿ ವ್ಯಾಸಂಗಮಾಡಿ ಅನನ್ಯಸಾಧಾರಣವಾದ ಪಾಂಡಿತ್ಯವನ್ನು ಹೊಂದಿ, ಶಬ್ದೇಂದುಶೇಖರ

ಮೊದಲಾದ ವ್ಯಾಖ್ಯಾನಗಳನ್ನು ಬರೆದರು. ಇವರಿಗೆ ದಿಗಂತವಿಶ್ರಾಂತ ವಾದ ಕೀರ್ತಿ ಬಂದಿತು. ಇಂಥ ಕೀರ್ತಿ ಬರುವಾಗ್ಗೆ, ಇವರಿಗೆ ಸುಮಾರು ಎಂಬತ್ತುವರುಷ ವಯಸ್ಸಾಗಿದ್ದಿತು. ಇವರ ಹೆಂಡತಿಗೆ ಎಪ್ಪತ್ತ ರಮೇಲೆ ವಯಸ್ಸಾಗಿದ್ದಿತು. ಈ ದಂಪತಿಗಳಿಗೆ ಬಾಲ್ಯದಲ್ಲಿಯೇ ವಿಯೋಗವುಂಟಾಗಿ, ಆಕೆಗೆ ಇವರ ವರ್ತಮಾನವೇ ತಿಳಿದಿರಲಿಲ್ಲ; ದೇಶಾಂತ ರಕ್ಕೆ ಹೋಗಿ ಎಲ್ಲಿಯೋ ದೇಹವನ್ನು ಬಿಟ್ಟಿರಬಹುದೆಂಬ ಸಂದೇಹವೂ ಉಂಟಾಗಿದ್ದಿತು. ಅಕಸ್ಮಾತ್ತಾಗಿ, ದೀಕ್ಷಿತರು ಬದುಕಿರುವರೆಂಬುದಾ ಗಿಯೂ ಅನನ್ಯಸಾಧಾರಣವಾದ ಕೀರ್ತಿಯು ಇವರಿಗೆ ಲಭ್ಯವಾಗಿರುವು ದೆಂಬುದಾಗಿಯೂ ತಿಳಿದು, ಈಕೆಯು ಉತ್ತರದೇಶಕ್ಕೆ ಪ್ರಯಾಣಮಾಡಿ ಗಂಡನ ಮನೆಗೆ ತಲುಪಿ, ತನ್ನ ವೃತ್ತಾಂತವನ್ನೆಲ್ಲಾ ತಿಳಿಯಿಸಿದಳು. ದೀಕ್ಷಿ ತರು ಆಕೆಯನ್ನು ಪರಿಗ್ರಹಿಸಿ, ಮನೆಗೆ ಯಜಮಾನಿಯನ್ನಾಗಿ ಮಾಡಿ, ಶಿಷ್ಯರ ಯೋಗಕ್ಷೇಮ ಚಿಂತೆಯನ್ನು ಆಕೆಗೊಪ್ಪಿಸಿದರು. ಒಂದಾನೊಂದುದಿನ ಆಕೆಯು ದೀಕ್ಷಿತರನ್ನು ಕುರಿತು “ನೀವು ಬಾಲ್ಯದಲ್ಲಿಯೇ ನನ್ನನ್ನು ಅನಾಥಳನ್ನಾಗಿ ಬಿಟ್ಟು ಇಲ್ಲಿಗೆ ಬಂದು ನಿಮ್ಮ ಯೌವನವೂ ನನ್ನ ಯೌವ ನವೂ ವ್ಯರ್ಥವಾಗುವಂತೆ ಮಾಡಿ ಮಕ್ಕಳಿಲ್ಲದಂತೆ ಮಾಡಿದ್ದಕ್ಕೋಸ್ಕರ ತುಂಬ ವ್ಯಸನಪಡಬೇಕಾಗಿದೆ” ಎಂದು ಹೇಳಿದಳು. ಅದನ್ನು ಕೇಳಿ ದೀಕ್ಷಿ ತರು “ಇಷ್ಟು ವಯಸ್ಸಾಗಿಯೂ ನಿನಗೆ ಸಾರಾಸಾರಜ್ಞಾನವಿಲ್ಲದೆ ಹೋದುದಕ್ಕೋಸ್ಕರ ನಾನು ತುಂಬ ವಿಷಾದಿಸುತ್ತೇನೆ. ನಮಗೆ ಸಂತಾನ ವಿಲ್ಲವೆಂದು ಭಾವಿಸಬೇಡ; ನಾನು ಐವತ್ತು ಅರವತ್ತು ವರುಷಗಳು ಕಷ್ಟ ಪಟ್ಟು ಆಚಂದ್ರಾರ್ಕಸ್ಥಾಯಿಗಳಾದ ಮಕ್ಕಳನ್ನು ಪಡೆದಿರುತ್ತೇನೆ. ಶಬ್ದೇಂ

ದುಶೇಖರ ಮೊದಲಾದ ಗ್ರಂಥಗಳೇ ನಮ್ಮ ಮಕ್ಕಳಲ್ಲವೇ? ಇದು ಹಾಗಿರಲಿ; ಇವುಗಳು ಮಾತ್ರವೇ ನಮ್ಮ ಮಕ್ಕಳಲ್ಲ ; ಈ ಗ್ರಂಥಗಳನ್ನು ವ್ಯಾಸಂಗಮಾಡಿ ವಿದ್ವಾಂಸರಾಗತಕ್ಕವರೆಲ್ಲರೂ ನಮ್ಮ ಮಕ್ಕಳು'' ಎಂದು ಹೇಳಿದರು. ಇದನ್ನು ಕೇಳಿ, ಆಕೆಯು ಮಕ್ಕಳಿಲ್ಲದ ಕ್ಲೇಶವನ್ನು ಬಿಟ್ಟು, ವಿದ್ಯಾರ್ಥಿಗಳ ಯೋಗಕ್ಷೇಮ ಚಿಂತೆಯಲ್ಲಿ ಬದ್ಧಾಧರಳಾದಳು. ಈ ದಂಪತಿಗಳಿಬ್ಬರೂ ಕಾಲಾಧೀನರಾದರು; ಆದರೆ, ದೀಕ್ಷಿತರು ಅಪ್ಪಣೆ ಕೊಡಿಸಿದಂತೆ, ಅವರ ಯಶಸ್ಸೂ ಅವರ ಗ್ರಂಥಗಳೂ ಆಚಂದ್ರಾರ್ಕವಾಗಿರುವುವು. ವಿದ್ಯಾರ್ಥಿದಶೆಯಲ್ಲಿ ವಿಷಯಸುಖಗಳ ಮೇಲೆ ಮನಸ್ಸನ್ನಿಡದೆ ಜ್ಞಾನಾರ್ಜನೆಗೋಸ್ಕರ ಪ್ರಯತ್ನಮಾಡುತ್ತ, ಆ ಪ್ರಯತ್ನಗಳಿಗೆ ಎಷ್ಟು ಭಂಗ ಬಂದಾಗ್ಯೂ ಹೆದರದೆ, ಹಿಡಿದ ಕೆಲಸವನ್ನು ಸಾಧಿಸುವುದು ಅಸಾಧ್ಯವಾದರೆ ಅದನ್ನು ಸಾಧಿಸುವ ಪ್ರಯತ್ನದಲ್ಲಿ ದೇಹತ್ಯಾಗವನ್ನಾದರೂ ಮಾಡುವುದೇ ಸರಿ-ಎಂಬ ಸಂಕಲ್ಪದಿಂದ ಯಾರು ಕೆಲಸಮಾಡುವರೋ, ಅವರು ಇಷ್ಟಾರ್ಥಸಿದ್ಧಿಯನ್ನು ಹೊಂದುವರು.

ವಿದ್ಯಾವಂತರು ಪ್ರಪಂಚದಲ್ಲಿ ಬೇಕಾದಹಾಗೆ ಸಿಕ್ಕುತ್ತಾರೆ. ವಿದ್ಯೆಗೆ ವಿನಯವು ಕಿರೀಟಪ್ರಾಯವಾದುದು. ಧರ್ಮದಿಂದ ನಡೆಯುವುದು, ಎಂಥ ಕಷ್ಟ ಬಂದಾಗ್ಯೂ ಅಧರ್ಮಕ್ಕೆ ಬೀಳದಿರುವುದು, ಇವೆರಡೂ ವಜ್ರಕವಚಕ್ಕೆ ಸಮಾನವಾದುವುಗಳು. ವಿದ್ಯೆ ವಿನಯ ಧರ್ಮ-ಈ ಮೂರೂ ಯಾರಲ್ಲಿ ಸೇರಿರುವುವೋ, ಅವರೇ ತಪಸ್ವಿಗಳು; ಅವರನ್ನು ಯಾರೂ ಗೆಲ್ಲಲಾರರು. ಇದಕ್ಕೆ, ವೇದ ಶಾಸ್ತ್ರ ಪುರಾಣೇತಿಹಾಸಗಳಲ್ಲಿಯೂ, ಸಮಸ್ತ ದೇಶಗಳ ಚರಿತ್ರೆಗಳಲ್ಲಿಯೂ, ಗೊತ್ತಿಲ್ಲದಷ್ಟು ದೃಷ್ಟಾಂತಗಳಿರುತ್ತವೆ. ಭಾಗವತ

ದಲ್ಲಿರುವ ಯುಕ್ತಿಯುಕ್ತವಾದ ಒಂದು ದೃಷ್ಟಾಂತವು, ಇಲ್ಲಿ ಸೂಚಿಸಲ್ಪ
ಡುವುದಕ್ಕೆ ಯೋಗ್ಯವಾಗಿದೆ. ಅಂಬರೀಷನೆಂಬ ರಾಜನು, ಭಾಗವತೋತ್ತ
ಮನು. ವಿದ್ಯೆಯನ್ನೂ, ವಿನಯಾದಿ ಸದ್ಗುಣಗಳನ್ನೂ, ಮನೋವಾಕ್ಕರ್ಮ
ಗಳಲ್ಲಿ ಧರ್ಮಯುಕ್ತನಾಗಿರುವುದನ್ನೂ, ಇವನು ಆಚರಣೆಯಲ್ಲಿಟ್ಟುಕೊಂಡಿ
ದ್ದನು. ಒಂದಾನೊಂದು ದಿವಸ, ದೂರ್ವಾಸನು ಇವನ ಬಳಿಗೆ ಬಂದನು ;
ಅಂಬರೀಷನು ಅವನಿಗೆ ಅವನ ಪದವಿಗನುರೂಪವಾದ ಮರ್ಯಾದೆಗಳನ್ನೆಲ್ಲ
ಮಾಡಿ, ಸ್ನಾನವನ್ನು ತೀರಿಸಿಕೊಂಡು ಭೋಜನಕ್ಕೆ ಬರಬೇಕೆಂದು ಪ್ರಾರ್ಥಿ
ಸಿದನು. ಆಮೇಲೆ ದೂರ್ವಾಸಮುನಿಯು ಸ್ನಾನಕ್ಕೆ ಹೊರಟುಹೋಗಿ,
ಎಷ್ಟುಹೊತ್ತಾದರೂ ಬರಲಿಲ್ಲ. ಆಗ ಅಂಬರೀಷನು ತನ್ನ ದ್ವಾದಶೀ
ವ್ರತಕ್ಕೆ ಲೋಪವುಂಟಾಗುವುದೆಂದು, ಜಲಪಾರಣೆಯನ್ನು ಮಾಡಿದನು.
ಇದನ್ನು ತಿಳಿದು ದೂರ್ವಾಸಮುನಿಯು ಕೋಪಮಾಡಿಕೊಂಡು, ಅಂಬರೀ
ಷನನ್ನು ನಾನಾವಿಧವಾಗಿ ನಿಂದಿಸಿ, ಅವನನ್ನು ದಹಿಸಿಬಿಡುವುದಕ್ಕೋಸ್ಕರ
ಒಂದು ಶಕ್ತಿಯನ್ನು ಪ್ರಯೋಗಮಾಡಿದನು. ಕೂಡಲೆ, ಮಹಾವಿಷ್ಣು
ವಿನ ಚಕ್ರರೂಪವಾದ ಆ ಶಕ್ತಿಯು, ದೂರ್ವಾಸನ ಶಕ್ತಿಯನ್ನು ದಹಿಸಿ,
ಅವನನ್ನೂ ದಹಿಸುವುದಕ್ಕೆ ಹೋಯಿತು. ಆಗ ಬ್ರಹ್ಮನೂ ಮಹೇಶ್ವರನೂ
ಇವನನ್ನು ರಕ್ಷಿಸುವುದಕ್ಕೆ ಸಮರ್ಥರಾಗದೆಹೋದರು. ಕೊನೆಗೆ ದೂರ್ವಾ
ಸನು ವಿಷ್ಣುವನ್ನು ಮರೆಹೊಕ್ಕು, ಅನಂತರ ಅಂಬರೀಷನನ್ನೂ ಮರೆ
ಹೊಕ್ಕು, ತನ್ನ ಪ್ರಾಣವನ್ನು ರಕ್ಷಿಸಿಕೊಂಡನು. ಈ ವಿಷಯವಿಲ್ಲಿಗಿರಲಿ;
ಮುಖ್ಯವೇನೆಂದರೆ,–ವಿದ್ಯಾವಿನಯಸಂಪನ್ನನಾಗಿಯೂ, ಧರ್ಮಮಾರ್ಗೈಕ
ಪರಾಯಣನಾಗಿಯೂ ಇರತಕ್ಕವನನ್ನು, ಉನ್ಮತ್ತತೆಯಿಂದ ಮೂಲೋ

ತ್ಪಾಟನಮಾಡಬೇಕೆಂದು ಯಾರು ಪ್ರಯತ್ನಮಾಡಿದಾಗ್ಯೂ, ಆ ಪ್ರಯತ್ನ ದಿಂದ ಅವರೇ ಮೂಲೋತ್ಪಾಟನಮಾಡಲ್ಪಡುವರು.

ಪೂರ್ವದಲ್ಲಿ ಪ್ರಹ್ಲಾದನನ್ನು ಕೊಲ್ಲಬೇಕೆಂದು, ಅವನ ತಂದೆ ಪ್ರಯತ್ನಮಾಡಿದನು. ಅದರಿಂದ ತಾನೇ ದೇಹವನ್ನು ಬಿಡಬೇಕಾಯಿತು. ರಾವಣನು ಜಿತೇಂದ್ರಿಯನಾಗಿದ್ದಾಗ ಮಹೋನ್ನತಪದವಿಯನ್ನು ಹೊಂದಿದನು; ಅಜಿತೇಂದ್ರಿಯನಾಗಿ ಸೀತೆಯನ್ನು ಮೋಹಿಸಿ ತನ್ನ ಸರ್ವಸ್ವವನ್ನೂ ಕಳೆದುಕೊಂಡುದುದಲ್ಲದೆ, ಪ್ರಾಣವನ್ನೂ ಬಿಟ್ಟನು. ದುರಾಶೆಯೆಂಬ ಪಿಶಾಚನಿಂದ ಹಿಡಿಯಲ್ಪಟ್ಟು, ಕೌರವರು, ಧರ್ಮಿಷ್ಠರಾದ ಪಾಂಡವರಿಗೆ ಐದು ಗ್ರಾಮಗಳನ್ನೂ ಕೊಡುವುದಿಲ್ಲವೆಂದು ಹೇಳಿದರು; ಕೊನೆಗೆ ಅವರೆಲ್ಲರೂ ನಾಮಾವಶೇಷವಾದರು. ಇಂತಹ ಉದಾಹರಣೆಗಳು ಪ್ರತಿದಿನವೂ ಗೊತ್ತಿಲ್ಲದಷ್ಟು ನಡೆಯುತಲಿರುವುವು; ಇವುಗಳೆಲ್ಲ ಪ್ರತಿಯೊಬ್ಬರ ಅನುಭವಕ್ಕೂ ಬರುತಲಿರುವುವು. ಆದುದರಿಂದ, ಬರಿಯವಿದ್ಯೆಯಿಂದ ಇಷ್ಟಾರ್ಥಸಿದ್ಧಿಯಾಗುವುದೆಂದು ತಿಳಿದುಕೊಳ್ಳುವುದು ತಪ್ಪು; ವಿದ್ಯೆಯ ಜತೆಗೆ ವಿನಯಾದಿಸದ್ಗುಣಗಳೂ ಅತ್ಯಾವಶ್ಯಕಗಳು. ಈ ವಿಷಯವನ್ನು ವಿದ್ಯಾರ್ಥಿಗಳು ಯಾವಾಗ್ಲೂ ಮನಸ್ಸಿನಲ್ಲಿಟ್ಟುಕೊಂಡು ಅವುಗಳನ್ನು ಸಂಪಾದಿಸುವುದರಲ್ಲಿ ಉದ್ಯುಕ್ತರಾಗಬೇಕು.

ಪ್ರಾಣಿಗಳಿಗೆ ದೇವರು ಕೊಟ್ಟಿರತಕ್ಕ ಶಕ್ತಿಗಳಲ್ಲಿ ಅತ್ಯಂತೋಪಯುಕ್ತವಾದುದು ಜ್ಞಾಪಕಶಕ್ತಿಯು. ಈ ಶಕ್ತಿಯು ಅತ್ಯುತ್ತಮಸ್ಥಿತಿಯಲ್ಲಿರಬೇಕಾದರೆ, ವೀರ್ಯನಿಗ್ರಹರೂಪವಾದ ಬ್ರಹ್ಮಚರ್ಯವು ಅತ್ಯಾವಶ್ಯಕವು. ಈ ಬ್ರಹ್ಮಚರ್ಯದ ರಕ್ಷಣಕ್ಕೋಸ್ಕರವೇ, ನಮ್ಮ ಪೌರ್ವಿಕರು ಗುರುಕುಲವಾಸ

ವನ್ನು ನಿಯಮಿಸುತ್ತಿದ್ದರು. ಪಾಶ್ಚಾತ್ಯರಲ್ಲಿ ಯೂನಿವರ್ಸಿಟಗಳನ್ನೂ ಕಾಲೇಜುಗಳನ್ನೂ ಊರಿಗೆ ಸ್ವಲ್ಪದೂರದಲ್ಲಿ ಮಾಡಿ, ವಿದ್ಯಾರ್ಥಿನಿಲಯ ಗಳನ್ನು ಕಲ್ಪಿಸಿ, ವಿಷಯಸುಖಗಳ ಮೇಲೆ ಅವರ ಮನಸ್ಸು ಹೋಗದಂತೆ ಮಾಡಿರುವರು. ಯಾವಾಗಲೂ, ವಿದ್ಯಾಭ್ಯಾಸ, ವ್ಯಾಯಾಮ ರೂಪವಾದ ಆಟ, ಲೋಕೋತ್ತರವಾದ ಸ್ಥಿತಿಗೆ ಬರಬೇಕೆಂಬ ಅಭಿಲಾ ಷೆಗೆ ಸಾಧಕವಾದ ಗ್ರಂಥಾವಲೋಕನ,–ಇವು ಮೊದಲಾದ ಏರ್ಪಾ ಡುಗಳು, ಅಸ್ಖಲಿತ ಬ್ರಹ್ಮಚರ್ಯಕ್ಕೆ ಸಾಧಕಗಳಾಗಿ ಮಾಡಲ್ಪಟ್ಟಿರು ವುವು. ಇಲ್ಲಿ ವ್ಯಾಸಂಗಮಾಡತಕ್ಕವರು, ನಾಲ್ಕೈದುವರುಷಗಳಲ್ಲಿಯೇ, ಇತರ ಕಡೆಗಳಲ್ಲಿ ನಲವತ್ತು ಐವತ್ತುವರುಷ ವ್ಯಾಸಂಗಮಾಡತಕ್ಕವರಿಗೂ ಅಸಾಧ್ಯವಾದಷ್ಟು ವಿದ್ಯಾರ್ಜನೆಯನ್ನು ಮಾಡುವರು; ಅಸಾಧಾರಣವಾದ ಬುದ್ಧಿಶಕ್ತಿಯೂ ಇವರಿಗುಂಟಾಗುವುದು. ದೇಹಶಕ್ತಿಯೂ ಇದೇರೀತಿ ಯಲ್ಲಿ ಪರಿಣಮಿಸುವುದು. ಈ ರೀತಿಯಲ್ಲಿ ಸುಶಿಕ್ಷಿತರಾದವರು, ನಮ್ಮ ದೇಶಕ್ಕೆ ವೈಸ್‌ರಾಯಿಗಳಾಗಿಯೂ, ಗವರ್ನರುಗಳಾಗಿಯೂ ಲೆಫ್ಟಿನೆಂಟ್ ಗವರ್ನರುಗಳಾಗಿಯೂ, ಹೈಕೋರ್ಟ್ ಜಡ್ಜಿಗಳಾಗಿಯೂ ಬರುತ್ತಲಿದ್ದಾರೆ. ಅಸ್ಖಲಿತಬ್ರಹ್ಮಚರ್ಯದ ಮಹಿಮೆಯೂ ಏಕಾಗ್ರಚಿತ್ತದಿಂದ ವ್ಯಾಸಂಗಮಾ ಡುವುದರ ಮಹಿಮೆಯೂ, ಅವರಲ್ಲಿ ಚೆನ್ನಾಗಿ ಗೊತ್ತಾಗುತ್ತದೆ. ನಮ್ಮ ದೇಶದಲ್ಲಿಯೂ, ಕಾಲೇಜುಗಳಿಗೂ ಸ್ಕೂಲುಗಳಿಗೂ ಸಂಬಂಧಪಟ್ಟಂತೆ, ವಿದ್ಯಾರ್ಥಿನಿಲಯಗಳು ಮಾಡಲ್ಪಟ್ಟಿವೆ. ನಮ್ಮ ಶ್ರೀಮನ್ಮಹಾರಾಜರವರು, ಅರಸುಮಕ್ಕಳ ಕ್ಷೇಮಾರ್ಥವಾಗಿ ಬೋರ್ಡಿಂಗ್‌ಸ್ಕೂಲನ್ನು ಮಾಡಿಸಿರು ವರು. ಇದೇರೀತಿಯಲ್ಲಿ, ಕಾಲೇಜ್‌ಹಾಸ್ಟೆಲ್‌ಗಳು ಏರ್ಪಾಡಾಗಿರುವುವು.

ಇವುಗಳೆಲ್ಲ, ಸ್ವಲ್ಪಮಟ್ಟಿಗೆ ಗುರುಕುಲಗಳಾಗಿಯೇ ಪರಿಣಮಿಸುವುವು. ಮನೆಗಳಲ್ಲಿ ವ್ಯಾಸಂಗಮಾಡತಕ್ಕ ಹುಡುಗರಿಗೆ ಜ್ಞಾಪಕಶಕ್ತಿಯನ್ನು ವೃದ್ಧಿಪಡಿಸುವುದಕ್ಕೆ ಇರುವ ಸೌಲಭ್ಯಗಳಿಗಿಂತಲೂ, ಈ ವಿದ್ಯಾರ್ಥಿನಿಲಯಗಳಲ್ಲಿ ಹೆಚ್ಚು ಸೌಲಭ್ಯಗಳಿರುತ್ತವೆ. ಈ ನಿಲಯವನ್ನು ಇನ್ನೂ ಉತ್ತಮಸ್ಥಿತಿಗೆ ತರುವುದು ಸಾಧ್ಯವೆಂದು ತೋರುವುದು. ಇವರಿಗೆ ಪಟ್ಟಣಗಳ ಸಂಸರ್ಗ ತಪ್ಪುವಂತೆ ಮಾಡಲ್ಪಟ್ಟರೆ, ಇವರ ವ್ಯಾಸಂಗವೂ ಹೆಚ್ಚಾದ ಏಕಾಗ್ರತೆಯಿಂದ ನಡೆಯಿಸಲ್ಪಡುವುದು ಸಾಧ್ಯವು.

ವೀರ್ಯನಿಗ್ರಹದ ಮಹಿಮೆಯಿಂದ, ಅನೇಕವಾಗಿ ಏಕಸಂಧಿಗ್ರಾಹಿಗಳು ಹೆಚ್ಚಬಹುದು. ಇಂಗ್ಲೀಷ್ ಭಾಷೆಯನ್ನು ಅತ್ಯಂತ ಲಲಿತವಾಗಿಯೂ ಅಸಾಧಾರಣಗಾಂಭೀರ್ಯಯುಕ್ತವಾಗಿಯೂ ನವರಸಭರಿತವಾಗಿಯೂ ಬರೆದಿರುವವರಲ್ಲಿ, ಲಾರ್ಡ್ ಮೆಕಾಲೆ ಎಂಬಾತನು ಒಬ್ಬನಾಗಿರುವನು. ಈತನು ಯಾವ ಹೊಸ ಗ್ರಂಥವನ್ನು ಕೈಗೆ ಕೊಟ್ಟಾಗ್ಯೂ ಒಂದಾವೃತ್ತಿ ಓದಿ ಚಾಚೂ (ಚ ತು) ತಪ್ಪಿಲ್ಲದಂತೆ ಒಪ್ಪಿಸುತ್ತಿದ್ದನು. ಇವನ ಶೈಲಿಯು ಅಸಾಧಾರಣವಾಗಿ ಪರಿಣಮಿಸುವುದಕ್ಕೆ, ಈ ಜ್ಞಾಪಕಶಕ್ತಿಯೇ ಮುಖ್ಯಕಾರಣವು. ಭೋಜರಾಯನ ಅರಮನೆಯಲ್ಲಿ ಏಕಸಂಧಿಗ್ರಾಹಿಗಳು ಅನೇಕರಿದ್ದರು. ಭೋಜನು ಮಹಾಕವಿಗಳಿಗೆ ಬಹುದ್ರವ್ಯವನ್ನು ಕೊಡುತ್ತಿದ್ದನು. ಒಂದಾನೊಂದು ಕಾಲದಲ್ಲಿ ಖಜಾನೆಯೊಳಗೆ ಹಣವಿಲ್ಲದಿದ್ದಾಗ ಒಬ್ಬ ಮಹಾಕವಿ ಬರುತ್ತಾನೆಂದು ಭೋಜನಿಗೆ ತಿಳಿಯಬಂದಿತು. ಆಗ ಇವನು ವಿಚಾರಪರನಾಗಿರುವುದನ್ನು ನೋಡಿ ಇವನ ದ್ವಾರಪಾಲಕನೊಬ್ಬನು ಬಂದು, ಖಜಾನೆಗೆ ಹಣಬರುವವರೆಗೂ ತಮಗೆ ಈ ಮಹಾಕವಿಗಳ

ತೊಂದರೆಯಿಲ್ಲದಂತೆ ನಾನು ಮಾಡುತ್ತೇನೆಂದು ಹೇಳಿದನು. ಒಳಿಕ ರಾಜನ ಅನುಜ್ಞೆಯನ್ನು ಹೊಂದಿ ದ್ವಾರಪಾಲಕನು ಅರಮನೆಯ ಬಾಗಿಲಲ್ಲಿರುವಾಗ, ಆ ಮಹಾಕವಿ ಬಂದನು. ದ್ವಾರಪಾಲಕನು ಅವನಿಗೆ ಸಾಷ್ಟಾಂಗ ನಮಸ್ಕಾರವನ್ನು ಮಾಡಿ " ಮಹಾಸ್ವಾಮಿ ! ಹೊಸ ಗ್ರಂಥಗಳನ್ನು ಮಾಡಿಕೊಂಡು ಬಂದಿರತಕ್ಕ ಕವಿಗಳಿಗೆ ಮಾತ್ರ, ನಮ್ಮ ಮಹಾರಾಜರು ಸಂದರ್ಶನವನ್ನು ಕೊಟ್ಟು ಸನ್ಮಾನ ಮಾಡುವರು; ಪ್ರಾಚೀನಗ್ರಂಥಗಳನ್ನು ತಂದು ಓದತಕ್ಕವರಿಗೆ ಸನ್ಮಾನಮಾಡುವುದಿಲ್ಲ.'' ಎಂದು ಹೇಳಿದನು. ಅದಕ್ಕೆ ಆ ಮಹಾಕವಿಯು ತಾನು ಹೊಸದಾಗಿ ಗ್ರಂಥವನ್ನು ರಚಿಸಿ ಬಂದಿರುವಂತೆ ಹೇಳಿದನು. ಇದು ಹೊಸಗ್ರಂಥವೆಂದು ನನಗೆ ತೋರಿದ ಹೊರತು ನಾನು ತಮ್ಮನ್ನು ಒಳಗೆ ಬಿಡುವುದಕ್ಕಾಗುವುದಿಲ್ಲವೆಂದೂ, ಮೊದಲು ನನ್ನಲ್ಲಿ ಓದಿ ನನಗೆ ಈ ವಿಷಯದಲ್ಲಿ ನಂಬುಗೆಯನ್ನು ಹುಟ್ಟಿಸಿದರೆ ಆಮೇಲೆ ನಾನು ಬಿಡುತ್ತೇನೆಂದೂ, ಆ ದ್ವಾರಪಾಲಕನು ಹೇಳಿದನು. ಆಗ ಆ ಮಹಾಕವಿಯು ಆ ಗ್ರಂಥವನ್ನು ಓದಿದನು. ಕೂಡಲೇ ದ್ವಾರಪಾಲಕನು " ಈ ಗ್ರಂಥವು ನನಗೆ ತಿಳಿದೇ ಇರುವುದು '' ಎಂದು ಹೇಳಿ, ಮೊದಲಿಂದ ಕೊನೆಯವರೆಗೂ ಒಂದೂ ತಪ್ಪಿಲ್ಲದಂತೆ ಹೇಳಿಬಿಟ್ಟನು. ಆ ಮಹಾಕವಿಯು ಭ್ರಾಂತನಾಗಿ, ಏನು ಮಾಡಬೇಕೋ ತಿಳಿಯದೆ ಹೊರಟುಹೋದನು. ಭೋಜನು ಈ ವೃತ್ತಾಂತವನ್ನು ಕೇಳಿ ತುಂಬಾ ಸಂತುಷ್ಟನಾಗಿ, ಕೆಲವು ದಿವಸಗಳಲ್ಲಿಯೇ ಹಣವನ್ನು ತರಿಸಿ, ಆ ಮಹಾಕವಿಗೂ ತನ್ನ ದ್ವಾರಪಾಲಕನಿಗೂ ಇಬ್ಬರಿಗೂ ಸನ್ಮಾನವನ್ನು ಮಾಡಿದನು.

ಈ ವಿಷಯ ಹಾಗಿರಲಿ; ವಿದ್ಯಾರ್ಥಿಗಳು, ತಮ್ಮ ವಿದ್ಯಾಭ್ಯಾಸ ಪೂರ

ಯಿಸುವವರೆಗೂ, ನೆದಳೂ ಬುದ್ಧಿಯೂ ಜ್ಞಾಪಕಶಕ್ತಿಯೂ ಚೆನ್ನಾಗಿ ಬೆಳೆಯುವಂತೆ ಮಾಡುವುದಕ್ಕೋಸ್ಕರ, ಸರ್ವಪ್ರಯತ್ನದಿಂದಲೂ ವಿಷಯ ಸುಖಗಳಲ್ಲಿ ಪರಾಙ್ಮುಖರಾಗಿ ವೀರ್ಯನಿಗ್ರಹವನ್ನು ಮಾಡಿಕೊಳ್ಳಬೇಕು. ನಮ್ಮ ಶರೀರಕ್ಕೆ ಸಂಬಂಧಪಟ್ಟ ಅವಯವಗಳಲ್ಲಿ, ಬುದ್ಧಿಯು ಸರ್ವೋತ್ತ ಮವಾದುದು ಸಕಲ ಪ್ರಾಣಿಗಳಲ್ಲಿಯೂ ಮನುಷ್ಯನು ಸರ್ವೋತ್ತಮ ನೆಂದೆನ್ನಿಸಿಕೊಳ್ಳುವುದಕ್ಕೆ. ಇವನಿಗೆ ಅಸಾಧಾರಣವಾದ ಬುದ್ಧಿಯಿರು ವುದೇ ಮುಖ್ಯಕಾರಣವು. ಯಾರು ಈ ಬುದ್ಧಿಯನ್ನು ಸುಶಿಕ್ಷೆಗೆ ಗುರಿ ಮಾಡಿ ಇದು ಸದ್ವ್ಯಾಪಾರಗಳಲ್ಲಿ ಪ್ರವರ್ತಿಸುವಂತೆಯೂ ದುರ್ಮಾರ್ಗ ಗಳಿಗೆ ಹೋಗದಂತೆಯೂ ಮಾಡಿಕೊಂಡಿರುವರೋ, ಅವರು ಸಕಲವಾದ ಇಷ್ಟಾರ್ಥಗಳನ್ನೂ ಹೊಂದುವರು. ಮನಸ್ಸು, ಸಮುದ್ರದಂತೆ ಅವ್ಯಂತಗ ಳಿಲ್ಲದುದು. ತಿಳಿದುಕೊಂಡ ವಿಷಯಗಳೆಲ್ಲವೂ ಅದರಲ್ಲಿ ಮಗ್ನವಾಗಿರು ವುವು; ಅಪೇಕ್ಷಿಸಿದಾಗ ಇವು ಸಹಾಯಕ್ಕೆ ಬರುವುವು. ವಿಷಯಗ್ರಹಣ ಮಾಡಿದ ಹಾಗೆಲ್ಲ ಹೆಚ್ಚು ವಿಷಯಗಳನ್ನು ಗ್ರಹಿಸುವುದಕ್ಕೆ ಇದು ಸಮ ರ್ಥವಾದುದು. ಸುಶಿಕ್ಷಿತವಾದ ಮನಸ್ಸು, ಅಖಂಡವಾಗಿ ಪರಿಣಮಿಸಿ ತನ್ನನ್ನು ಹೊಂದಿರತಕ್ಕ ಮನುಷ್ಯನನ್ನು ದೇವರಿಗೆ ಸಮಾನನನ್ನಾಗಿಯೂ ಮಾಡುವುದು. ವ್ಯಾಸ, ವಸಿಷ್ಠ, ಶುಕ, ಮೊದಲಾದವರು ಅವತಾರಪುರು ಷರಂತೆ ಗಣಿಸಲ್ಪಡುವುದಕ್ಕೆ, ಇವರು ಏಕಾಗ್ರಚಿತ್ತತೆಯಿಂದ ಅನೇಕ ವರು ಷಗಳವರೆಗೂ ಅಹೋರಾತ್ರಿಯಲ್ಲೂ ಕಷ್ಟಪಟ್ಟು ವ್ಯಾಸಂಗಮಾಡಿ ಅಸಾ ಧಾರಣವಾದ ಪ್ರಜ್ಞೆಯನ್ನು ಸಂಪಾದಿಸಿದುದೇ ಮುಖ್ಯ ಕಾರಣವು. ಬುದ್ಧಿ ವಿಕಾಸಕ್ಕೆ ಮುಖ್ಯಕಾರಣಗಳು ಅನೇಕವಾಗಿರುವುವು. ಪ್ರಥಮತಃ ಮನು

ಷ್ಯನು ಜನ್ಮಸಿದ್ಧವಾಗಿರತಕ್ಕ ದುರಭಿಮಾನಗಳನ್ನು ಬಿಡಬೇಕು. ಶಾಸ್ತ್ರಗಳನ್ನು ಅಭ್ಯಾಸಮಾಡಿದುದಕ್ಕೆ ಇದೇ ಮುಖ್ಯವಾದ ಯೋಗ್ಯತಾಸಿದ್ಧಿಯೆನ್ನಿಸುವುದು. ತತ್ವಜ್ಞಾನವನ್ನು ಹೊಂದುವುದಕ್ಕೆ, ಪಂಚೇಂದ್ರಿಯಗಳೇ ಮುಖ್ಯದ್ವಾರಗಳು. ಈ ಯಿಂದ್ರಿಯಗಳಿಗೆ ವಿಷಯಗಳಿರುವುವು. ಈ ವಿಷಯುಗಳಲ್ಲಿ, ಒಳ್ಳೆಯ ವಿಷಯ–ಕೆಟ್ಟ ವಿಷಯ–ಇವೆರಡೂ ಇರುವುದುಂಟು. ಒಳ್ಳೆಯ ವಿಷಯಗಳಿಗೆ ಗಮನಕೊಡುವುದಕ್ಕೂ, ಕೆಟ್ಟ ವಿಷಯಗಳಲ್ಲಿ ಪರಾಙ್ಮುಖನಾಗುವುದಕ್ಕೂ ಶಕ್ತಿಯನ್ನು ಸಂಪಾದಿಸಿಕೊಳ್ಳುವುದು ಬಹಳ ಆವಶ್ಯಕವು. ಇದು ಸುಲಭವಲ್ಲ ; ಇದು ಬಹಳ ಕಷ್ಟಸಾಧ್ಯವಾದುದು. ಈ ಶಕ್ತಿಯನ್ನು ಸಂಪಾದಿಸತಕ್ಕವನೇ ಜಿತೇಂದ್ರಿಯನೆನ್ನಿಸಿಕೊಳ್ಳುವನು. ವಿದ್ಯಾರ್ಥಿಗಳು ಈ ಶಕ್ತಿಯನ್ನು ಪ್ರಥಮತಃ ಸಂಪಾದಿಸಿಕೊಳ್ಳಬೇಕು. ಇಂಥ ಶಕ್ತಿಯನ್ನು ಸಂಪಾದಿಸಿಕೊಳ್ಳುವ ಪ್ರಯುತ್ನಕ್ಕೆ ಅನೇಕವಿಘ್ನಗಳು ಬರುವುವು. ವಿಶ್ವಾಮಿತ್ರನ ತಪಸ್ಸಿಗೆ ಎಂತಹ ಅಪ್ರತಿಹತವಾದ ವಿಘ್ನಗಳು ಬಂದುವೋ–ಅದನ್ನು ಪರ್ಯಾಲೋಚಿಸಿದರೆ, ಆ ವಿಘ್ನಗಳನ್ನು ಗೆಲ್ಲುವುದರಲ್ಲಿ ಆತನು ಎಷ್ಟು ಪ್ರಯತ್ನಮಾಡಿದನೋ–ಅದು ಗೊತ್ತಾಗುವುದು. ಅಲಗ್ಜಾಂಡರನೇ ಮೊದಲಾದವರು ಪ್ರಪಂಚವನ್ನೆಲ್ಲ ಗೆದ್ದರೆಂದು ಹೇಳುತ್ತಾರೆ. ನಮ್ಮ ಶ್ರೇಯಸ್ಸಿಗೆ ಕುಠಾರಪ್ರಾಯವಾದ ವಿಷಯಪ್ರಪಂಚವನ್ನು ಗೆಲ್ಲದವರು, ಮತ್ತೇನನ್ನುತಾನೆ ಗೆಲ್ಲಬಲ್ಲರು ? ಕಾಮ, ಕ್ರೋಧ, ಲೋಭ, ಮೋಹ, ಮದ, ಮಾತ್ಸರ್ಯರ್ಯಗಳನ್ನು ಗೆಲ್ಲದವರು, ಪ್ರಪಂಚವನ್ನು ಗೆಲ್ಲುವುದು ನಿಜವೇ ? ಅದು ಹೇಗಾದರೂ ಇರಲಿ. ಲಕ್ಷ ಜನಗಳಲ್ಲಿ ಒಬ್ಬನಾದರೂ ಜಿತೇಂದ್ರಿಯನಾದವನಿರುವನು.

ಅವನಂತೆ ಜಿತೇಂದ್ರಿಯನಾಗುವುದಕ್ಕೆ ನಾವೂ ಪ್ರಯತ್ನಮಾಡಿದರೆ, ಅವನಂತೆ ಪೂಜ್ಯನಾಗುವುದಕ್ಕೂ ಅರ್ಹರಾಗಬಹುದು ಇದೇ, ವ್ಯಾಸಂಗಕ್ಕೆ ಮುಖ್ಯೋದ್ದೇಶವು. ಈ ವುದ್ದೇಶವನ್ನು ಮನಸ್ಸಿನಲ್ಲಿಟ್ಟುಕೊಂಡು ವಿದ್ಯಾರ್ಥಿಗಳು ವ್ಯಾಸಂಗ ಮಾಡಿದರೆ ಧನ್ಯರಾಗುವರು.

## ಪರಿಚ್ಛೇದ ೨.

ಸಕಲವಿದ್ಯೆಗಳೂ, ಅಭ್ಯಾಸಕ್ಕನುಸಾರವಾಗಿ ಬರುವುವು. ಜನಗಳನ್ನು ಮೂರ್ತೀಭವಿಸಿದ ಅಭ್ಯಾಸಗಳೆಂದು ಹೇಳಬಹುದು. ಅತ್ಯಂತ ಕ್ಲೇಶಕರಗಳಾದ ಕೆಲಸಗಳೂ ಕೂಡ, ಆಗಾಗ್ಗೆ ಮಾಡಲ್ಪಡುತ ಬಂದರೆ, ಕ್ರಮಕ್ರಮವಾಗಿ ಕ್ಲೇಶವಿಲ್ಲದೆ ಮಾಡಲ್ಪಡುವುದಕ್ಕೆ ಸಾಧ್ಯವಾಗುವುವು. ಪೃಥ್ವೀರಾಜನ ಕಾಲದಲ್ಲಿ, ಒಬ್ಬ ಬ್ರಾಹ್ಮಣನು ಒಂದು ಖೂನಿಯನ್ನು ಮಾಡಿದನು. ಅವನಮೇಲೆ ತಪ್ಪು ಹೊತ್ತಿತು. ರಾಜನು ಅವನಿಗೆ ಮರಣದಂಡನೆಯನ್ನು ವಿಧಿಸಿದನು. ಆ ಬ್ರಾಹ್ಮಣನು “ಈ ಅಪರಾಧಕ್ಕೆ ಬೇರೆಯಾದ ದಂಡನೆ ಯಾವುದೂ ಇಲ್ಲವೆ?” ಎಂದು ಕೇಳಿದನು. ‘ಕಬ್ಬಿಣದ ಮುಳ್ಳುಗಳುಳ್ಳ ಮಂಚದಮೇಲೆ ಏಳುವರುಷ ಮಲಗಿರುವುದು, ಮರಣದಂಡನೆಗೆ ಸಮಾನವಾದ ಶಿಕ್ಷೆಯೆಂದೂ, ಆ ಬ್ರಾಹ್ಮಣನೇ ಹೇಳಿದನು. ಈ ಶಿಕ್ಷೆಯು ನಿಮಿಷಕ್ಕೊಂದಾವೃತ್ತಿ ಮಾಡಲ್ಪಡತಕ್ಕ ಮರಣದಂಡನೆಗೆ ಸಮಾನವೆಂದು ತೋರಿತು. ಆದಾಗ್ಯೂ, ಈ ಬ್ರಾಹ್ಮಣನು,

ಸಾಯುವುದಕ್ಕಿಂತ ಬದುಕಿದ್ದರೆ ಯಥೋಚಿತವಾಗಿ ಒಳ್ಳೆಯ ಕೆಲಸಗ
ಳನ್ನು ಮಾಡಿ–ತಾನು ಮಾಡಿದ ಪಾಪವನ್ನು ಪರಿಹರಿಸಿಕೊಳ್ಳಬಹುದೆಂದು
ಪರ್ಯಾಲೋಚಿಸಿ, ಮರಣದಂಡನೆಗೆ ಬದಲಾಗಿ ಇಂಥ ಮುಳ್ಳಿನ ಮಂಚದ
ಮೇಲೆ ಮಲಗತಕ್ಕ ದಂಡನೆಯನ್ನು ವಿಧಿಸಬೇಕೆಂದು ಪ್ರಾರ್ಥಿಸಿದನು.
ದೊರೆಯು ಅದೇರೀತಿಯಲ್ಲಿ ಒಪ್ಪಿ, ತೀಕ್ಷ್ಣವಾದ ಕಬ್ಬಿಣದ ಮುಳ್ಳುಗ
ಳುಳ್ಳ ಮಂಚವನ್ನು ಮಾಡಿಸಿ, ಅದರ ಮೇಲೆ ಇವನು ಮಲಗಿರಬೇಕೆಂಬು
ದಾಗಿಯೂ, ಹಾಗೆ ಮಾಡದಿದ್ದರೆ ಇವನಿಗೆ ಶಿರಶ್ಛೇದವನ್ನು ಮಾಡಬೇಕೆಂ
ಬುದಾಗಿಯೂ ಆಜ್ಞೆಮಾಡಿದನು. ಈ ಶಿಕ್ಷೆಯನ್ನು ಅನುಭವಿಸುವುದೇ
ಸರಿಯೆಂದು ಆ ಬ್ರಾಹ್ಮಣನು ಸಂಕಲ್ಪಮಾಡಿ ಮಂಚವನ್ನು ಹತ್ತಿದನು.
ಆ ಮುಳ್ಳುಗಳು ಮೈಗೆ ಚುಚ್ಚಿಕೊಂಡು, ಅನಿರ್ವಚನೀಯವಾದ ನೋವುಂ
ಟಾಯಿತು. ಶಿರಶ್ಛೇದದಿಂದ ಪ್ರಾಣ ಹೋಗುವುದಕ್ಕೆ ಬದಲಾಗಿ ಈ
ಯಾತನೆಯಿಂದ ಹೋಗಲೆಂದು, ಅವನು ಹಠವನ್ನು ಮಾಡಿದನು. ಕೆಲವು
ದಿವಸಗಳೊಳಗಾಗಿ, ಇವನ ಶರೀರದ ಚರ್ಮವು ಘೇಂಡಾಮೃಗದ ಚರ್ಮಕ್ಕಿಂ
ತಲೂ ಗಟ್ಟಿಯಾಗಿ, ರಕ್ತಬರುವುದು ನಿಂತುಹೋಯಿತು. ಶರೀರದಲ್ಲೆಲ್ಲ
ಗಡ್ಡೆಗಳು ಕಟ್ಟಿಕೊಂಡುವು. ಹೀಗೆ ಪಲುವರುಷಗಳು ಕಳೆದುವು. ಅನಂ
ತರ, ಇವನ ಸಾಹಸವನ್ನು ನೋಡಿ ಆಶ್ಚರ್ಯಪಟ್ಟು, ಮಹಾರಾಜನು ಇವ
ನಿಗೆ ಬಿಡುಗಡೆಮಾಡಿಸಿದನು. ಆಮೇಲೆ ಬ್ರಾಹ್ಮಣನು ತನ್ನ ಮನೆಗೆ ಹೋಗಿ
ಸುಪ್ಪತ್ತಿಗೆಯ ಮೇಲೆ ಮಲಗಲು, ಅದು ಅವನಿಗೆ ಸುಖಕರವಾಗಿರಲಿಲ್ಲ.
ಆಮೇಲೆ ಅವನು ಅದುವರೆಗೂ ಅಭ್ಯಾಸವಾದಂತೆಯೇ ಮುಳ್ಳಿನ ಮಂಚ
ವನ್ನು ಮಾಡಿಸಿ ಅದರಮೇಲೆ ಮಲಗಲು, ಸುಖವಾಗಿ ನಿದ್ರೆಬಂದಿತು.

ಆದುದರಿಂದ, ದೊಡ್ಡಕ್ಲೇಶಗಳು ಕೂಡ, ಅಭ್ಯಾಸಮಹಿಮೆಯಿಂದ ಕ್ಲೇಶವಾಗಿ ತೋರುವುದಿಲ್ಲ; ಅಸಾಧಾರಣವಾದ ಕೆಲಸಗಳೆಲ್ಲ ಕ್ಲೇಶದಿಂದ ಸಾಧ್ಯವಾಗುವುವು. ಆದುದರಿಂದ, ವಿದ್ಯಾರ್ಥಿದಶೆಯಲ್ಲಿ ಕ್ಲೇಶಸಾಧ್ಯವಾದ ಕೆಲಸಗಳನ್ನು ಅಭ್ಯಾಸಮಾಡಿ ಅದರ ಫಲವನ್ನು ಹೊಂದುವುದಕ್ಕೆ ಪ್ರಯತ್ನಮಾಡುವುದು ಸರ್ವರಿಗೂ ಕರ್ತವ್ಯವು. ಈ ಕರ್ತವ್ಯವನ್ನು ಯಾರು ಸರಿಯಾಗಿ ನಿರ್ವಹಿಸುವರೋ, ಅವರು ಒಳ್ಳೆಯ ದಶೆಗೆ ಬರುವರು.

ಅಭ್ಯಾಸಗಳಲ್ಲಿ ಒಳ್ಳೆಯ ಅಭ್ಯಾಸಗಳು ಹೇಗೋ-ಹಾಗೆ ದುರಭ್ಯಾಸಗಳೂ ಇರುತ್ತವೆ. ದುರಭ್ಯಾಸಗಳನ್ನು ಮಾಡುವುದರಲ್ಲಿ ವಿಶೇಷಕ್ಲೇಶವುಂಟಾಗುವುದಿಲ್ಲ. ದುರಭ್ಯಾಸಗಳು ರೂಢಮೂಲವಾದರೆ, ಅವುಗಳನ್ನು ಬಿಡುವುದು ಬಹಳಕಷ್ಟ. ಅನೇಕರಿಗೆ ಇದು ಅಸಾಧ್ಯವಾಗುವುದು. ಬಾಲ್ಯದಲ್ಲಿ ಸ್ತ್ರೀಪುರುಷರಿಗೆ ದುರಭ್ಯಾಸಕ್ಕೆ ಅವಕಾಶವಿಲ್ಲದಂತೆ ಏರ್ಪಾಡುಗಳನ್ನು ಮಾಡಬೇಕು. ಈ ವಿಷಯದಲ್ಲಿ ಉದಾಸೀನರಾದರೆ, ಅವರು ಕೆಟ್ಟ ಕೆಲಸಗಳನ್ನು ಕಲಿತುಕೊಂಡು ಶೀಘ್ರದಲ್ಲಿಯೇ ಅವುಗಳಿಗನುರೂಪವಾದ ದುಷ್ಫಲವನ್ನು ಹೊಂದುವ ಅವಸ್ಥೆಗೆ ಬರುವರು. ದೂರದೃಷ್ಟಿಯುಳ್ಳ ತಾಯಿತಂದೆಗಳೂ, ಗುರುಗಳೂ, ಇಂಥ ದುಷ್ಪರಿಣಾಮವನ್ನು ತಪ್ಪಿಸುವುದಕ್ಕೆ ಬಾಲ್ಯದಲ್ಲಿಯೇ ಪ್ರಯತ್ನಮಾಡಬೇಕು. ಹಾಗೆ ಮಾಡದಿದ್ದರೆ, ಬಾಲಕರು ಸ್ವಾಧೀನಕ್ಕೆ ಬರುವುದಿಲ್ಲ. ಅಂಥ ಮಕ್ಕಳನ್ನು ಪಡೆಯುವುದರಿಂದ ತಾಯಿತಂದೆಗಳಿಗೆ ಯಾವ ಪ್ರಯೋಜನವೂ ಆಗುವುದಿಲ್ಲ. ಅಂತಹ ಮಕ್ಕಳೂ ಕೂಡ ಕೃತಾರ್ಥರಾಗುವುದಿಲ್ಲ. ಪ್ರಾಯಿಕವಾಗಿ ಅವರು ದಾರಿದ್ರ್ಯಕ್ಕೂ, ದಾರಿದ್ರ್ಯದಿಂದಲೂ ಅವಿವೇಕದಿಂದಲೂ

ಉಂಟಾಗತಕ್ಕ ಅನರ್ಥಗಳಿಗೂ ಗುರಿಯಾಗುವರು. ಜನಗಳ ಅಭ್ಯಾಸಕ್ಕನುಸಾರವಾಗಿ, ಅವರ ಯೋಚನೆಗಳೂ ಮಾತುಗಳೂ ಉದ್ಯೋಗಗಳೂ ಪರಿಣಮಿಸುವುವು. ಜೈಲು ಮೊದಲಾದ ಸ್ಥಳಗಳಲ್ಲಿದ್ದು ಅಲ್ಲಿನ ಸ್ಥಿತಿಯು ಯಾರಿಗೆ ಬಹುಕಾಲದಿಂದ ಅಭ್ಯಾಸಕ್ಕೆ ಬಂದಿರುವುದೋ, ಅಂಥವರು ಜೈಲಿನಿಂದ ಬಿಡುಗಡೆಯಾದ ಕೂಡಲೆ ಪುನಃ ಯಾವುದಾದರೊಂದು ಅಪರಾಧವನ್ನು ಮಾಡಿ ಜೈಲಿಗೆ ಹೋಗುವುದು ಅನುಭವಸಿದ್ಧವಾಗಿಯೇ ಇದೆ. ಗುಡಿಸಲಿನಲ್ಲಿ ವಾಸಮಾಡತಕ್ಕವರು ಅರಮನೆಯಲ್ಲಿ ವಾಸಕ್ಕೆ ಅವಕಾಶವನ್ನು ಹೊಂದಿದಾಗ್ಯೂ ಕಳ್ಳತನದಿಂದ ಪುನಃ ತಮ್ಮ ಗುಡಿಸಲಿಗೆ ಹೋಗಿ ಸೇರಿಕೊಳ್ಳುವುದೂ ಕೂಡ ಪ್ರಸಿದ್ಧವಾಗಿರುವುದು. ಅಭ್ಯಸ್ತವಾದ ಕೆಲಸಗಳನ್ನು ಬಿಟ್ಟು, ಅನಭ್ಯಸ್ತವಾದ ಕೆಲಸಗಳಲ್ಲಿ ಎಷ್ಟು ಲಾಭ ಬರುವಹಾಗಿದ್ದರೂ, ಜನಗಳು ಅಂಥ ಕೆಲಸಗಳಲ್ಲಿ ಅಶ್ರದ್ಧೆಯನ್ನು ತೋರಿಸುವುದೂ ಕೂಡ ಪ್ರತ್ಯಕ್ಷವಾಗಿರುವುದು. ಆದುದರಿಂದ, ಯಾವ ಕೆಲಸದಲ್ಲಿ ಪ್ರವೇಶವನ್ನು ಹೊಂದಬೇಕಾದಾಗ್ಯೂ, ಅಂಥ ಕೆಲಸವನ್ನು ಉಪಕ್ರಮಮಾಡುವುದಕ್ಕೆ ಮುಂಚೆಯೇ, ಯಾವ ಅಭ್ಯಾಸವು ಸಂಪೂರ್ಣವಾಗಿ ಫಲಕಾರಿಯಾದುದೋ ಅದನ್ನು ಪರೀಕ್ಷಿಸಿ, ಅದರಲ್ಲಿ ಕೃಷಿಮಾಡುವುದಕ್ಕುಪಕ್ರಮಿಸಬೇಕು. ಕೆಟ್ಟ ಕೆಲಸಗಳಲ್ಲಿ ಅಭ್ಯಾಸಮಾಡಲ್ಪಟ್ಟರೆ, ದುಷ್ಫಲಾನುಭವವೆಂದಿಗೂ ತಪ್ಪುವುದಿಲ್ಲ. ಆದುದರಿಂದ, ಚಿಕ್ಕ ವಯಸ್ಸಿನಲ್ಲಿ ದುರಭ್ಯಾಸಕ್ಕೆ ಲೇಶವೂ ಅವಕಾಶವಿಲ್ಲದಂತೆ ಮಾಡುವುದು, ತಾಯಿತಂದೆಗಳಿಗೂ ಪಾಠಕರಿಗೂ ಮುಖ್ಯಕರ್ತವ್ಯವು. ಈ ಕರ್ತವ್ಯಕ್ಕೆ ಸಂಪೂರ್ಣವಾಗಿ ಗಮನಕೊಡಲ್ಪಡಬೇಕು.

ಯಾವ ಅಭ್ಯಾಸದಿಂದ ಪ್ರಯೋಜನವಾಗುವುದಿಲ್ಲವೋ, ಅಥವಾ ಯಾವ ಅಭ್ಯಾಸದಿಂದ ಅನರ್ಥವುಂಟಾಗುವುದೋ, ಅಂಥ ಅಭ್ಯಾಸವನ್ನು ಮಾಡಬಾರದು. ಯಾವ ಅಭ್ಯಾಸವು ಧರ್ಮದಿಂದ ಇಷ್ಟಾರ್ಥಗಳನ್ನು ಹೊಂದುವುದಕ್ಕೆ ಸಾಧಕವಾದುದೋ, ಅದು ಕೇವಲಕಷ್ಟವಾಗಿದ್ದಾಗ್ಯೂ ಮಾಡುವುದಕ್ಕೆ ಅರ್ಹವಾದುದು ; ಅಂಥ ಅಭ್ಯಾಸವನ್ನು ಮಾಡುತ್ತ ಬರಬೇಕು. ಉಪಕ್ರಮದಲ್ಲಿ ಕಷ್ಟವಾಗಿದ್ದಾಗ್ಯೂ, ಕ್ರಮಕ್ರಮವಾಗಿ ಆ ಕೆಲಸವು ಸುಲಭವಾಗುವುದು ; ಕೆಲವು ದಿವಸಗಳೊಳಗಾಗಿ ಅದು ಸಂತೋಷಪ್ರದವಾಗಿಯೂ ಆಗುವುದು. ಅಪರಾಧಗಳನ್ನು ಮಾಡಿ, ಅನೇಕರು ಜೈಲಿಗೆ ಹಾಕಲ್ಪಡುತ್ತಾರೆ. ಜೈಲಿನ ತಿಂಡಿಯೂ, ಅಲ್ಲಿನ ವಾಸವೂ, ಅಲ್ಲಿನ ವಸ್ತ್ರಗಳೂ, ಅಲ್ಲಿನ ಸಹವಾಸವೂ, ಪ್ರಥಮತಃ ಅಭ್ಯಾಸವಿಲ್ಲದವರಿಗೆ ಬಹುಕ್ಲೇಶವನ್ನುಂಟುಮಾಡುವುವು. ಕ್ರಮಕ್ರಮವಾಗಿ, ಇವುಗಳೆಲ್ಲ ಒಗ್ಗಿ, ಜೈಲಿನಿಂದ ಬಿಡುಗಡೆಯಾಗುವಾಗ್ಗೆ, ಆ ಬಿಡುಗಡೆಯಿಂದ ಉಂಟಾಗಬೇಕಾದ ಸಂತೋಷವನ್ನು ಕೂಡ ಹೊಂದದೆ ಅವರು ವ್ಯಸನಪಡುವರು. ಕದನ್ನದಲ್ಲಿಯೂ ನಿಂದ್ಯವಾದ ಸಹವಾಸದಲ್ಲಿಯೂ ಅಭ್ಯಾಸ ಹೆಚ್ಚಿ ಅವುಗಳನ್ನು ಬಿಡುವುದು ಕಷ್ಟವಾದ ಪಕ್ಷದಲ್ಲಿ, ಸತ್ಸಹವಾಸ ಮೊದಲಾದುವುಗಳಲ್ಲಿ ಮಾಡಲ್ಪಟ್ಟ ಅಭ್ಯಾಸವನ್ನು ಬಿಡುವುದೂ ಕೇವಲ ಕಷ್ಟವಾದುದೆಂದು ಹೇಳಲವಶ್ಯವಿಲ್ಲ.

ವಿದ್ಯಾರ್ಥಿಗಳು, ವ್ಯಾಸಂಗಮಾಡುವುದರಲ್ಲಿ ಯಾವ ರೀತಿಯಿಂದ ಕೆಲಸಮಾಡಬೇಕೋ ಅದನ್ನು ಮೊದಲೇ ಗೊತ್ತುಮಾಡಿಕೊಳ್ಳಬೇಕು. ಇಂಥ ಕಾಲದಲ್ಲಿ ಇಂಥ ವ್ಯಾಸಂಗವು ಮಾಡಲ್ಪಡಬೇಕೆಂದು ಕ್ಲೃಪ್ತ

ಮಾಡಿಕೊಂಡು, ಆ ಕಾಲದಲ್ಲಿ ಆ ಕೆಲಸವನ್ನು ಮಾಡುವುದಕ್ಕೆ ಯಾವ ವಿಘ್ನ ಬಂದಾಗ್ಯೂ ಅದನ್ನು ಬಿಡದೆ, ಅಭ್ಯಾಸಮಾಡುತ್ತ ಬರಬೇಕು. ವಿಘ್ನಗಳಲ್ಲಿ ಪ್ರಾಯಿಕವಾಗಿ ನಿವಾರಣೀಯವಾದುವು ಅನೇಕವಿರುತ್ತವೆ. ಅಂಥವುಗಳನ್ನು ಜಯಿಸುವುದು ಕಷ್ಟವಲ್ಲ. ಪ್ರತಿದಿವಸವೂ ವ್ಯಾಸಂಗಕ್ಕೆ ಪ್ರತಿಬಂಧಕವಾಗಿ ಬರುವ ಕೆಲಸಗಳಿರುವುದುಂಟು. ಅಂಥ ಕೆಲಸಗಳಿಗೋಸ್ಕರ ಬೇರೆ ಕಾಲವನ್ನು ಕ್ಲುಪ್ತಮಾಡಿಟ್ಟುಕೊಂಡು, ಕ್ಲುಪ್ತವಾದ ವ್ಯಾಸಂಗಕ್ಕೆ ಯಾವ ಹಾನಿಯೂ ಬರದಂತೆ ನೋಡಿಕೊಳ್ಳಬೇಕು. ಮೊದಲಿನಲ್ಲಿ ಹಾಗೆ ನಡೆಯಿಸುವುದು ಕಷ್ಟವಾಗಬಹುದು; ಆದರೆ, ಹಾಗೆ ನಡೆಯಿಸಬೇಕೆಂದು ನಿಷ್ಕರ್ಷೆಮಾಡಿಕೊಂಡರೆ, ಅನಂತರ ಆ ಕಷ್ಟವು ತೋರುವುದಿಲ್ಲ. ಈ ರೀತಿಯಲ್ಲಿ ನಿಷ್ಕರ್ಷೆಮಾಡಿಕೊಳ್ಳದಿರತಕ್ಕವರು, ಹಿಡಿದ ಕೆಲಸವನ್ನೆಂದಿಗೂ ಸಾಧಿಸಲಾರರು. ಡ್ರೇಕ್ ಕ್ಲೈವನು ಆಟ ವಾಡುತ್ತಿದ್ದಾಗ, ಶತ್ರುಗಳು ಯುದ್ಧಕ್ಕೆ ಸನ್ನದ್ಧರಾಗಿ ಬಂದರೆಂದು ವರ್ತಮಾನ ಬಂದಿತು. ಆಗ ಅವನು "ಅಯ್ಯೋ! ಪಾಪ! ದಣಿದು ಬಂದಿರುವರು; ಸ್ವಲ್ಪ ವಿಶ್ರಮಿಸಿಕೊಳ್ಳಲಿ; ನಾನು ಈ ಆಟವನ್ನು ಪೂರಯಿಸಿ ಯುದ್ಧಕ್ಕೆ ಸೈನ್ಯವನ್ನು ಸಿದ್ಧಮಾಡಿಕೊಂಡು ಹೊರಡುವೆನು." ಎಂದು ಹೇಳಿ, ಯುದ್ಧದ ಪ್ರಸಕ್ತಿಯೇ ಇಲ್ಲದಿದ್ದರೆ ಹೇಗೋ-ಹಾಗೆ ಸಾವಧಾನವಾಗಿ ಆಟವನ್ನಾಡಿ ಪೂರಯಿಸಿ, ಅನಂತರ ಯುದ್ಧಕ್ಕೆ ಸನ್ನದ್ಧನಾಗಿ ಹೊರಟನು. ಆಟದಲ್ಲಿ ಅವನು ಹೇಗೆ ಸಾವಧಾನವಾಗಿರುತಿದ್ದನೋ, ಹಾಗೆ ವಿದ್ಯಾರ್ಥಿಗಳು ತಮ್ಮ ವ್ಯಾಸಂಗದಲ್ಲಿ ಸ್ವಸ್ಥಚಿತ್ತರಾಗಿರಬೇಕು. ವಿದ್ಯಾಭ್ಯಾಸವು ತಪಸ್ಸಿಗೆ ಸಮವಾದುದು. ಇವೆರಡಕ್ಕೂ ಮನಸ್ಸು ಏಕಾ

ಗ್ರ್ಯವುಳ್ಳುದಾಗಿರಬೇಕು. ವ್ಯಾಸಂಗಮಾಡುವ ಕಾಲದಲ್ಲಿ ವಿಷಯಾಂತರಗಳಿಂದ ಆಕರ್ಷಿಸಲ್ಪಟ್ಟರೆ, ಮನಸ್ಸು ವ್ಯಾಸಂಗದಲ್ಲಿ ನಿಲ್ಲುವುದಿಲ್ಲ. ಹಾಗೆ ನಿಲ್ಲದಿದ್ದರೆ, ಅಭ್ಯಾಸಕ್ಕೆ ವಿಷಯವಾದ ಗ್ರಂಥಗಳು ಸ್ವಾಧೀನವಾಗುವುದಿಲ್ಲ. ಹಾಗೆ ಸ್ವಾಧೀನವಾಗದಿದ್ದರೆ, ಪರೀಕ್ಷೆಗಳಲ್ಲಿ ತೇರ್ಗಡೆಯಾಗುವುದಿಲ್ಲ. ಹಾಗೆ ತೇರ್ಗಡೆಯಾಗದಿರತಕ್ಕವರಿಗೆ, ವ್ಯಾಸಂಗದ ಫಲವುಂಟಾಗುವುದಿಲ್ಲ. ವಿದ್ಯಾರ್ಥಿಗಳು, ವ್ಯಾಸಂಗವನ್ನು ತಪಸ್ಸೆಂದು ಭಾವಿಸಿ, ಸಕಲ ಪ್ರಯತ್ನಗಳಿಂದಲೂ ತಾವು ವ್ಯಾಸಂಗಮಾಡತಕ್ಕ ಗ್ರಂಥಗಳ ತತ್ವಾರ್ಥವು ಮನಸ್ಸಿನಲ್ಲಿ ನಿಲ್ಲುವಂತೆ ಏಕಾಗ್ರಚಿತ್ತದಿಂದ ವ್ಯಾಸಂಗಮಾಡಬೇಕು. ಹಾಗಿಲ್ಲದಿದ್ದರೆ, ಬುದ್ಧಿಬಲದಿಂದ ಓದುಕಬೇಕೆಂಬ ಆಶೆಯನ್ನು ಬಿಟ್ಟು, ಕೃಷಿ-ಕೈಗಾರಿಕೆ-ವ್ಯಾಪಾರ ಮೊದಲಾದುವುಗಳಲ್ಲಿ ಉದ್ಯುಕ್ತರಾಗಿ, ಅದರಿಂದ ಜೀವಿಸುವ ಪ್ರಯತ್ನವನ್ನು ಮಾಡಬೇಕು. ಇವುಗಳಲ್ಲಿಯೂ ಕೂಡ ಪೂರ್ವಾಪರಜ್ಞಾನವು ಅತ್ಯಂತ ಆವಶ್ಯಕವು. ಆದರೆ, ಗ್ರಂಥಾವಲೋಕನಕ್ಕೆ ಬೇಕಾದ ಏಕಾಗ್ರ್ಯವನ್ನು ಪಡೆಯದಿರತಕ್ಕವರ ಬುದ್ಧಿಯು, ಇಂಥ ಬೇರೆ ಕೆಲಸಗಳಲ್ಲಿ ಚುರುಕಾಗುವುದುಂಟು. ಅನೇಕರಿಗೆ, ಒಂದು ವೃತ್ತಿಯಲ್ಲಿ ಬುದ್ಧಿಯು ಪ್ರವೇಶಿಸದಿದ್ದರೆ ಇನ್ನೊಂದು ವೃತ್ತಿಯಲ್ಲಿ ಪ್ರವೇಶಿಸಬಹುದು. ಆದುದರಿಂದ, ಯಾವುದರಲ್ಲಿ ಬುದ್ಧಿಯೋಡುವುದಿಲ್ಲವೋ ಅದರಲ್ಲಿ ಬುದ್ಧಿಯೋಡುವಂತೆ ಮಾಡಿಕೊಳ್ಳತಕ್ಕ ಶಕ್ತಿಯಿಲ್ಲದವರು, ತಮ್ಮ ಇಷ್ಟಕ್ಕನುರೂಪವಾದ ಬೇರೆ ವೃತ್ತಿಯನ್ನವಲಂಬಿಸಿ, ಅದರಲ್ಲಾದರೂ ಮನಸ್ಸುನಿಲ್ಲಿಸುವುದನ್ನು ಕಲಿತುಕೊಳ್ಳುವುದುತ್ತಮವು.

ಜನ್ಮತಃ ಬೃಹಸ್ಪತಿಗಳಾಗಿ ಯಾರೂ ಹುಟ್ಟುವುದಿಲ್ಲ. ಸರಸ್ವತಿಯು ಯಾರಿಗೂ ಬೀಜಾಕ್ಷರಗಳನ್ನು ಬರೆಯುವುದಿಲ್ಲ. ಜನ್ಮವನ್ನೆತ್ತಿದಾಗಲೇ

ಪ್ರತಿಯೊಬ್ಬರೂ ಈ ರೀತಿಯಲ್ಲಿರಬೇಕೆಂದು ದೇವರು ಹಣೆಯಲ್ಲಿ ಬರೆಯು ವನೆಂಬುದೂ ವಿಸ್ರಂಭಣೀಯವಲ್ಲ. ಮಕ್ಕಳಲ್ಲಿ ತಾಯಿತಂದೆಗಳ ಬುದ್ಧಿ ಶಕ್ತಿಯೂ ದೇಹಶಕ್ತಿಯೂ ಇರುವುವು. ಜನ್ಮವನ್ನೆತ್ತಿದಮೇಲೆ ಯಾವ ಸಹವಾಸವೂ ಯಾವ ಕರ್ಮವೂ ಜನಗಳಿಗೆ ಲಭ್ಯವಾಗುವುವೋ, ಅದಕ್ಕನು ರೂಪವಾದ ಫಲವು ಅವರಿಗುಂಟಾಗುವುದು. ಸತ್ಸಹವಾಸವೂ ಸತ್ಕರ್ಮ ಗಳೂ ಲಭ್ಯವಾಗಬೇಕಾದರೆ ಜನ್ಮಾಂತರ ಸುಕೃತವಿರಬೇಕೆಂದು ಹೇಳು ವುದುಂಟು. ಇದು ಅದೃಷ್ಟವಾದುದಾದಾಗ್ಯೂ, ನಂಬುವುದಕ್ಕರ್ಹವಾದ ಮಾತಾಗಿರುತ್ತದೆ. ಹಾಗೆ ನಂಬದಿದ್ದರೆ, ಕಾರ್ಯತಃ ತೋರತಕ್ಕ ಅನೇಕ ಪರಿಣಾಮಗಳಿಗೆ ಕಾರಣಗಳೇ ಗೊತ್ತಾಗುವುದಿಲ್ಲ. ಯಾವ ಪ್ರಯತ್ನ ಗಳನ್ನೂ ಮಾಡದೆ, ಕೆಲವರು ಕುಬೇರಪದವಿಗೆ ಬರುತ್ತಾರೆ. ಹಾಗೆ ಬರುವುದಕ್ಕೆ ಉಂಟಾದ ಸನ್ನಿವೇಶಗಳು, ಜನ್ಮಾಂತರಸುಕೃತಪರಿಪಾಕ ಗಳಾಗಿರಬಹುದೆಂದು ಹೇಳಬೇಕಾಗುತ್ತದೆ. ಜನ್ಮಾಂತರಶಬ್ದಕ್ಕೆ, ಪೂರ್ವ ಜನ್ಮವೆಂದು ಕೆಲವು ಸಂದರ್ಭಗಳಲ್ಲಿ ಅರ್ಥಮಾಡಲ್ಪಟ್ಟಾಗ್ಯೂ, ಇದಕ್ಕೆ ಬೇರೆಯಾದ ಅರ್ಥವು ಮಾಡಲ್ಪಡಬೇಕು. ಈ ಜನ್ಮದಲ್ಲಿ ನಾವು ಅನುಭವಿ ಸತಕ್ಕ ಶುಭಾಶುಭಗಳಿಗೆ ಕಾರಣವಾದ ಕರ್ಮಗಳು, ಇದಕ್ಕೆ ಪೂರ್ವ ದಲ್ಲಿ ಮಾಡಲ್ಪಟ್ಟಿರಬೇಕು. ಈ ದಿನ ದಿವಾನಗಿರಿಮಾಡತಕ್ಕವನು ದಿವಾನ ಗಿರಿಗೆ ಹೇಗೆ ಬಂದನೆಂದು ಪರೀಕ್ಷಿಸಿದರೆ, ಅವನು ಬಾಲ್ಯದಲ್ಲಿ ಶ್ರದ್ಧೆ ಯಿಂದ ವಿದ್ಯಾಭ್ಯಾಸಮಾಡಿ, ದೇಶಾಟನದಿಂದಲೂ ಪಂಡಿತಭಾಷಣ ದಿಂದಲೂ ಅಸಾಧಾರಣವಾದ ಬುದ್ಧಿವಿಕಾಸವನ್ನು ಹೊಂದಿ, ಪ್ರಜಾರಂ ಜನೆಯಲ್ಲಿ ಸಮರ್ಥನಾಗಿ, ಕೂಡಿದಮಟ್ಟಿಗೂ ನಿಸ್ಪೃಹತೆಯನ್ನು ಸಂಪಾ

ದಿಸಿ, ದಿವಾರ್ಣಗಿರಿಗೆ ತರಲ್ಪಟ್ಟರೆ ತನ್ನ ಕೆಲಸವನ್ನು ಚೆನ್ನಾಗಿ ಮಾಡಿ ಧರ್ಮದಿಂದ ರಾಜ್ಯಭಾರಮಾಡುವನೆಂಬ ಪ್ರತ್ಯಯ ಹುಟ್ಟುವಂತೆ ಕರ್ಮ ಗಳನ್ನು ಮಾಡಿರುವನೆಂದು ಗೊತ್ತಾಗುವುದು. ಅಂಥ ಕರ್ಮಗಳೇ, ಅವನ ದಿವಾರ್ಣಗಿರಿಗೆ ಮುಖ್ಯಕಾರಣಗಳಾಗುವುವು. ಆದುದರಿಂದ, ಜನ್ಮಾಂತರ ನೆಂದರೆ ಭೂತಕಾಲದಲ್ಲಿ ನಾವು ಮಾಡಿದ ಕಾರ್ಯಗಳ ಪರಿಪಾಕವೆಂದು ಭಾವಿಸಬೇಕಾಗುತ್ತದೆ. ಸಮಸ್ತ ಕಾರ್ಯಗಳಿಗೂ, ಈ ರೀತಿಯಲ್ಲಿ ಕಾರಣ ಗಳಿದ್ದೇ ಇರುವುವು. ಇವುಗಳನ್ನು ಪರಿಶೀಲಿಸಿ ಪೂರ್ವಾಪರಗಳನ್ನು ತಿಳಿದುಕೊಂಡವನು, ವಿವೇಕಿಯೆಂದು ಭಾವಿಸಲ್ಪಡುವನು. ಸಕಲ ವಿದ್ಯೆ ಗಳಿಗೂ, ಇಂಥ ಪೂರ್ವಾಪರಜ್ಞಾನವೇ ಮುಖ್ಯವಿಷಯವು. ಇಂಥ ಜ್ಞಾನವು ಲಭ್ಯವಾಗಬೇಕಾದರೆ, ದುರಭಿಮಾನವಿಲ್ಲದೆ ಸಕಲ ವೇದ ಶಾಸ್ತ್ರ ಪುರಾಣೇತಿಹಾಸಗಳನ್ನೂ ವ್ಯಾಸಂಗಮಾಡಬೇಕು. ವ್ಯಾಸಂಗಮಾಡು ವುದರಲ್ಲಿ ವಿಚಾರಪರನಾಗಿಯೂ ಇರಬೇಕು. 'ಕೋಣ ಈಯಿತೆಂದರೆ ಕೊಟ್ಟಿಗೆಯಲ್ಲಿ ಕಟ್ಟು' ಎಂದು ಹೇಳತಕ್ಕವರಂತೆ, ಶಬ್ದಪ್ರಮಾಣದಲ್ಲಿ ಮಾತ್ರ ಶರಣನಾಗಿರಕೂಡದು. ದೇವರು ಬುದ್ಧಿಯನ್ನು ಕೊಟ್ಟಿರುವುದು ವಿಚಾರಕ್ಕೋಸ್ಕರವೆಂಬುದಾಗಿ ತಿಳಿದುಕೊಂಡು, ಅವಿಚಾರಪೂರ್ವಕ ವಾಗಿ ದೊಡ್ಡ ವಿಷಯಗಳನ್ನು ನಂಬಿ ನಡೆಯಬಾರದು. ಶ್ರದ್ಧೆಯಿಂದ ವ್ಯಾಸಂಗಮಾಡುತ ವಿಚಾರದಿಂದ ತಪ್ಪು ಅರ್ಥಗಳನ್ನು ತಿಳಿದುಕೊಳ್ಳುತ ಆರ್ಜಿಸಲ್ಪಟ್ಟ ಯುಕ್ತಾಯುಕ್ತಜ್ಞಾನವನ್ನು ಅನುಷ್ಠಾನಕ್ಕೆ ತಂದುಕೊ ಳ್ಳುವುದರಲ್ಲಿ ನಿರತನಾಗಿರತಕ್ಕವನು, ತಾನು ಸುಖವಾಗಿ ಬದುಕುವುದಲ್ಲದೆ, ತನ್ನ ಕುಟುಂಬವನ್ನೂ ತನ್ನ ದೇಶವನ್ನೂ ಒಳ್ಳೆಯ ಸ್ಥಿತಿಗೆ ತರುವುದಕ್ಕೂ

ಅರ್ಹನಾಗುವನು. ಎಷ್ಟು ವಿದ್ಯಾವಂತನಾದಾಗ್ಯೂ, ಎಷ್ಟು ಜ್ಞಾನಶೀಲ
ನಾದಾಗ್ಯೂ, ಶ್ರದ್ಧೆಯಿಂದ ಕೆಲಸಮಾಡದಿರತಕ್ಕವನು, ಎಂದಿಗೂ ಒಳ್ಳೆಯ
ಪದವಿಗೆ ಬರುವುದಿಲ್ಲ. ಭಾರತೀಯರಾದ ನಮ್ಮ ಅಜಗರಾವಸ್ಥೆಯನ್ನು
ನೋಡಿ, ಪಾಶ್ಚಾತ್ಯರು ಪರಿಹಾಸಮಾಡುವುದುಂಟು. ಇತರ ಜನಗಳು
ಓಡುತ್ತಿರುವಾಗ, ನಾವು ನಡೆಯುತ್ತೇವಂತೆ! ಇತರ ಜನಗಳು ನಡೆಯು
ತ್ತಿರುವಾಗ, ನಾವು ಕೂರುವುದರಲ್ಲಿ ಆಸಕ್ತರಾಗುತ್ತೇವಂತೆ!! ಕುಳಿತಿರ
ತಕ್ಕವರನ್ನು ನೋಡಿ ನಾವು ಮಲಗುತ್ತೇವಂತೆ!!! ಈ ರೀತಿಯಲ್ಲಿ
ನಮ್ಮನ್ನು ಪರಿಹಾಸಮಾಡುತ್ತಾರೆ. ಈ ಪರಿಹಾಸಕ್ಕೆ ನಾವು ವಿಷಯರಲ್ಲ
ವೆಂದು ಹೇಳುವುದೂ ಕಷ್ಟವಾಗಿರುವುದು. ಪಾಶ್ಚಾತ್ಯರು, ಯಾವ
ಕೆಲಸವನ್ನು ಹಿಡಿದಾಗ್ಯೂ ಬಹಳ ಶ್ರದ್ಧೆಯಿಂದ ಅದನ್ನು ಮಾಡುವರು;
ಬಹಳ ದ್ರವ್ಯವನ್ನು ಸಂಪಾದಿಸುವರು; ಬಹಳ ಸುಖವನ್ನೂ ಪಡೆಯು
ವರು. ನಾವು, ಸಂಪಾದಿಸುವುದರಲ್ಲಿಯೂ, ಸಂಪಾದಿಸಿದುದನ್ನು ಅನುಭ
ವಿಸುವುದರಲ್ಲಿಯೂ, ಬಹಳ ಹಿಂದಾಳುಗಳಾಗಿರುತ್ತೇವೆ. ಪ್ರವೃತ್ತಿ
ಮಾರ್ಗಗಳಲ್ಲಿ ಪಾಶ್ಚಾತ್ಯರು ಹೇಗೆ ಚಕ್ರವರ್ತಿಗಳಾಗಿರುವರೋ, ಹಾಗೆ
ನಿವೃತ್ತಿಮಾರ್ಗದಲ್ಲಿ ನಾವು ಚಕ್ರವರ್ತಿಗಳಾಗಿರುವೆವು. ವೈರಾಗ್ಯಚಕ್ರ
ವರ್ತಿಗಳಾಗಿರಬೇಕೆಂಬ ಅಭಿಮಾನವೇ, ನಮ್ಮನ್ನು ಹೀನಸ್ಥಿತಿಗೆ ತಂದಿರು
ವುದು. ಈ ಲೋಕದಲ್ಲಿ ಧರ್ಮದಿಂದ ಕೆಲಸಮಾಡಿ ಸಕಲಸೌಖ್ಯಗಳನ್ನೂ
ಧರ್ಮದಿಂದ ಅನುಭವಿಸುವುದೇ ಲೋಕಾಂತರಕ್ಕೆ ಸಾಧಕವೆಂದು ತಿಳಿದು
ಕೊಂಡು, ಪಾಶ್ಚಾತ್ಯರು ಈ ಲೋಕದ ಸುಖಪ್ರಾಪ್ತಿಗೆ ಸಾಧಕವಾದುವು
ಗಳನ್ನು ಅರ್ಜಿಸುವುದರಲ್ಲಿ ಬದ್ಧಾದರರಾಗಿರುತ್ತಾರೆ. ‘ಈ ಲೋಕದ

ಸೌಖ್ಯವೂ ಸಂಪತ್ತೂ ಹೇಗಾದರೂ ಇರಲಿ; ಲೋಕಾಂತರದಲ್ಲಿ ಒಳ್ಳೆಯ ಪದವಿ ನಮಗೆ ಲಭ್ಯವಾಗುವಂತೆ ಮಾಡಿಕೊಳ್ಳಬೇಕು.' ಎಂದು ನಮ್ಮಲ್ಲಿ ಅನೇಕರು, ಸನ್ಯಾಸಿಗಳಾಗಿಯೂ, ಸಾಧುಗಳಾಗಿಯೂ, ಫಕೀರರಾಗಿಯೂ, ಯೋಗಿಗಳಾಗಿಯೂ ಇರುತ್ತಾರೆ. ಇವರಲ್ಲಿ ಸ್ವಶಕ್ತಿಯಿಂದ ಸುಖವಾಗಿ ಜೀವನವನ್ನು ಸಂಪಾದಿಸಿಕೊಳ್ಳುವುದಕ್ಕೆ ಮನಸ್ಸಿಲ್ಲದೆ ಉದರ ನಿಮಿತ್ತವಾಗಿ ಪರಮೈಕಾಂತಿವೇಷವನ್ನು ಧರಿಸಿರತಕ್ಕವರು, ನೂರಕ್ಕೆ ತೊಂಬತ್ತೊಂಬತ್ತು ಜನಗಳಿಗಿಂತ ಕಡಮೆಯಾಗಿರುವುದಿಲ್ಲ. ಇವರ ಚರ್ಯೆಗಳಿಗೂ, ಇವರ ವೇಷಗಳಿಗೂ, ಲೇಶವೂ ಸಂಬಂಧವಿರುವುದಿಲ್ಲ. ನಿಜವಾದ ವೈರಾಗ್ಯವು, ಇವರಲ್ಲಿ ಬಹಳ ಕೊಂಚಜನಗಳಿಗಿರುವುದು. ಇವರಲ್ಲಿ ಅನೇಕರಿಗೆ, ಈ ಲೋಕದ ಸೌಖ್ಯವು ಪರಿಪೂರ್ಣವಾಗಿರುವುದಿಲ್ಲ. ಲೋಕಾಂತರದಲ್ಲಿ, ನರಕಯಾತನೆ ವಿನಾ ಇನ್ನಾವುದೂ ಲಭ್ಯವಾಗುವುದಿಲ್ಲ. ಈ ಪಾಪಿಗಳಿಗೆ " ಈ ಲೋಕದಲ್ಲಿ ನಾವು ಮಾಡತಕ್ಕ ಕರ್ಮಗಳೇ ಲೋಕಾಂತರಕ್ಕೆ ಸೋಪಾನ " ಎಂಬ ವಿಷಯವು ಗೊತ್ತಾಗಿರುವುದಿಲ್ಲ. ಇದು ತುಂಬ ಶೋಚನೀಯವಾದುದು.

ಯಾರು ತುಂಬ ಕೆಲಸಮಾಡುವರೋ, ಅವರಿಗೆ ಇನ್ನೂ ಹೆಚ್ಚಾಗಿ ಕೆಲಸಮಾಡುವುದಕ್ಕೆ ಅವಕಾಶವಿರುವುದು. ಅವರು ಬೇಕಾದಷ್ಟು ಕಾಲವನ್ನು ಗೊತ್ತುಮಾಡಿಕೊಳ್ಳುವರು. ಆ ಕಾಲದಲ್ಲಿ ಎಂಥ ವಿಘ್ನಗಳು ಬಂದಾಗ್ಯೂ, ಉದ್ದಿಷ್ಟವಾದ ಕೆಲಸವನ್ನು ಮಾಡದೆ ಬಿಡುವುದಿಲ್ಲ. ಆ ಕೆಲಸವನ್ನು ಮಾಡಿದ ತರುವಾಯ ಇತರ ವಿಷಯಗಳಲ್ಲಿ ಗಮನಕೊಡುವರು. ಈ ರಾಜಧಾನಿಯಲ್ಲಿ, ಒಬ್ಬ ಡಾಕ್ಟರ ಬಳಿಗೆ ಬಹಳ ಬಡವನಾದ

ಒಬ್ಬ ಮನುಷ್ಯನು ಬಂದು, "ನನ್ನ ಹೆಂಡತಿಗೆ ಪ್ರಸವಯಾತನೆಯುಂಟಾಗಿ ದೇಹದಮೇಲೆ ಪ್ರಜ್ಞೆತಪ್ಪಿದೆ; ಶಿಶುವು ಉದರದಲ್ಲಿಯೇ ಸತ್ತಿರುವಂತೆ ತೋರುತ್ತದೆ. ತಾವು ಬಂದು ಸತ್ತ ಮಗುವನ್ನು ಉದರದಿಂದ ತೆಗೆದು ನನ್ನ ಕುಟುಂಬವನ್ನು ಉದ್ಧರಿಸಬೇಕು." ಎಂದು ಪ್ರಾರ್ಥಿಸಿದನು. ಹೀಗೆ ಹೇಳುತ್ತಿರುವಾಗಲೇ, ಆ ಡಾಕ್ಟರ ಹೆಂಡತಿ ಸತ್ತಳೆಂದು ವರ್ತಮಾನ ಬಂದಿತು. ಆಗ ಡಾಕ್ಟರು, ತಮ್ಮ ಮನೆಗೆ ಹೋಗುವುದನ್ನು ನಿಲ್ಲಿಸಿ, ಆ ಮನುಷ್ಯನ ಮನೆಗೆ ಹೋಗಿ, ಉದರದಲ್ಲಿ ಸತ್ತಿದ್ದ ಮಗುವನ್ನು ಈಚೆಗೆ ತೆಗೆದು, ಬಾಣಂತಿಗೆ ಅಪಾಯತಪ್ಪುವವರೆಗೂ ಅಲ್ಲಿದ್ದು, ತರುವಾಯ ಸ್ವರ್ಗಸ್ಥಳಾದ ಹೆಂಡತಿಯ ಉತ್ತರಕ್ರಿಯೆಗಳ ವಿಷಯಕ್ಕೆ ಗಮನವನ್ನು ಕೊಟ್ಟರು ಈ ಡಾಕ್ಟರು, ಸರಕಾರದ ಸಂಬಳವನ್ನು ತೆಗೆದುಕೊಂಡು ಕೆಲಸಮಾಡಿದಾಗ್ಯೂ, ಸಂಬಳಕ್ಕೆ ತಕ್ಕಷ್ಟು ಕೆಲಸವನ್ನು ಮಾಡುವುದು ತನ್ನ ಕರ್ತವ್ಯವೆಂದು ಭಾವಿಸದೆ, ಹಗಲಲ್ಲಿಮಾತ್ರವಲ್ಲದೆ ರಾತ್ರಿಯಲ್ಲಿಯೂ ಕೂಡ ಮೂರು ನಾಲ್ಕು ಆವೃತ್ತಿ ಆಸ್ಪತ್ರೆಯ ವಾರ್ಡುಗಳಲ್ಲಿ ಬಹಳ ಯಾತನೆಪಡುವ ರೋಗಿಗಳ ಕಷ್ಟವನ್ನು ತಪ್ಪಿಸುವುದರಲ್ಲಿ ಆದರತೋರಿಸುತ್ತಿರುವರು. ಇದೇ ಸದುದ್ಯೋಗಿಗಳ ಲಕ್ಷಣವು. ಇಂಥವರು, ವಿರಾಮವಿಲ್ಲವೆಂದು ಎಂದಿಗೂ ಹೇಳುವುದಿಲ್ಲ. ಸೋಮಾರಿಗಳಿಗೆ ಕಾಲವೆಲ್ಲ ವಿರಾಮವಾಗಿರುತ್ತದೆ; ಆದಾಗ್ಯೂ, ನನಗೆ ವಿರಾಮವಿಲ್ಲವೆಂದು ಅವರು ಪ್ರಲಪಿಸುತ್ತಾರೆ. ಪ್ರಪಂಚದಲ್ಲಿ ಅಸಾಧ್ಯವಾದ ಕೆಲಸಗಳನ್ನು ಕೂಡ ಸಾಧಿಸುವುದರಲ್ಲಿ ಉದ್ಯೋಗಮಾಡಿ ಮನೋರಥಪ್ರಾಪ್ತಿಯನ್ನು ಹೊಂದಿದವರು ಅನೇಕರಿರುವರು. ಇವರಲ್ಲಿ ಯಾರೂ ನನಗೆ ವಿರಾಮವಿಲ್ಲವೆಂದು

ಹೇಳಿದವರಲ್ಲ. ಒಳ್ಳೆಯ ಕೆಲಸ ಯಾವುದು ಬಂದಾಗ್ಯೂ ಅದನ್ನು ತಾವು ಮಾಡುತ್ತೇವೆಂದು ಸಂಕಲ್ಪಮಾಡಿ, ಉಪಕ್ರಮಿಸಿದ ಕೆಲಸವನ್ನು ಪೂರೈಸಿ, ಒಳ್ಳೆಯ ಕೆಲಸಗಳನ್ನು ಮಾಡುವುದಕ್ಕೆ ವಿರಾಮವು ಎಲ್ಲರಿಗೂ ಸಿಕ್ಕುವು ದೆಂದು ಪ್ರತ್ಯಯವನ್ನುಂಟುಮಾಡಿರುವರು.

ಯಾವ ಕೆಲಸ ಕೈಗೂಡಬೇಕಾದಾಗ್ಯೂ, ಧೈರ್ಯದಿಂದಲೂ ಸ್ಥೈರ್ಯ ದಿಂದಲೂ ಕೆಲಸಮಾಡುವ ಶಕ್ತಿಯನ್ನು ಆರ್ಜಿಸಬೇಕು. ಈ ಶಕ್ತಿಯು ಸರ್ವರಿಗೂ ಬರುವುದಿಲ್ಲ. ಇದು ಜನ್ಮತಃ ಬರತಕ್ಕ ಶಕ್ತಿಯಾಗಿರುವುದು. ಎಪಿರಸ್ ಎಂಬ ಸಂಸ್ಥಾನದ ಪ್ರಭುವಾದ ಸ್ಕ್ಯಾಂಡರ್ ಬೇಗ್ ಎಂಬವನು ಹಿಡಿದ ಕೆಲಸಗಳನ್ನು ಮಾಡುವುದರಲ್ಲಿ ಅಪ್ರತಿಹತವಾದ ಧೈರ್ಯಸ್ಥೈರ್ಯ ಗಳುಳ್ಳವನಾಗಿದ್ದನು, ಯಾವ ಕೆಲಸಕ್ಕೆ ಪ್ರವರ್ತಿಸಿದಾಗ್ಯೂ "ಇಷ್ಟಾರ್ಥ ಸಿದ್ಧಿಯನ್ನು ಹೊಂದಬೇಕು; ಅಥವಾ ಹಾಗೆ ಹೊಂದುವುದಕ್ಕೋಸ್ಕರ ಮಾಡತಕ್ಕ ಪ್ರಯತ್ನದಲ್ಲಿ ದೇಹವನ್ನು ಬಿಡಬೇಕು.'' ಎಂಬ ಸಂಕಲ್ಪ ದಿಂದ ಕೆಲಸಮಾಡುತಿದ್ದನು. ಪರಾಜಯವೆಂಬುದು ಯಾವುದೋ-ಅದು ಇವನಿಗೆ ಗೊತ್ತಾಗುವುದಕ್ಕೆ ಅವಕಾಶವೇ ಬರಲಿಲ್ಲ. ಹಿಡಿದ ಕೆಲಸಗಳ ಲ್ಲೆಲ್ಲ ಜಯವಾಗುತ್ತ ಬಂದಿತು. ಅಸಾಧ್ಯವಾದ ಕೆಲಸವೇ ಇಲ್ಲವೆಂಬು ದಾಗಿ ಇವನು ತಿಳಿದುಕೊಂಡಿದ್ದನು. ಇವನ ಧೈರ್ಯಸ್ಥೈರ್ಯಗಳ ಪರಿ ಪಾಕದಿಂದ, ಇವನಿಗೆ ಹಾಗೆಯೇ ನಡೆದುಬಂದಿತು. ಇವನು ಸ್ವರ್ಗಸ್ಥ ನಾದಮೇಲೆ, ಇವನನ್ನು ನೋಡಿದ್ದ ಮಹಾಜನಗಳೆಲ್ಲರೂ, ಇವನ ಮೂಳೆ ಗಳಲ್ಲಿ ಒಂದೊಂದು ಚೂರನ್ನು ತೆಗೆದುಕೊಂಡು, ಒಂದು ಚಿನ್ನದ ಆಭರ ಣಕ್ಕೆ ಸೇರಿಸಿ, ಅದನ್ನು ಒಂದುಹಾರಕ್ಕೆ ಪವಣಿಸಿ, ಎದೆಗೆ ತಗಲುವಂತೆ ಆ

ಹಾರವನ್ನು ಹಾಕಿಕೊಳ್ಳುತಿದ್ದರು ಈ ಅಚೇತನವಾದ ಮೂಳೆಯಲ್ಲಿಯೂ ಕೂಡ ಅಪ್ರತಿಹತವಾದ ಧೈರ್ಯಸ್ಥೈರ್ಯಗಳುಂಟೆಂದು ತಿಳಿದುಕೊಳ್ಳುವುದಕ್ಕೆ, ಅವನು ಬದುಕಿದ್ದ ಕಾಲದಲ್ಲಿ ಅವನು ತೋರಿಸಿದ ಧೈರ್ಯಸ್ಥೈರ್ಯಗಳ ಪರಾಕಾಷ್ಠೆಯೇ ಮುಖ್ಯಕಾರಣವು. ಭಾವನೆಗೆ ಅನುಸಾರವಾಗಿ ಧೈರ್ಯಸ್ಥೈರ್ಯಗಳುಂಟಾಗುವುದುಂಟು. ಯಂತ್ರ ಮೊದಲಾದುವುಗಳನ್ನು ಧರಿಸಿ ಕೆಲವು ಜನಗಳು ಪ್ರಯೋಜನ ಹೊಂದುತಲಿರುವುದು, ಇದಕ್ಕೆ ದೃಷ್ಟಾಂತವಾಗಿರುವುದು.

ಈ ಪ್ರಪಂಚದಲ್ಲಿ ಮುಕ್ಕಾಲುಭಾಗವು ಸಮುದ್ರದಿಂದ ಆವರಿಸಲ್ಪಟ್ಟಿದೆ. ಉಳಿದ ಕಾಲುಭಾಗದಲ್ಲಿ ಮುಕ್ಕಾಲುಭಾಗವು, ಬೆಟ್ಟ ಗುಡ್ಡ ನದಿ ಸರೋವರ ಕಾಡು ಊಷರಪ್ರದೇಶ–ಇವುಗಳಿಂದ ಆಕ್ರಮಿಸಲ್ಪಟ್ಟಿದೆ. ಉಳಿದ ಭೂಭಾಗವು ಬಹಳ ಕೊಂಚವಾಗಿದ್ದಾಗ್ಯೂ, ಇದರಲ್ಲಿ ಸರಿಯಾಗಿ ಕೃಷಿಯು ಮಾಡಲ್ಪಟ್ಟರೆ, ಪ್ರಪಂಚದಲ್ಲಿರತಕ್ಕ ಸ್ತ್ರೀಪುರುಷರಿಗೆಲ್ಲ ಉದ್ಯೋಗ ಸಿಕ್ಕುವುದಕ್ಕೂ ಜೀವನವಾಗುವುದಕ್ಕೂ ಬೇಕಾದಷ್ಟು ಫಲವತ್ತಾದ ಭೂಮಿ ಸಿಕ್ಕುವುದು. ಅದೇ ರೀತಿಯಲ್ಲಿ ಇಪ್ಪತ್ತುನಾಲ್ಕು ಘಂಟೆಗಳುಳ್ಳ ಹಗಲುರಾತ್ರಿಗಳನ್ನು ಸರಿಯಾಗಿ ವಿನಿಯೋಗಿಸಿಕೊಂಡರೆ, ತಾನು ಹಿಡಿದ ಸಮಸ್ತ ಕೆಲಸಗಳನ್ನೂ ಸಮಗ್ರವಾಗಿ ಮಾಡಿ ಕೃತಕೃತ್ಯನಾಗುವುದಕ್ಕೆ ಎಷ್ಟು ಕಾಲವಾವಶ್ಯಕವೋ ಅಷ್ಟು ಕಾಲವೂ ಮನುಷ್ಯನಿಗೆ ಸಿಕ್ಕಿಯೇ ಸಿಕ್ಕುವುದು. ಪೂರ್ವಾಪರಜ್ಞಾನವಿಲ್ಲದ ಸೋಮಾರಿಗಳು ಒಳ್ಳೆಯ ಕೆಲಸಗಳನ್ನು ಮಾಡುವುದಕ್ಕೆ ತಮಗೆ ವಿರಾಮವಿಲ್ಲವೆಂದು ಹೇಳಿಕೊಳ್ಳುವರು. ಇದು ಮೂರ್ಖಪ್ರಲಾಪವೇ ಹೊರತು, ಪ್ರಾಜ್ಞರ ಮಾತಲ್ಲ.

ದೊಡ್ಡ ಕೆಲಸಗಳನ್ನು ಮಾಡತಕ್ಕವರು, ಪ್ರತಿದಿನವೂ ಅಂಥ ಕೆಲಸ ಮಾಡುವುದಕ್ಕೆ ಕಾಲವನ್ನು ನಿಯಮಮಾಡಿಕೊಳ್ಳುವರು. ಆ ಕಾಲದಲ್ಲಿ ಕಾರ್ಯಾಂತರಗಳನ್ನು ಬಿಟ್ಟು, ಚಾಂಚಲ್ಯಕ್ಕೆ ಒಳಗಾಗದೆ, ಹಿಡಿದ ಕೆಲಸ ಗಳನ್ನು ಸಾವಧಾನದಿಂದ ಮಾಡುವರು. ಕೆಲಸಮಾಡುವ ಕಾಲದಲ್ಲಿ, ತಮ್ಮ ಬುದ್ಧಿಯನ್ನು ಕೂಡ ಕೆಲಸದಮೇಲೆ ನಿಲ್ಲಿಸುವರು. ಅನೇಕ ವಿದ್ಯಾರ್ಥಿಗಳು, ಗ್ರಂಥಪುಸ್ತಕಗಳನ್ನು ಕಣ್ಣಿನಿಂದ ನೋಡುತ, ಬಾಯಲ್ಲಿ ಗಟ್ಟಿಯಾಗಿ ಗ್ರಂಥಗಳನ್ನು ಪಠಿಸುತ, ಮನಸ್ಸನ್ನು ವಿಷಯಾಂತರಗಳ ಮೇಲೆ ಬಿಡುವುದು, ಅನುಭವಸಿದ್ಧವಾಗಿಯೇ ಇದೆ. ಕಣ್ಣಿನ ವ್ಯಾಪಾ ರಕ್ಕೂ ಬಾಯಿನ ವ್ಯಾಪಾರಕ್ಕೂ ಬುದ್ಧಿಯ ವ್ಯಾಪಾರವು ಸೇರದಿದ್ದರೆ, ಗ್ರಂಥವು ಸ್ವಾಧೀನವಾಗುವುದಿಲ್ಲ. ಹೀಗೆ ಮಾಡಿದರೆ, ಪಾಠ ಬರುವುದೇ? ಹಿಡಿದ ಕೆಲಸ ನೆಟ್ಟಗಾಗುವುದೇ ? ವಿದ್ಯಾರ್ಥಿಗಳು ಪರೀಕ್ಷೆಯಲ್ಲಿ ತೇರ್ಗಡೆ ಯಾಗುವರೇ ? ಸುಖವಾಗಿ ಜೀವಿಸುವುದಕ್ಕೆ ಬೇಕಾದ ಯೋಗ್ಯತೆ ಬರು ವುದೇ ? ಮನೋರಥಭಂಗವಾಗುವುದಿಲ್ಲವೇ ? ದಾರಿದ್ರ್ಯವು ಪ್ರಾಪ್ತವಾ ಗುವುದಿಲ್ಲವೇ ? ಸಂಪತ್ತು ದೂರವಾಗುವುದಿಲ್ಲವೇ ? ಸರಸ್ವತೀಪ್ರಸನ್ನತೆ ಹೇಗೋ–ಹಾಗೆ ಲಕ್ಷ್ಮೀಪ್ರಸನ್ನತೆಯೂ ತಪ್ಪುವುದಿಲ್ಲವೇ? ಈ ವಿಷಯ ವನ್ನು ಯೋಚಿಸತಕ್ಕ ವಿದ್ಯಾರ್ಥಿಗಳೂ, ಬೋಧಿಸತಕ್ಕ ಪಾಠಕರೂ ಬಹಳ ವಿರಳರಾಗಿರುತ್ತಾರೆ. ವಿದ್ಯಾರ್ಥಿಗಳ ಇಷ್ಟಸಿದ್ಧಿ ದೂರವಾಗುವುದಕ್ಕೆ, ಇದೇ ಮುಖ್ಯಕಾರಣವು. ಇದಕ್ಕೆ ಇನ್ನೂ ಒಂದು ಕಾರಣವುಂಟು. ಉಪಕ್ರಮಿಸಿದ ಕೆಲಸವನ್ನು ಪ್ರತಿದಿನವೂ ಮಾಡುತ ಬಂದರೆ, ಪ್ರತಿದಿನವೂ ಕೆಲಸಮಾಡಬೇಕೆಂಬ ಆಸಕ್ತಿಯೂ ಪ್ರಬಲವಾಗುವುದು ; ಆಮೇಲೆ,

ಒಂದುದಿವಸ ಕೆಲಸಬಿಡುವುದೂ ಕೂಡ ಬಹಳ ಕಷ್ಟವಾಗಿ ಕಾಣುವುದು. ಪ್ರಯತ್ನವಿಲ್ಲದೆ ಕ್ಲೃಪ್ತವಾದ ಕಾಲದಲ್ಲಿ ಆ ಕೆಲಸವನ್ನು ಮಾಡತಕ್ಕ ಅಭ್ಯಾಸವೂ ಉಂಟಾಗುವುದು. ಹಾಗೆ ಕೆಲಸಮಾಡುವಾಗ ಉಂಟಾಗುವ ವಿಘ್ನಕ್ಕೆ ಒಳಪಟ್ಟು ಒಂದುದಿವಸ ಕೆಲಸವನ್ನು ಬಿಟ್ಟಾಗ್ಗೂ, ಪುನಃ ಆ ಕೆಲಸದಲ್ಲಿ ಮನಸ್ಸನ್ನು ಸೇರಿಸುವುದು ಬಹಳ ಕಷ್ಟವಾಗಿರುವುದು. ಕ್ಲೃಪ್ತವಾಗಿ ಒಂದುದಿನವೂ ತಪ್ಪದೆ ಕೆಲಸಮಾಡತಕ್ಕವರು, ಬಹಳಬೇಗ ಆ ಕೆಲಸವನ್ನು ಸಮಗ್ರವಾಗಿ ಮಾಡಿ ಪೂರಯಿಸುವುದಕ್ಕೂ ಸಮರ್ಥರಾಗುವರು.

ಮಾರ್ಟಿನ್‌ಲ್ಯೂಥರೆಂಬ ಕ್ರಿಸ್ತಧರ್ಮಪರಿಶೋಧಕನು, ಕ್ರಿಸ್ತರ ವೇದವಾದ ' ಬೈಬಲ್ ' ಎಂಬ ಗ್ರಂಥವನ್ನು ತರ್ಜುಮೆಮಾಡುವುದಕ್ಕುಪಕ್ರಮಿಸಿ, ಪ್ರತಿನಿತ್ಯವೂ ಕ್ಲೃಪ್ತವಾದ ಕಾಲದಲ್ಲಿ ತರ್ಜುಮೆಮಾಡುತಬಂದನು. ಈ ಕೆಲಸ ಪೂರಯಿಸಲ್ಪಟ್ಟು ಪುಸ್ತಕ ಮುದ್ರಿಸಲ್ಪಟ್ಟಾಗ, ಬಹುಜನಗಳಿಂದ ಬರೆಯಲ್ಪಟ್ಟ ಇಷ್ಟು ದೊಡ್ಡ ಗ್ರಂಥವು ಒಬ್ಬ ಮನುಷ್ಯನಿಂದ ಹೇಗೆ ತರ್ಜುಮೆಮಾಡಲ್ಪಟ್ಟಿತೆಂದು ಪ್ರಶ್ನೆಯುಂಟಾಯಿತು ; ಒಂದು ದಿನವೂ ತಪ್ಪದೆ ನಿತ್ಯವೂ ತರ್ಜುಮೆಯನ್ನು ಮಾಡಿದುದರಿಂದ ಈ ಕೆಲಸ ಪೂರಯಿಸಲ್ಪಟ್ಟಿತ್ತೆಂದು, ಆ ಪ್ರಶ್ನೆಗೆ ಉತ್ತರವೂ ಹೊರಟಿತು. ಒಂದು ಮೊಲವು, ತನ್ನಷ್ಟುವೇಗವಾಗಿ ಓಡತಕ್ಕ ಪ್ರಾಣಿ ಪ್ರಪಂಚದಲ್ಲಿ ಯಾವುದೂ ಇರುವುದಿಲ್ಲವೆಂದು ವಿಜೃಂಭಿಸಲು, ಒಂದು ಆಮೆಯು ಇದರ ವಿಜೃಂಭಣೆಯನ್ನು ನೋಡಿ, ನಾನು ನಿನ್ನನ್ನು ಸೋಲಿಸುತ್ತೇನೆಂದು ಹೇಳಿತು. ಇದನ್ನು ಕೇಳಿ ಮೊಲವು ನಕ್ಕಿತು. ಇತರ ಪ್ರಾಣಿಗಳೂ ನಕ್ಕುವು.

ಆದಾಗ್ಯೂ, ಆನೆಯು ಮೊಲದೊಡನೆ ಜೂಜುಕಟ್ಟಿ ಓಡುವುದಾಗಿ ಹಠ ಮಾಡಿದುದರಿಂದ, ಪಂಚಾಯಿತರು ನಿಯಮಿಸಲ್ಪಟ್ಟರು. ಜೂಜುಹಿಡಲ್ಪಟ್ಟಿತು. ಒಂದು ನಿಮಿಷಾರ್ಧದಲ್ಲಿ ಮೊಲವು ಮುಕ್ಕಾಲುಮೂರುವೀಸ ಪಾಲು ಓಡಿ, ಹಿಂದಿರುಗಿ ನೋಡಿತು. ಆನೆಯು ಬಹಳದೂರದಲ್ಲಿ ಬರುತ್ತಿದ್ದಿತು. ಈ ಪ್ರಾಣಿಯು ನನ್ನೊಡನೆ ಓಡುವುದಾಗಿ ದುರಹಂಕಾರಪಟ್ಟು ತಾನು ಇಷ್ಟು ಹಿಂದೆ ಬಿದ್ದಿರುವುದನ್ನು ನೋಡಿದಾಗ್ಯೂ ಇದಕ್ಕೆ ಇನ್ನೂ ನಾಚುಗೆಯಾಗಲಿಲ್ಲವೆಂದು ಪರಿಹಾಸಮಾಡಿ, ಅದು ಬರುವವರೆಗೂ ವಿಶ್ರಮಿಸಿಕೊಳ್ಳೋಣವೆಂದು, ಸಮೀಪದಲ್ಲಿದ್ದ ಒಂದು ಪೊದರಿನಲ್ಲಿ ಮಲಗಿಕೊಂಡಿತು. ಓಟದಿಂದುಂಟಾದ ಶ್ರಮದಿಂದ, ಅದಕ್ಕೆ ನಿದ್ರೆಬಂದಿತು. ಅದಕ್ಕೆ ಎಚ್ಚರವಾಗುವುದರೊಳಗಾಗಿ, ಆನೆಯು ಮುಂದಕ್ಕೆ ಹೋಗಿ, ಜಯವನ್ನು ಗೊತ್ತುಮಾಡುವ ಗುರುತಿನ ಒಳಗೆ ಹೋಗಿರುವುದನ್ನು ನೋಡಿ, ಜೂಜಿನಲ್ಲಿ ಓಡತಕ್ಕವರಿಗೆ ಜಯವಾಗುವುದೆಂದು ಹೇಳುವುದಕ್ಕಾಗುವುದಿಲ್ಲವೆಂಬುದಾಗಿಯೂ, ವೇಗದ ಜತೆಗೆ ಜಾಗರೂಕತೆಯೂ ಇರಬೇಕೆಂಬುದಾಗಿಯೂ, ಅಹಂಕಾರದಿಂದ ಮೈಮರೆತಿರಬಾರದೆಂಬುದಾಗಿಯೂ, ವೇಗವಿಲ್ಲದೆ ನಿಧಾನವಾಗಿ ಹೋಗತಕ್ಕವರೂ ಕೂಡ ಉದಾಸೀನತೆಮಾಡದೆ ಮೈಮೇಲೆ ಪ್ರಜ್ಞೆಯನ್ನಿಟ್ಟುಕೊಂಡು ಅವಿಚ್ಛಿನ್ನವಾಗಿ ಪ್ರಯಾಣಮಾಡಿದರೆ- ಈ ಗುಣಾತಿಶಯಗಳಿಲ್ಲದೆ ವೇಗವಾಗಿ ಹೋಗತಕ್ಕವರನ್ನೂ ಕೂಡ ಸೋಲಿಸುವರೆಂಬುದಾಗಿಯೂ ತಿಳಿದುಕೊಂಡು, ಭಗ್ನಮನೋರಥವಾಗಿ, ಎಲ್ಲ ಕಾಡುಮೃಗಗಳ ಪರಿಹಾಸಕ್ಕೂ ಗುರಿಯಾಯಿತು. ಈ ಕಥೆಯು ನಡೆದುದಲ್ಲವಾದಾಗ್ಯೂ, ಜಾಗರೂಕರಾದ ಮನುಷ್ಯರಿಗೂ, ಅಲಸರಾದವರಿಗೂ

ಸಂಪೂರ್ಣವಾಗಿ ಅನ್ವಯಿಸುತ್ತದೆ. ಬಹಳಮೇಧಾವಿಗಳಾಗಿಯೂ, ಬಹಳ ವೇಗದಿಂದ ಕೆಲಸಮಾಡತಕ್ಕವರಾಗಿಯೂ ಇರುವ ಅಜಾಗರೂಕರಿಗಿಂತಲೂ, ಬಹಳ ನಿಧಾನವಾಗಿಯಾದರೂ ಅವಿಚ್ಛಿನ್ನವಾಗಿಯೂ ಶ್ರದ್ಧೆಯಿಂದಲೂ ಕೆಲಸಮಾಡತಕ್ಕವರು, ಹಿಡಿದ ಕೆಲಸವನ್ನು ಜಾಗ್ರತೆಯಾಗಿಯೂ ಚೆನ್ನಾಗಿಯೂ ಮಾಡುವರು. ಬಹಳ ಚುರುಕಾದ ಕತ್ತಿಯನ್ನು ಒಂದು ಪದಾರ್ಥದಮೇಲೆ ಮೆಲ್ಲಗೆ ಇಟ್ಟರೆ, ಅದು ಕತ್ತರಿಸಿಹೋಗುವುದಿಲ್ಲ. ಮೊಂಡುಕತ್ತಿಯನ್ನಿಟ್ಟು ಬಲವಾಗಿ ಅಮುಕಿದರೆ, ಆ ಪದಾರ್ಥವು ಕತ್ತರಿಸಿಹೋಗುವುದು. ಹಾಗೆಯೇ ಮೇಧಾವಿಗಳಾಗಿಯೂ ಚಟುವಟಿಕೆಯಾಗಿಯೂ ಇರತಕ್ಕವರು ಅನಾದರದಿಂದ ಮಾಡತಕ್ಕ ಕೆಲಸಕ್ಕಿಂತಲೂ, ಸಾಮಾನ್ಯರಾದ ಜನಗಳು ಶ್ರದ್ಧೆಯಿಂದ ಮನಸ್ಸಿಟ್ಟು ಮಾಡುವ ಕೆಲಸವು ಬಹಳ ಚೆನ್ನಾಗುವುದರಲ್ಲಿ ಯಾವ ಸಂದೇಹವೂ ಇಲ್ಲ.

ಅನೇಕ ಕೆಲಸಗಳನ್ನು ಮಾಡತಕ್ಕವರು, ತಮ್ಮ ಕೆಲಸಗಳನ್ನು ಮಾಡುವುದರಲ್ಲಿ ಕ್ಲೃಪ್ತವಾದ ಕ್ರಮವನ್ನು ಏರ್ಪಡಿಸಿಕೊಳ್ಳುವರು; ಕೆಲಸಮಾಡುವುದಕ್ಕೆ ಅನುಕೂಲವಾದ ಕಾಲವನ್ನು ಗೊತ್ತುಮಾಡಿಕೊಳ್ಳುವುದರಲ್ಲಿಯೂ, ಬುಕ್ಕುಗಳನ್ನೂ ರಿಕಾರ್ಡು ಮೊದಲಾದುವುಗಳನ್ನೂ ವಿಂಗಡಿಸಿಕೊಳ್ಳುವುದರಲ್ಲಿಯೂ, ಇವರು ತೋರಿಸುವ ಕ್ರಮವು ಅದ್ಭುತವಾಗಿರುವುದು. ಜರಿಮಿಯಾ ಎವರ್ಟ್ಸ್‌ರವರು, ದಿನಕ್ಕೆ ಹದಿನಾರು ಘಂಟೆಗಳಿಗೆ ಕಡಮೆಯಿಲ್ಲದೆ ಕೆಲಸಮಾಡತಕ್ಕವರಾಗಿದ್ದರು. ಇಂತಹ ನಿಮಿಷದಲ್ಲಿ ಅವರು ಇಂತಹ ಕೆಲಸವನ್ನೇ ಮಾಡುತಿರುವರೆಂದು, ಅವರ ಆಳುಗಳು ಮೊದಲುಗೊಂಡು ಎಲ್ಲರೂ ಹೇಳಬಹುದಾಗಿದ್ದಿತು ಇವರ ಪುಸ್ತಕಗಳೂ,

ರಿಕಾರ್ಡುಗಳೂ, ಗೊತ್ತಿಲ್ಲದಹಾಗಿದ್ದುವು. ಆದಾಗ್ಯೂ, ಅವುಗಳಲ್ಲಿ ಯಾವಾಗ ಯಾವ ಪುಸ್ತಕವೋ ರಿಕಾರ್ಡೋ ಬೇಕಾದರೂ, ಒಂದು ನಿಮಿಷವೂ ತಡವಿಲ್ಲದೆ, ಅವುಗಳು ಇಂತಹ ಕಡೆಯಲ್ಲಿಯೇ ಇರುವುವೆಂದು ತೆಗೆದುಕೊಂಡು ಬರುತ್ತಿದ್ದರು. ಡಾಕ್ಟರ್ ಒಕೆನಲೀ ಎಂಬ ಲಾಯರು, ಲಂಡನ್ ಪಟ್ಟಣದಲ್ಲಿದ್ದರು. ಒಂದು ದಿನಕ್ಕೆ ಒಂದು ಲಕ್ಷ ರೂಪಾಯಿಗಳನ್ನು ಕೊಟ್ಟಹೊರತು, ಇವರು ದೇಶಾಂತರಗಳಿಗೆ ಮೊಕದ್ದಮೆಯನ್ನು ನಡೆಯಿಸುವುದಕ್ಕೆ ಹೋಗುತಿರಲಿಲ್ಲ. ಇವರ ಪುಸ್ತಕಭಂಡಾರದಲ್ಲಿ ಅನೇಕಲಕ್ಷ ಪುಸ್ತಕಗಳಿದ್ದುವು. ಅವುಗಳನ್ನು ತೆಗೆದು ಬೇಕಾದ ವಿಷಯಗಳನ್ನು ನೋಡಿಕೊಂಡು ಅವುಗಳನ್ನು ತಮ್ಮ ಮೇಜಿನಮೇಲೆ ಇಟ್ಟರೆ, ಲೈಬ್ರೇರಿಯನ್‌ಗಳು ಪುನಃ ಆದರ ಸ್ಥಳದಲ್ಲಿ ಇಡುತ್ತಿದ್ದರು. ಮೆ|| ಗ್ಲಾಡಸ್ಟನ್‌ರವರ ಪುಸ್ತಕಭಂಡಾರವೂ ಕೂಡ, ಇದೇ ರೀತಿಯಲ್ಲಿ ಲಕ್ಷಾಂತರ ಪುಸ್ತಕಗಳುಳ್ಳದಾಗಿದ್ದಿತು. ಅವರ ಲೈಬ್ರೇರಿಯನ್‌ಗಳ ಕೆಲಸವು, ಇವರು ಓದಿ ಮೇಜಿನಮೇಲೆ ಹಾಕಿದ ಪುಸ್ತಕಗಳನ್ನು ಪುನಃ ಅದೇ ಸ್ಥಳದಲ್ಲಿಡುವುದು ಮಾತ್ರವಾಗಿದ್ದಿತು. ಈ ಯಿಬ್ಬರು ದೊಡ್ಡ ಮನುಷ್ಯರನ್ನೂ ಕತ್ತಲೆಯಲ್ಲಿ ಇವರ ಭಂಡಾರದಲ್ಲಿನ ಯಾವ ಪುಸ್ತಕವನ್ನು ತರಹೇಳಿದಾಗ್ಯೂ, ಇಂತಹ ಬೀರುವಿನಲ್ಲಿ ಇಂತಹ ಕಡೆಯಲ್ಲಿಯೇ ಆ ಪುಸ್ತಕವಿರುವುದೆಂದು ಗೊತ್ತುಮಾಡಿಕೊಂಡು ತರುತಿದ್ದರು. ಇವರಲ್ಲಿ ಅನೇಕಕೆಲಸಗಳಿಗೆ ಸಂಬಂಧಪಟ್ಟ ಕಾಗದದ ಫೈಲುಗಳೂ ಇಡಲ್ಪಟ್ಟಿದ್ದುವು. ಆ ಫೈಲುಗಳನ್ನೂ ಕೂಡ, ಕೇಳಿದಾಗ ಹುಡುಕುವುದಕ್ಕೆ ಒಂದು ನಿಮಿಷವನ್ನೂ ಕಳೆಯದೆ ತರುತಿದ್ದರು. ಒಂದಾವೃತ್ತಿ ಅವರೋ

ಕಿಸಿದ ಫೈಲಿನಲ್ಲಿ ನಮೂದಾಗಿರತಕ್ಕ ವಿಷಯಗಳು ಇಷ್ಟನೆಯ ಪುಟದಲ್ಲಿ ಇಂಥ ಕಡೆಯಲ್ಲಿಯೇ ಇರುವುದೆಂದು ಹೇಳುತಿದ್ದರು ಕಾಲನಿರ್ಣಯದ ವಿಷಯದಲ್ಲಿಯೂ ಪುಸ್ತುಕಗಳನ್ನೂ ರಿಕಾರ್ಡುಗಳನ್ನೂ ಬೇಕಾದಾಗ ಹುಡುಕುವ ಕ್ಲೇಶವಿಲ್ಲದೆ ಸಿಕ್ಕುವಂತೆ ಇಡುವ ಕ್ರಮದ ವಿಷಯದಲ್ಲಿಯೂ ಎಚ್ಚರಿಕೆಯುಳ್ಳವರಾಗಿರತಕ್ಕವರು, ಸಾಮಾನ್ಯಜನಗಳು ಮಾಡತಕ್ಕ ಕೆಲಸಗಳಿಗಿಂತಲೂ ಲಕ್ಷಪಾಲು ಹೆಚ್ಚಾಗಿ ಕೆಲಸಮಾಡುವರು. ಈ ಕ್ರಮವು ಎಷ್ಟು ಉಚ್ಚಸ್ಥಿತಿಗೆ ತರಲ್ಪಡಬಹುದೋ ಅದನ್ನು ನೋಡಬೇಕಾದರೆ, ಲಂಡನ್ ಟೈಂಸ್ ಆಫೀಸಿಗೆ ಹೋಗಿ ನೋಡಬೇಕು. ಈ ಆಫೀಸಿನಲ್ಲಿ, ಹಗಲುಹೊತ್ತಿನ ಸಿಬ್ಬಂದಿಯೂ, ಸಾಯಂಕಾಲದಹೊತ್ತಿನ ಸಿಬ್ಬಂದಿಯೂ ಇರುವವು ಈ ಪತ್ರಿಕೆಯು, ಬೆಳಗ್ಗೆ ಸಾಯಂಕಾಲ ಎರಡುಹೊತ್ತೂ ಹೊರಡುವುದು. ಈ ಪ್ರಪಂಚದ ಯಾವ ಭಾಗಗಳಲ್ಲಿ ಯಾವ ಮುಖ್ಯ ವಿಷಯಗಳು ನಡೆಯುವವೋ, ಅವು ತಂತೀವರ್ತಮಾನದದ್ವಾರಾ ಟೈಂಸ್ ಆಫೀಸಿಗೆ ಆ ಕ್ಷಣವೇ ತಿಳಿಸುವವು. ಅಂಥ ವಿಷಯಗಳಿಗೆ ಸಂಬಂಧಪಟ್ಟ ರಿಕಾರ್ಡುಗಳು, ಆ ಆಫೀಸಿನಲ್ಲಿ ಇಡಲ್ಪಟ್ಟಿರುವವು. ಆ ಸಮಾಚಾರ ಬಂದಕೂಡಲೇ, ಒಂದು ನಿಮಿಷವೂ ಸಾವಕಾಶಮಾಡದೆ, ಅದಕ್ಕೆ ಸಂಬಂಧಪಟ್ಟ ತಪ್ಸೀಲುವಾರು ರಿಕಾರ್ಡುಗಳನ್ನು, ಅಲ್ಲಿನ ರಿಕಾರ್ಡುಕೀಪರುಗಳು, ಎಡಿಟರವರ ಮೇಜಾದಮೇಲೆ ತಂದಿಡುವರು. ಆ ಕ್ಷಣದಲ್ಲಿಯೇ ಆ ವಿಷಯದಲ್ಲಿ ಪೂರ್ವಾಪರಸಂಬಂಧಗಳನ್ನು ಸಮಗ್ರವಾಗಿ ಒಳಗೊಂಡಿರುವ ಲೀಡರುಗಳು ಬರೆಯಲ್ಪಡುವವು. ಅಂಥ ಸಮಾಚಾರ ಬಂದ ಹನ್ನೆರಡು ಘಂಟೆಗಳೊಳಗಾಗಿ, ಅದಕ್ಕೆ ಸಂಬಂಧಪಟ್ಟ ಪೂರ್ವೋತ್ತರಗಳೆಲ್ಲವೂ

ವರ್ತಮಾನಪತ್ರಿಕೆಯಲ್ಲಿ ಮುದ್ರಿಸಲ್ಪಟ್ಟಿರುವುವು. ಬ್ರಿಟಿಷ್ ಜನಗಳು ಲೋಕೋತ್ತರವಾದ ಪದವಿಯನ್ನು ಹೊಂದುವುದಕ್ಕೆ, ಹೀಗೆ ಕಾಲ ವಿಭಾಗದ ವಿಷಯದಲ್ಲಿಯೂ, ಪುಸ್ತಕ ರಿಕಾರ್ಡು ಮೊದಲಾದುವು ಗಳನ್ನು ಬೇಕಾದಾಗ ಸಿಕ್ಕುವಂತೆ ಕ್ರಮವಾಗಿ ಇಡತಕ್ಕ ವಿಷಯದಲ್ಲಿಯೂ, ಸಮಸ್ತ ವಿಷಯಗಳನ್ನೂ ಲೇಶವೂ ಸಾವಕಾಶಮಾಡದೆ ಆ ಕ್ಷಣದಲ್ಲಿಯೇ ವ್ಯವಸ್ಥೆಮಾಡುವ ಶಕ್ತಿಯನ್ನು ಸಂಪಾದಿಸಿಕೊಳ್ಳತಕ್ಕ ವಿಷಯದಲ್ಲಿಯೂ, ಇವರು ನಿಸರ್ಗವಾಗಿ ಹೊಂದಿರತಕ್ಕ ಶ್ರದ್ಧೆಯೇ ಮುಖ್ಯಕಾರಣವು.

ಉದ್ಯೋಗವು ಪುರುಷ ಲಕ್ಷಣವೆಂದು ನಮ್ಮ ಹಿರಿಯರು ಹೇಳು ವರು. ಇದು ಆಬಾಲವೃದ್ಧರಿಗೂ ಲಕ್ಷಣವಾದುದು. ಎಲ್ಲಾ ಉದ್ಯೋ ಗಗಳೂ ಪುರುಷಲಕ್ಷಣವೆಂದು ಹೇಳುವುದಕ್ಕಾಗುವುದಿಲ್ಲ. ಸದುದ್ಯೋ ಗಗಳು ಮಾತ್ರ ಪುರುಷಲಕ್ಷಣವೆಂದು ಹೇಳಲ್ಪಡಬೇಕು ದುರುದ್ಯೋಗ ಗಳಿಂದ ಅನೇಕ ಅನರ್ಥಗ ಳಗುವುವು. ಇಹಪರಗಳೆರಡೂ ತಪ್ಪುವುದಕ್ಕೆ ದುರುದ್ಯೋಗಗಳು ಕಾರಣವಾಗುವುವು. ಅರ್ಥದಂಡ (ಜುಲ್ಮಾನೆ) ಮೊದ ಲುಗೊಂಡು ಮರಣದಂಡನೆಯವರೆಗೂ ದಂಡ ವಿಧಿಸಲ್ಪಡುವುದಕ್ಕೆ ಅರ್ಹ ವಾದ ದುರುದ್ಯೋಗಗಳಿರುವುವು ಅಂಥ ದುರುದ್ಯೋಗಗಳನ್ನು ಮಾಡು ವುದಕ್ಕಿಂತ, ಉದ್ಯೋಗವಿಲ್ಲದಿರುವುದೇ ಮೇಲು. ಆದರೆ ಉದ್ಯೋಗವಿ ಲ್ಲದೆಯೇ ಇರುವುದಕ್ಕಾಗುವುದಿಲ್ಲ. ಸರಿಯಾದ ಉದ್ಯೋಗವನ್ನು ಕೊಡದಿದ್ದರೆ, ಮನಸ್ಸು ತಾನೇ ದುರುದ್ಯೋಗಗಳನ್ನು ಸಂಪಾದಿಸಿಕೊ ಳ್ಳುವುದು ಅನುಭವಸಿದ್ಧವಾಗಿಯೇ ಇದೆ; ಮನಸ್ಸಿನಲ್ಲಿ ಮಾಡಲ್ಪಟ್ಟ ಸಂಕ ಲ್ಪದಂತೆ ಕೈಕಾಲುಗಳು ನಡೆಯುವುದೂ ಪ್ರಸಿದ್ಧವಾಗಿರುವುದು. ಸರ್.

ಹಾರೇಸ್ ವೀರ್ ಎಂಬವನ ಸಹೋದರನು ಮೃತಪಟ್ಟನು. ಆತನ ಸ್ನೇಹಿತನಾದ ಮಾರ್ಕ್ವಿಸ್ ಸ್ಪಿನೋಲಾ ಎಂಬವನು, ನಿನ್ನ ಸಹೋದರನು ಯಾವ ರೋಗದಿಂದಪೀಡಿತನಾಗಿದ್ದು ಸತ್ತನೆಂದು ಕೇಳಿದನು. ಅದಕ್ಕೆ ಆ ಹಾರೇಸ್ ವೀರ್ ಎಂಬವನು 'ನನ್ನ ಸಹೋದರನಿಗೆ ಬಹಳ ದೊಡ್ಡ ರೋಗವು ಬಂದಿದ್ದಿತು. ಎಲ್ಲಾ ರೋಗಗಳಿಗೂ ಚಿಕಿತ್ಸೆಯುಂಟು ; ಈ ರೋಗಕ್ಕೆ ಚಿಕಿತ್ಸೆಯೇ ಇಲ್ಲ. ಲೋಕೈಕವೀರರೂಕೂಡ, ಈ ರೋಗದಿಂದ ಪರಾಜಿತರಾಗಿರುವರು, ಎಂದು ಹೇಳಿದನು ಅದು ಎಂತಹ ರೋಗವೆಂದು ಸ್ಪಿನೋಲನು ಕೇಳಲು, ಈ ರೋಗಕ್ಕೆ ಸದುದ್ಯೋಗದ ಅಭಾವವೆಂದು ಹೆಸರಿರುವುದೆಂಬುದಾಗಿ ಹಾರೇಸ್‌ವೀರ್ ಎಂಬವನು ಹೇಳಿದನು ಇದು ವಾಸ್ತವವಾದ ಮಾತು. ಸದುದ್ಯೋಗವು ಪುಣ್ಯವಂತರಿಗೆ ದೊರೆಯುವುದು ಅಂಥ ಉದ್ಯೋಗವು ಯಾರಿಗೆ ದೊರೆಯುವುದಿಲ್ಲವೋ, ಅವರೇ ಪಾಪಿಷ್ಠರು. ಇಂಥ ಸದುದ್ಯೋಗವನ್ನು ಸಂಪಾದಿಸಿಕೊಳ್ಳುವುದು ಕಷ್ಟವಲ್ಲ. ಧನ ಪಿಶಾಚದಿಂದ ಪೀಡಿತರಾದವರಿಗೆ ಸದುದ್ಯೋಗವು ಸಿಕ್ಕುವುದಿಲ್ಲ. 'ಪ್ರತಿಫಲರೂಪವಾದ ದ್ರವ್ಯ ಬಂದರೆ ಬರಲಿ, ಬಾರದಿದ್ದರೆ ಚಿಂತೆಯಿಲ್ಲ ; ಸದುದ್ಯೋಗವೇ ಮುಖ್ಯವಾದ ಗುರಿ.' ಎಂಬ ಅಭಿನಿವೇಶವುಳ್ಳವರಾಗಿ ಯಾರು ಹುಡುಕುವರೋ, ಅವರಿಗೆ ಸಕಲವಾದ ಇಷ್ಟಾರ್ಥಪ್ರಾಪ್ತಿಗೂ ಸಾಧಕವಾಗಿರುವ ಸದುದ್ಯೋಗಗಳು ಸಿಕ್ಕಿಯೇಸಿಕ್ಕುವುವು. ಇದಕ್ಕೆ, ದಿ ಆನರಬಲ್. ಮಿಸ್ಟರ್ ಗೋಖಲೆಯವರೇ ದೃಷ್ಟಾಂತಭೂತರು. ಇವರು ಗವರ್ನರ ಹುದ್ದೆಯನ್ನೂ ಲೆಫ್ಟಿನೆಂಟ್ ಗವರ್ನರ ಹುದ್ದೆಯನ್ನೂ ಅಪೇಕ್ಷಿಸಿದ್ದರೆ, ಇವರಿಗೆ ಆ ಹುದ್ದೆಗಳು ಸಿಕ್ಕುವುದು ಕಷ್ಟವಾಗುತಿದ್ದಿತು.

ಸರ್ವೆಂಟ್ ಆಫ್ ಇಂಡಿಯಾ ಸೊಸೈಟಿಗೆ ಸ್ಥಾಪಕರಾಗಿಯೂ, ಇಂಡಿಯನ್ ನ್ಯಾಷನಲ್ ಕಾಂಗ್ರೆಸ್ಸಿಗೆ ಮೆಂಬರುಗಳಾಗಿಯೂ, ದೇಶಾಭಿಮಾನಿಗಳಲ್ಲಿ ಅಗ್ರಗಣ್ಯರಾಗಿಯೂ, ಲೆಜಿಸ್ಲೆಟಿವ್ ಕೌನ್ಸಿಲ್ ಮೆಂಬರುಗಳಲ್ಲಿ ಅಗ್ರಗಣ್ಯರಾಗಿಯೂ ಈ ಕೆಲಸಗಳ ದ್ವಾರಾ ದುಷ್ಟನಿಗ್ರಹ ಶಿಷ್ಟಪರಿಪಾಲನೆಗಳನ್ನು ಮಾಡಿಸುವುದರಲ್ಲಿ ದಕ್ಷರಾಗಿಯೂ ಆಗಬೇಕೆಂದು, ಇವರು ಸಂಕಲ್ಪಮಾಡಿದರು. ಈ ಕೆಲಸಗಳನ್ನು ಮಾಡುವುದಕ್ಕೆ ಇವರಿಗೆ ಸಮಯ ದೊರೆಯಿತು. ವೈಸರಾಯರಿಗೂ ದುರ್ಲಭವಾದ ಕೀರ್ತಿಯೂ ಇವರಿಗೆ ಲಭ್ಯವಾಯಿತು. ನಿಸ್ಪೃಹಚಕ್ರವರ್ತಿಗಳೆಂಬ ಬಿರುದು, ಇವರಿಗೆ ಅಪ್ರಾರ್ಥಿತವಾಗಿ ದೊರೆಯಿತು. ಪ್ರತಿಷ್ಠಾಚಕ್ರವರ್ತಿಗಳೇ ಮೊದಲಾದ ಮಹಾಜನಗಳ ಪ್ರೀತಿಗೌರವಗಳಿಗೂ, ಆಸೇತುಹಿಮಾಚಲವಾಗಿ ಇರತಕ್ಕ ಎಲ್ಲಾ ಭಾರತೀಯರ ಕೃತಜ್ಞತೆಗೂ ಇವರು ಪಾತ್ರರಾದರು. ದ್ರವ್ಯರೂಪವಾದ ಧನವು ಇವರಿಗಿಲ್ಲದಿದ್ದಾಗ್ಯೂ, ದೇಶಾಭಿಮಾನರೂಪವಾಗಿಯೂ ಪರೋಪಕಾರರೂಪವಾಗಿಯೂ ಇವರಿಗೆ ಲಭ್ಯವಾಗಿರತಕ್ಕ ಧನರಾಶಿಯು, ಮಹಾಮೇರುವಿಗಿಂತಲೂ ಹೆಚ್ಚಾಗಿ ಪರಿಣಮಿಸಿರುವುದು ಇದೆಲ್ಲವೂ ಇವರಿಗೆ ಸದುದ್ಯೋಗದಿಂದ ಲಭ್ಯವಾಯಿತೇ ಹೊರತು, ಇನ್ನಾವುದರಿಂದಲೂ ಲಭ್ಯವಾಗಲಿಲ್ಲ. ಇಂಥ ಸದುದ್ಯೋಗಗಳು, ಅಪೇಕ್ಷಿಸಿದವರಿಗೆಲ್ಲ ದೊರೆಯುವುವು. ಆದರೆ, ಪುಣ್ಯಪರಿಪಾಕದಿಂದ ಇಂಥ ಸದುದ್ಯೋಗಗಳಲ್ಲಿ ಅಭಿಲಾಷೆ ಹುಟ್ಟಬೇಕು. ಕ್ಷಣಭಂಗುರವಾದ ಐಹಿಕ ಸಂಪತ್ತುಗಳಲ್ಲಿ ಆಸಕ್ತರಾದವರಿಗೆ, ಇಂಥ ಅಭಿಲಾಷೆಗಳು ಹುಟ್ಟುವುದೆ ಪೂರ್ವ. ಒಂದುವೇಳೆ ಹುಟ್ಟಿದಾಗ್ಯೂ, ಅವರು ಅವುಗಳಲ್ಲಿ ಸ್ಥಿರಸಂಕಲ್ಪರಾಗಿರುವುದು ಅಸಂಭವ.

ಸಕಲವಿದ್ಯಾವಿಶಾರದರಾಗಬೇಕೆಂಬ ಅಭಿಲಾಷೆಯು, ಸಾಮಾನ್ಯವಾಗಿ ಸರ್ವರಿಗೂ ಇರುವುದು. ಈ ಅಭೀಷ್ಟಾರ್ಥವನ್ನು ಪಡೆಯತಕ್ಕ ಮಾರ್ಗಮಾತ್ರ ಬಹುಜನಗಳಿಗೆ ತಿಳಿಯದು. ಯಾವ ಕೆಲಸವನ್ನು ಚೆನ್ನಾಗಿ ಮಾಡುವುದಕ್ಕೆ ಕಲಿಯಬೇಕೋ, ಅದರಲ್ಲಿ ಮನಸ್ಸನಿಲ್ಲಿಸುವುದನ್ನು ಮೊದಲು ಕಲಿಯಬೇಕು. ವಿಷಯಾಂತರಗಳಿಗೆ ಮನಸ್ಸನ್ನು ಬಿಟ್ಟರೆ, ಯಾವ ವಿದ್ಯೆಯಲ್ಲಿಯೂ ಪೂರ್ಣಪಾಂಡಿತ್ಯವುಂಟಾಗುವುದಿಲ್ಲ. ಡಿಮಾಸ್ತನೀಸ್ ಎಂಬವನು ವಾಗ್ಮಿಗಳಲ್ಲಿ ಅಗ್ರಗಣ್ಯನು. ಇವನಿಗೆ ಈ ಪಾಂಡಿತ್ಯ ಬರುವುದಕ್ಕೆ ಕಾರಣವೇನಾಗಿರಬಹುದೆಂದು ಬಹುಜನಗಳು ವಿಚಾರಮಾಡುವರು. ಥೂಸಿಡೈಡೀಸ್ ಎಂಬವನಿಂದ ಬರೆಯಲ್ಪಟ್ಟ ಚರಿತ್ರೆಯನ್ನು ಇವನು ಸ್ವಹಸ್ತದಿಂದ ಎಂಟಾವೃತ್ತಿ ಬರೆದನು ; ಅದು ವಾಚೋವಿಧೇಯವಾಗುವವರೆಗೂ ಅರ್ಥವತ್ತಾಗಿ ಗಟ್ಟಿಮಾಡಿದನು ಇದರ ಜತೆಗೆ, ಅವನ ಕಾಲದಲ್ಲಿ ಅತ್ಯಂತ ಪ್ರಸಿದ್ಧವಾಗಿದ್ದ ಗ್ರಂಥಗಳಲ್ಲಿ ಅತ್ಯಂತ ರಸವತ್ತಾದ ಭಾಗಗಳನ್ನೆಲ್ಲ ಗಟ್ಟಿಮಾಡಿದ್ದನು. ಅವುಗಳನ್ನು ಬೇಕಾದಾಗ ತಪ್ಪದೆ ಒಪ್ಪಿಸುತ್ತಿದ್ದನು. ಇವನು ಏನುಬರೆದಾಗ್ಯೂ, ಯಾವ ಉಪನ್ಯಾಸಮಾಡಿದಾಗ್ಯೂ, ಇವನು ವ್ಯಾಸಂಗಮಾಡಿದ್ದ ಮಹಾಕವಿಗಳ ಮಾತುಗಳೇ, ಪ್ರಯತ್ನವಿಲ್ಲದೆ ಪ್ರಯೋಗಿಸಲ್ಪಡುವಂತೆ ಪರಿಣಮಿಸಿದ್ದುವು; ತದೇಕಧ್ಯಾನದಿಂದ ಮಾಡಲ್ಪಟ್ಟ ವ್ಯಾಸಂಗವು ಈ ರೀತಿಯಲ್ಲಿ ಪರಿಣಮಿಸುವುದು.

ಸಂಸ್ಕೃತಕಾದಂಬರಿಯನ್ನು ಬರೆದಿರತಕ್ಕ ಬಾಣಭಟ್ಟನ ವಾಗ್ವಿಜೃಂಭಣೆಯನ್ನು ನೋಡಿದರೆ, ಸಂಸ್ಕೃತಭಾಷಾಜ್ಞಾನಿಗಳಿಗೆ ಅತ್ಯಂತ ಆಶ್ಚರ್ಯವಾಗದೆ ಹೋಗಲಾರದು. ಸಂಸ್ಕೃತಭಾಷೆಯನ್ನು ಹೀಗೆ ಬರೆಯಲು

ವುದು ಇವನಿಗೆ ಹೇಗೆ ಸಾಧ್ಯವಾಯಿತೆಂದು ಪರಿಶೀಲಿಸಿದರೆ, ಮಹಾಕವಿಗಳು ತಮ್ಮ ವ್ಯವಸಾಯಬಲದಿಂದ ಮಹಾಕವಿಗಳಾಗುವರೇ ಹೊರತು ಅದೃಷ್ಟಪರಿಪಾಕದಿಂದ ಆಗುವುದಿಲ್ಲವೆಂಬುದು ಚೆನ್ನಾಗಿ ಗೊತ್ತಾಗುತ್ತದೆ ಬಾಣಭಟ್ಟನು, ಸಂಸ್ಕೃತಭಾಷೆಯಲ್ಲಿದ್ದ ಸಕಲ ಕಾವ್ಯ ನಾಟಕ ಆಖ್ಯಾನ ಅಲಂಕಾರ ಮೊದಲಾದುವುಗಳನ್ನು ಕರತಲಾಮಲಕಗಳಾಗಿರುವಂತೆ ವ್ಯಾಸಂಗಮಾಡಿದ್ದನು. ಈ ವ್ಯಾಸಂಗದ ಮಹಿಮೆಯಿಂದ, ಅವನ ಬಾಯಲ್ಲಿ ಹೊರಡತಕ್ಕ ಮಾತೂ, ಅವನ ಲೇಖನಿಯಿಂದ ಹೊರಡತಕ್ಕ ಕವನಗಳೂ, ಲಾಲಿತ್ಯದ ಪರಮಾವಧಿದಶೆಯನ್ನು ಹೊಂದಿದ್ದುವು, ಇವನ ಕವಿತ್ವದ ಮಹಿಮೆಯನ್ನು ತಿಳಿದುಕೊಳ್ಳಬೇಕಾದರೆ, ಕಾದಂಬರೀಗ್ರಂಥದ ಚರಿತ್ರೆಯನ್ನು ಸ್ವಲ್ಪಮಟ್ಟಿಗೆ ತಿಳಿದುಕೊಳ್ಳುವುದಾವಶ್ಯಕವು. ಇವನ ಗುರುವಾದ ಸುಬಂಧುವು, ವಾಸವದತ್ತೆಯೆಂಬ ಗ್ರಂಥವನ್ನು ಬರೆದು, ಅದನ್ನು ಪ್ರಚಾರಮಾಡುವುದಕ್ಕೋಸ್ಕರ ಇವನಲ್ಲಿ ಕೊಟ್ಟು, ತೀರ್ಥಯಾತ್ರೆಗೆ ಹೊರಟುಹೋದನು. ಅನೇಕ ವರುಷಗಳವರೆಗೂ ಅವನು ಹಿಂದಿರುಗಿ ಬರಲಿಲ್ಲ. ಈ ಮಧ್ಯದಲ್ಲಿ, ಆ ಗ್ರಂಥದ ಮಹಿಮೆಯು ಎಲ್ಲೆಲ್ಲಿಯೂ ಹರಡಿಕೊಂಡು, ಪ್ರಭುವಿಗೆ ತಿಳಿಯಿತು. ಅವನು, ಬಾಣಭಟ್ಟನೇ ಈ ಗ್ರಂಥವನ್ನು ಬರೆದವನೆಂದು ತಿಳಿದುಕೊಂಡು, ಇವನಿಗೆ ಒಂದು ಜಹಗೀರಿಯನ್ನು ಕೊಟ್ಟನು. ಸುಬಂಧುವಾಗಲಿ ಅವನ ಮಕ್ಕಳಾಗಲಿ ಹಿಂದಿರುಗಿ ಬಂದರೆ ಅವರಿಗೆ ಒಪ್ಪಿಸಬೇಕೆಂಬ ಸಂಕಲ್ಪದಿಂದ, ಬಾಣಭಟ್ಟನು ಈ ಜಹಗೀರಿಯನ್ನು ಪರಿಗ್ರಹಮಾಡಿದನು. ಕೆಲವುದಿನಗಳೊಳಗಾಗಿ ಸುಬಂಧುವು ತೀರ್ಥಯಾತ್ರೆಯಿಂದ ಹಿಂದಿರುಗಿ ಬಂದು, ಬಾಣಭಟ್ಟನು

ತಾನೇ ಈ ಗ್ರಂಥಕರ್ತನೆಂಬುದಾಗಿ ಹೇಳಿಕೊಂಡು ಜಹಗೀರಿಯನ್ನು ಪಡೆದಿರುವನೆಂದು ತಿಳಿದುಕೊಂಡು, ಅವನಲ್ಲಿ ಸಂಭಾಷಣೆಯನ್ನು ಕೂಡ ಮಾಡದೆ, ಪ್ರಭುವಿನಬಳಿಗೆ ಹೋಗಿ, ಸಭೆಯಲ್ಲಿ ಪ್ರಭುವನ್ನು ಕುರಿತು 'ಪ್ರಪಂಚದಲ್ಲಿ ಶಬ್ದಗಳನ್ನೂ ಅಭಿಪ್ರಾಯಗಳನ್ನೂ ಕೆಲವು ಶ್ಲೋಕಗಳನ್ನೂ ಕದಿಯತಕ್ಕವರನ್ನು ನಾನು ಬಲ್ಲೆನು; ಈ ಬಾಣನಂತೆ ಗ್ರಂಥವನ್ನೇ ಸಮಗ್ರವಾಗಿ ಕದ್ದು ಅದರ ಪ್ರತಿಫಲ ಹೊಂದಿದವರನ್ನು ನಾನು ಇದುವರೆಗೂ ನೋಡಲಿಲ್ಲ.' ಎಂದು ಹೇಳಿದನು. ಕೂಡಲೆ ಬಾಣಭಟ್ಟನು ಎದ್ದುಬಂದು, ಸುಬಂಧುವಿಗೆ ಸಾಷ್ಟಾಂಗನಮಸ್ಕಾರಮಾಡಿ " ಸ್ವಾಮಿ! ತಾವು ತಿಳಿದುಕೊಂಡಿರುವುದು ಸರಿಯಲ್ಲ. ವಾಸವದತ್ತೆಯು ನಾನು ಬರೆದ ಗ್ರಂಥವೆಂದು ನಾನು ಯಾರಿಗೂ ಹೇಳಿಲ್ಲ. ಈ ಗ್ರಂಥಕ್ಕೋಸ್ಕರ ಬಂದಿರತಕ್ಕ ಜಹಗೀರಿಯನ್ನು ತಮ್ಮಕಡೆಯವನಾಗಿ ನಾನು ತೆಗೆದು ಇಟ್ಟುಕೊಂಡಿರುವೆನು. ಅದರಲ್ಲಿ ಒಂದು ಕಾಸನ್ನೂ ನಾನು ಉಪಯೋಗಿಸಿಕೊಂಡಿಲ್ಲ. ಈಗ ತಾವು ಅದನ್ನು ಪರಿಗ್ರಹಿಸಬಹುದು. ಆದರೆ, ಶಿಷ್ಯನ ಯೋಗ್ಯತೆಯನ್ನು ತಿಳಿದುಕೊಳ್ಳದೆ, ತಮ್ಮ ಗ್ರಂಥವನ್ನೇ ನಾನು ಚೌರ್ಯಮಾಡಿದೆನೆಂದು ಅಪ್ಪಣೆಕೊಡಿಸಿದಿರಿ. ಇದಕ್ಕಾಗಿ ನಾನು ತುಂಬ ವಿಷಾದಿಸುತ್ತೇನೆ. ಪುತ್ರನಿಂದ ತಂದೆಗೂ, ಶಿಷ್ಯನಿಂದ ಗುರುವಿಗೂ ಪರಾಭವವುಂಟಾದರೆ, ಅದರಿಂದ ತಂದೆಯೂ ಗುರುವೂ ಸಂತೋಷಪಡುವರೇ ಹೊರತು, ದುಃಖಪಡುವುದಿಲ್ಲ. ಇಪ್ಪತ್ತನಾಲ್ಕು ಘಂಟೆಗಳೊಳಗಾಗಿ ವಾಸವದತ್ತೆಗಿಂತಲೂ ಶ್ಲಾಘ್ಯವಾದ ಗ್ರಂಥವನ್ನು ಬರೆದುಕೊಂಡು ಬಂದು ತಮ್ಮ ಶ್ಲಾಘನೆಯನ್ನು ಹೊಂದದಿದ್ದರೆ, ನಾನು ತಮ್ಮ ಶಿಷ್ಯನಾಗುವುದಕ್ಕೆ ಅರ್ಹನೇ

ಅಲ್ಲವೆಂದು ತಾವು ಅಪ್ಪಣೆ ಕೊಡಿಸಬಹುದು.'' ಎಂದು ಹೇಳಿ, ತನ್ನ ಮನೆಗೆ ಹೊರಟುಹೋದನು. ಮಾರನೆಯ ದಿವಸ, ತಾನು ಬರೆದ ಪೂರ್ವ ಕಾದಂಬರಿಯನ್ನು ಸಭೆಗೆ ತಂದು ಓದಿದನು. ಪ್ರಭುವೂ, ಆ ಸಭೆಯಲ್ಲಿ ನೆರೆದಿದ್ದ ಪಂಡಿತೋತ್ತಮರೂ, ಸುಬಂಧುವೂ, ಆ ಗ್ರಂಥವು ಓದಲ್ಪಡುತ ಲಿದ್ದಾಗ, ಮೈಮೇಲೆ ಸ್ಮರಣೆಯಿಲ್ಲದೆ, ಸಂತೋಷಸಾಗರದಲ್ಲಿ ಮುಳುಗಿ ತೇಲುತ, ಆನಂದಪರವಶರಾಗಿ ಕೇಳಿದರು. ಇದು ಓದಿ ಪೂರಯಿಸಲ್ಪಟ್ಟ ಕೂಡಲೆ, ಸುಬಂಧುವು ತಾನು ಮಾಡಿದ ದೋಷಾರೋಪಣೆಗಳನ್ನು ಹಿಂದಕ್ಕೆ ತೆಗೆದುಕೊಂಡು 'ಬಾಣೋಚ್ಛಿಷ್ಟಂ ಜಗತ್ತ್ರಯಂ' ಎಂಬುದಾಗಿ ಹೇಳಿ, 'ಎಲೈ ಬಾಣಭಟ್ಟನೇ! ನನ್ನ ವಾಸವದತ್ತೆಗಿಂತಲೂ ನಿನ್ನ ಕಾದಂಬರಿಯೇ ಸಕಲವಿಷಯಗಳಲ್ಲಿಯೂ ಉತ್ತಮವಾಗಿದೆ. ಹೀಗೆ ರಸ ಗರ್ಭಿತವಾದ ಗ್ರಂಥವನ್ನು ಯಾರೂ ಬರೆದಿರುವುದಿಲ್ಲ. ಇಂತಹ ಮಹಾ ಕವಿಯಾದ ನಿನಗೆ ಗುರುವಾಗಿದ್ದೇನೆಂಬ ಬಹುಮಾನಕ್ಕಿಂತಲೂ ಮೇಲೆ ಯಾದ ಬಹುಮಾನವು ಯಾರಿಗೂ ಅಪೇಕ್ಷಣೀಯವಾಗಲಾರದು. ವಾಸವದತ್ತೆಗೋಸ್ಕರ ನನ್ನಪಕ್ಷವಾಗಿ ನೀನು ಪರಿಗ್ರಹಿಸಿದ ಜಹಗೀರಿಯು ನನಗೆ ಬಂದಿತು. ನಿನ್ನ ಅದ್ಭುತವಾದ ಶಕ್ತಿಗೋಸ್ಕರ ಅದನ್ನು ನಿನಗೆ ಮನಃಪೂರ್ವಕವಾಗಿ ಕೊಟ್ಟಿರುತ್ತೇನೆ. ಅದನ್ನು ಪರಿಗ್ರಹಿಸಿ, ನಾನು ಆಡಿದ ನಿಷ್ಠುರೋಕ್ತಿಗಳನ್ನು ಕ್ಷಮಿಸು.' ಎಂದು ಹೇಳಿದನು. ಪ್ರಭುವೂ ಪಂಡಿತರೂ ಕೂಡ, ಬಾಣಭಟ್ಟನಿಗೆ ಆತನ ಗುರುವಿನಿಂದ ಕೊಡಲ್ಪಟ್ಟ 'ಬಾಣೋಚ್ಛಿಷ್ಟಂ ಜಗತ್ತ್ರಯಂ' ಎಂಬ ಬಿರುದನ್ನು ಅನುಮೋದಿಸಿದು ದಲ್ಲದೆ, ಇನ್ನೂ ಅಸಾಧಾರಣವಾದ ಬಹುಮಾನಗಳನ್ನೂ ಮಾಡಿದರು.

ಬಾಣಭಟ್ಟನಿಗೆ ಇಂತಹ ಪಾಂಡಿತ್ಯ ಬರುವುದಕ್ಕೆ, ಆವನು ಏಕಾಗ್ರಚಿತ್ತ ದಿಂದ ಅನೇಕ ಸರ್ವೋತ್ತಮಗ್ರಂಥಗಳನ್ನು ಕೇಳಿ ಚಿಂತಿಸಿ ಗಟ್ಟಿಮಾಡಿ ಸ್ವಾಧೀನಪಡಿಸಿಕೊಂಡುದುದೇ ಮುಖ್ಯಕಾರಣವು; ಇದರಿಂದಲೇ, ಸರಸ್ವತಿಯು ಇವನಿಗೆ ಪ್ರಸನ್ನಳಾದಳು. ಇವನ ಪ್ರಯತ್ನವಿಲ್ಲದೆ ಸರಸ್ವತಿಯು ಇವನಿಗೆ ಸ್ವಾಧೀನಳಾಗಲಿಲ್ಲ. ಈ ರೀತಿಯಲ್ಲಿ, ವಿದ್ಯಾರ್ಜನೆಗೋಸ್ಕರ ತಪಸ್ಸು ಮಾಡತಕ್ಕವರಿಗೆ, ಸರಸ್ವತಿಯೂ ಲಕ್ಷ್ಮಿಯೂ ಇಬ್ಬರೂ ಮನಃಪೂರ್ವಕವಾಗಿ ದಾಸಿಯರಾಗಿರುವರು.

ಮಹಮ್ಮದೀಯರಲ್ಲಿ ಕೆಲವು ಗಾದೆಗಳಿರುವುವು. ಅವುಗಳಲ್ಲೊಂದು ಹೇಳುವುದೇನೆಂದರೆ:—ಉದ್ಯೋಗಿಯನ್ನು ಒಂದು ಪಿಶಾಚವು ಹಿಡಿದಿರುವುದು; ಅನುದ್ಯೋಗಿಯನ್ನು ಸಾವಿರಾರು ಪಿಶಾಚಗಳು ಹಿಡಿದಿರುವುವು. ಇದರ ಅರ್ಥವನ್ನು ಸರಿಯಾಗಿ ತಿಳಿದುಕೊಳ್ಳಬೇಕು. ಉದ್ಯೋಗಿಯನ್ನು ಉತ್ಸಾಹರೂಪವಾದ ಪಿಶಾಚವು ಹಿಡಿಯುವುದು. ಈ ಉತ್ಸಾಹದಿಂದ ಪ್ರೇರಿತನಾಗಿ, ಇವನು ಹಗಲೂ ರಾತ್ರಿಯೂ ಅವಿಚ್ಛಿನ್ನವಾಗಿ ಹಿಡಿದ ಕೆಲಸದ ಫಲಪ್ರಾಪ್ತಿಯಾಗುವವರೆಗೂ ಕೆಲಸಮಾಡುವನು. ಕೆಲಸ ಮಾಡುವಾಗ್ಗೆ ಉತ್ಸಾಹಪರವಶನಾಗಿರುವನು. ಕೆಲಸವು ಪೂರಯಿಸಿದ ಮೇಲೆ, ಅದರ ಫಲಗಳಿಂದ ತೃಪ್ತಿಹೊಂದಿ ಸಂತೋಷಪಡುವನು. ಉದ್ಯೋಗಮಾಡುವಾಗಲೂ, ಉದ್ಯೋಗ ಪೂರಯಿಸಿದಮೇಲೂ, ಇವನಿಗೆ ಸಂತೋಷವೂ ಪ್ರಯೋಜನವೂ ಲಭ್ಯವಾಗುವುವು. ಸೋಮಾರಿಯಾದ ಮನುಷ್ಯನಿಗೆ ಉತ್ಸಾಹ ಉದ್ಯೋಗದ ಫಲ ಇವೆರಡೂ ದೊರೆಯುವುದಿಲ್ಲ. ನಿಮಿಷಕ್ಕೊಂದು ಸಂಕಲ್ಪವನ್ನು ಮಾಡಿ, ಅದು ಸರಿಯಲ್ಲವೆಂದು ಬಡ

ಲಾಯಿಸುತ, ಗೋಸುಂಬೆಯು ಹೇಗೆ ವರ್ಣವನ್ನು ಬದುಲುಮಾಡು
ತ್ತದೋ—ಹಾಗೆ ಸಂಕಲ್ಪಗಳನ್ನು ಬದಲಾಯಿಸತ್ತ, ಯಾವ ಕೆಲಸವನ್ನೂ
ಸಮರ್ಪಕವಾಗಿ ಮಾಡಲಾರದೆ, ಇವನು ನಿರರ್ಥಕವಾಗಿ ಕಾಲಹರಣ
ಮಾಡುವನು. ಹಾಗೆ ಮಾಡತಕ್ಕವನು, ಭಗ್ನಮನೋರಥನಾಗಿ ಕೆಟ್ಟು
ಹೋಗುವುದೇನೂ ಆಶ್ಚರ್ಯವಲ್ಲ. ಇದೇ ವಿಷಯದಲ್ಲಿ, ಸ್ಪೇನ್ ದೇಶದ
ಜನಗಳಲ್ಲಿ ಒಂದು ಗಾದೆಯುಂಟು. ಮನುಷ್ಯನನ್ನು ದುರ್ಮಾರ್ಗಕ್ಕೆಳೆ
ಯುವುದಕ್ಕೆ ಪಿಶಾಚಗಳು ಕಾದಿರುತ್ತವೆಂಬುದಾಗಿಯೂ, ಸೋಮಾರಿಯು
ಅಂಥ ಪಿಶಾಚಗಳಿಗೆ ಔತಣವನ್ನು ಕೊಡುವನೆಂಬುದಾಗಿಯೂ, ಈ ಜನ
ಗಳು ಹೇಳುವರು. ಮೇಲೆ ಹೇಳಿದ ಮಹಮ್ಮದೀಯರ ಗಾದೆಯಂತೆಯೇ,
ಈ ಗಾದೆಯೂ ಕೂಡ, ಸ್ಥಿರಸಂಕಲ್ಪವೂ ಸ್ಥೈರ್ಯವೂ ಇಲ್ಲದವರು ಹೇಗೆ
ಮಾಡಬಾರದ ಕೆಲಸಗಳನ್ನು ಮಾಡಿ ಕೆಟ್ಟುಹೋಗುವರೋ—ಅದನ್ನು
ತೋರಿಸುವುದು. ಜನಗಳು ಅದೃಷ್ಟಪರಾಧೀನರೆಂದು ಹೇಳುವುದುಂಟಷ್ಟೆ!
ದೃಷ್ಟವೆಂದರೆ ಕಣ್ಣಿಗೆ ಕಾಣತಕ್ಕುದು. ಅದೃಷ್ಟವೆಂದರೆ ಕಣ್ಣಿಗೆ ಕಾಣದಿ
ರತಕ್ಕುದು. ಒಳ್ಳೆಯಸಹವಾಸದಿಂದ ಉದ್ಯೋಗಿಗಳಾಗಿ ಅದರ ಫಲವನ್ನು
ಹೊಂದುವುದಕ್ಕೆ ಜನಗಳು ಸಮರ್ಥರಾಗುವರು. ಕೆಟ್ಟ ಸಹವಾಸದಿಂದ
ಮಾಡಬಾರದ ಕೆಲಸವನ್ನು ಮಾಡಿ ಯಶಸ್ಸನ್ನು ಕಳೆದುಕೊಳ್ಳುವುದಲ್ಲದೆ,
ಮರಣಾಂತವಾದ ಅನರ್ಥಗಳಿಗೂ ಗುರಿಯಾಗುವುದುಂಟು. ಮನುಷ್ಯನ
ಸಹವಾಸವನ್ನು ನೋಡಿದ ಕೂಡಲೆ, ಅವನ ಸ್ವಭಾವವಿಂತಹುದೆಂಬುದಾ
ಗಿಯೂ, ಅವನ ಪರಿಣಾಮವು ಹೀಗಾಗುವುದೆಂಬುದಾಗಿಯೂ, ಧಾರಾಳ
ವಾಗಿ ಹೇಳಬಹುದು. ಇಂದ್ರಿಯಗಳು, ಬದುಕುವುದಕ್ಕೆ ಹೇಗೋ—ಹಾಗೆ

ಕೆಡುವುದಕ್ಕೆ ಕೂಡ ಸಹಕಾರಿಗಳಾಗುವುವು. ಇವುಗಳಿಗೂ, ಮತ್ತು ವಿಷಯುಗಳಿಗೂ ನಾವು ಸಂಬಂಧಪಟ್ಟವರಾಗಿರುತ್ತೇವೆ. ಕೆಟ್ಟ ವಿಷಯುಗಳ ದೆಸೆಯಿಂದ ಇಂದ್ರಿಯವ್ಯಾಪಾರಗಳನ್ನು ಹಿಂದಿರುಗಿಸಿ ಒಳ್ಳೆಯ ವಿಷಗಳಲ್ಲಿ ನಿಲ್ಲಿಸಿದರೆ, ನಾವು ಒಳ್ಳೆಯ ಸ್ಥಿತಿಗೆ ಬರುತ್ತೇವೆ. ಹಾಗಿಲ್ಲದಿದ್ದರೆ, ಕೆಟ್ಟ ವಿಷಯುಗಳು ನಮ್ಮ ಬುದ್ಧಿಯನ್ನಾಕರ್ಷಿಸಿ ನಮ್ಮನ್ನು ಅತ್ಯಂತ ಶೋಚನೀಯವಾದ ಸ್ಥಿತಿಗೆ ತರುತ್ತವೆ. ದುರ್ವಿಷಯಪರಾಧೀನರಾದವರು, ತಾವು ಕೆಡುವುದಲ್ಲದೆ, ತಮ್ಮ ಬಂಧುಮಿತ್ರವರ್ಗವನ್ನೂ ಕೆಡಿಸುತ್ತಾರೆ; ಮತ್ತು, ಅವರು ಹೀನಸ್ಥಿತಿಗೆ ಬರುವಂತೆಯೂ ಮಾಡುತ್ತಾರೆ. ಆದುದರಿಂದ, ಇಹಪರಸೌಖ್ಯದಲ್ಲಿ ಆಸಕ್ತರಾದವರು, ಪ್ರತಿಯೊಂದು ರಾತ್ರಿಯಲ್ಲಿಯೂ ಮಲಗುವುದಕ್ಕೆ ಮುಂಚೆ "ಈ ದಿವಸ ನಾನು ಮಾಡಿದ ಯೋಚನೆಗಳೂ, ಆಡಿದ ಮಾತುಗಳೂ, ಮಾಡಿದ ಕೆಲಸಗಳೂ ಸಮೀಚೀನವಾದುವುಗಳೇ? ಅಥವಾ ಅಲ್ಲವೆ! ಇವುಗಳ ಪರಿಣಾಮ ಫಲವೇನು?" ಎಂದು ಪರ್ಯಾಲೋಚಿಸಿ, ಮಾರನೆಯ ದಿವಸ ಮಾಡತಕ್ಕ ಯೋಚನೆಯನ್ನೂ ಆಡತಕ್ಕ ಮಾತನ್ನೂ ಅವಲಂಬಿಸತಕ್ಕ ಉದ್ಯೋಗವನ್ನೂ ನಿಷ್ಕರ್ಷೆಮಾಡಿಕೊಂಡು ಮಲಗಬೇಕು. ಮಾರನೆಯ ದಿವಸ ಎದ್ದಕೂಡಲೆ, ರಾತ್ರಿಯ ಸಂಕಲ್ಪವನ್ನು ಸರಿಯಾಗಿ ನೆರವೇರಿಸುವ ಪ್ರಯತ್ನವನ್ನು ಮಾಡಿ, ಪುನಃ ಸಾಯಂಕಾಲ ಮಲಗುವಾಗ್ಗೆ, ಆ ದಿನ ತನ್ನ ಸಂಕಲ್ಪಗಳು ಎಷ್ಟುಮಟ್ಟಿಗೆ ನೆರವೇರಿಸಲ್ಪಟ್ಟುವೆಂದು ಪರೀಕ್ಷಿಸುತ್ತ ಬರಬೇಕು.

ಇಷ್ಟಾರ್ಥಸಿದ್ಧಿಯನ್ನು ಹೊಂದಬೇಕೆಂಬ ಅಪೇಕ್ಷೆಯುಳ್ಳವರು, ಹಿಡಿದ ಕೆಲಸವನ್ನು ಬೇಸರಿಕೆಯಿಲ್ಲದೆ ಫಲೋದಯವಾಗುವವರೆಗೂ ಅವಿ

ಚ್ಛಿನ್ನವಾಗಿ ಮಾಡುವ ಶಕ್ತಿಯನ್ನು ಸಂಪಾದಿಸಿಕೊಳ್ಳಬೇಕು. ಪ್ರಪಂಚ ದಲ್ಲಿ ಅನೇಕರು ಬಹಳ ಚಂಚಲವಾದ ಬುದ್ಧಿಯುಳ್ಳವರಾಗಿರುವರು. ಇವರು, ಯಾವುದಾದರೊಂದು ಕೆಲಸವನ್ನು ಯಾರಾದರೂ ಮಾಡಿ ಅದರ ಫಲವನ್ನು ಹೊಂದಿದರೆಂದು ಪ್ರತ್ಯಕ್ಷವಾಗಿಯೋ ಪರೋಕ್ಷವಾಗಿಯೋ ತಿಳಿದಕೂಡಲೆ, ತಾವೂ ಆ ಕೆಲಸವನ್ನು ಉಪಕ್ರಮಿಸುವರು. ಕೆಲವು ದಿವಸ ಕೆಲಸವನ್ನೂ ಮಾಡಿ ಬೇಸರಪಟ್ಟು, ಆಮೇಲೆ ಆ ಕೆಲಸಕ್ಕೆ ತಾವು ಅನರ್ಹರೆಂದು ತಿಳಿದುಕೊಂಡು, ವಿಘ್ನಗಳಿಗೆ ಭಯಪಟ್ಟು ಕೆಲಸವನ್ನು ಬಿಟ್ಟು, ಅದುವರೆಗೂ ತಾವು ಮಾಡಿದ ವ್ಯವಸಾಯವೆಲ್ಲ ವ್ಯರ್ಥವಾಗು ವಂತೆ ಮಾಡಿಕೊಳ್ಳುವರು. ಅನೇಕಪಂಡಿತರು, ಅನೇಕಶಾಸ್ತ್ರಗಳ ವಿಷಯ ದಲ್ಲಿಯೂ, ಉದ್ಯೋಗಗಳ ವಿಷಯದಲ್ಲಿಯೂ, ಲೋಕವ್ಯವಹಾರದ ವಿಷಯದಲ್ಲಿಯೂ, ಇಹಪರಸಾಧನಗಳಿಗೆ ಅತ್ಯಂತ ಅನುಕೂಲವಾದ ಧರ್ಮದ ವಿಚಾರದಲ್ಲಿಯೂ, ಅನೇಕಗ್ರಂಥಗಳನ್ನು ಬರೆದಿರುತ್ತಾರೆ ಅವು ಗಳನ್ನು ವ್ಯಾಸಂಗಮಾಡಿ, ಬಹುಜನಗಳು ಅತ್ಯಂತ ವಿಕಾಸವಾದ ಬುದ್ಧಿ ಯುಳ್ಳವರಾಗಿ ಪರಿಣಮಿಸಿರುತ್ತಾರೆ. ಆ ಗ್ರಂಥಗಳ ಪ್ರಯೋಜನವನ್ನು ಹೊಂದುವುದಕ್ಕೆ, ಆ ಗ್ರಂಥಗಳನ್ನು ವ್ಯಾಸಂಗಮಾಡಿದವರು, ಅವುಗಳನ್ನ ವಲೋಕಿಸುವುದಕ್ಕೂ ಅವುಗಳು ಸ್ವಾಧೀನವಾಗುವವರೆಗೂ ಚಿಂತಿಸುವು ದಕ್ಕೂ ಅನೇಕಾವೃತ್ತಿ ಚಿಂತಿಸಿ ಸ್ವಾಧೀನಪಡಿಸಿಕೊಳ್ಳುವುದಕ್ಕೂ ಎಷ್ಟು ವ್ಯವಸಾಯಮಾಡಿರುವರೋ—ಅಷ್ಟು ವ್ಯವಸಾಯಮಾಡುವುದಕ್ಕೆ ಶಕ್ತಿ ಯಿಲ್ಲದೆ, ಉಪರಿಪ್ಲವವಾಗಿ ವ್ಯಾಸಂಗಮಾಡಿ, ಅದರ ತತ್ವಾರ್ಥವನ್ನು ತಿಳಿದುಕೊಳ್ಳದಿರತಕ್ಕವರು ಅನೇಕರಿರುವರು. ಅಂಥವರಿಗೆ, ಲೋಕೋಕ್ತಿ

ವಾದ ಗ್ರಂಥಗಳ ಲೋಕೋತ್ತರವಾದ ಪ್ರಯೋಜನಗಳು ಎಂದಿಗೂ ದೊರೆಯುವುದಿಲ್ಲ. ಯಾವ ಕೆಲಸವನ್ನು ಲಕ್ಷಣವಾಗಿ ಮಾಡಬೇಕಾದಾಗ್ಯೂ, ಏಕಾಗ್ರಚಿತ್ತದಿಂದ ತಪಸ್ಸುಮಾಡಿದ ಹೊರತು ಆಗುವುದಿಲ್ಲ. ಪ್ರತಿಯೊಂದು ಕೆಲಸವೂ, ಉಪಕ್ರಮದಲ್ಲಿ ಬಹಳ ಬೇಸರಿಕೆಯನ್ನು ಹುಟ್ಟಿಸುವುದು. ಅತ್ಯಂತ ಸ್ಥೈರ್ಯವೂ ಸಾಹಸವೂ ಯಾರಿಗೆ ಇರುವುವೋ, ಅವರು ಮಾತ್ರ ಉದ್ಯೋಗದ ಆರಂಭದಲ್ಲಿ ಉಂಟಾಗತಕ್ಕ ಜುಗುಪ್ಸೆಯನ್ನೂ ಬೇಸರಿಕೆಯನ್ನೂ ಗೆಲ್ಲುವರು. ಇವುಗಳನ್ನು ಗೆದ್ದಕೂಡಲೆ, ಉದ್ಯೋಗದ ಫಲವು ಹಸ್ತಗತವಾಗುವುದು. ಲೋಕೋತ್ತರವಾದ ಉದ್ಯೋಗವನ್ನು ಉಪಕ್ರಮಿಸತಕ್ಕವರು, ಚಂಚಲಚಿತ್ತರಾಗಿರಕೂಡದು ; ತಾವು ಉಪಕ್ರಮಿಸಬೇಕೆಂದು ಯೋಚಿಸಿರುವ ಕೆಲಸಗಳ ಪೂರ್ವಾಪರಗಳನ್ನು ಚೆನ್ನಾಗಿ ಪರ್ಯಾಲೋಚಿಸಬೇಕು. ಫಲಪ್ರಾಪ್ತಿಯಾಗುವವರೆಗೂ, ಎಷ್ಟು ವಿಘ್ನಗಳು ಬಂದಾಗ್ಯೂ, ಸ್ಥೈರ್ಯದಿಂದ ಹಿಡಿದ ಕೆಲಸವನ್ನು ಮಾಡುವುದು ಸಾಧ್ಯವೇ ಅಲ್ಲವೇ ಎಂದು ಪರ್ಯಾಲೋಚಿಸಿ, ನಿಷ್ಕರ್ಷೆಮಾಡಬೇಕು ; ಅನಂತರ, ಅದನ್ನುಪಕ್ರಮಿಸಬೇಕು. ಉಪಕ್ರಮಿಸಿದಮೇಲೆ ವಿಘ್ನಪರಂಪರೆಗಳು ಎಷ್ಟು ಬಂದಾಗ್ಯೂ ಲಕ್ಷ್ಯಮಾಡದೆ, ಫಲಪ್ರಾಪ್ತಿಯಾಗುವವರೆಗೂ ಕೆಲಸಮಾಡಬೇಕು. ಹಾಗೆ ಮಾಡುವುದು ಅಸಾಧ್ಯವಾದರೆ, ಆ ಪ್ರಯತ್ನದಲ್ಲಿ ದೇಹವನ್ನಾದರೂ ಬಿಡಬೇಕು. ಈ ರೀತಿಯಲ್ಲಿ ಸಂಕಲ್ಪಮಾಡಿಕೊಂಡು ಮನಸ್ಸಿನ ಚಾಂಚಲ್ಯಕ್ಕೆ ಅವಕಾಶಕೊಡದೆ ಯಾರು ಕೆಲಸಮಾಡುವರೋ ಅವರು ಜಗದೇಕವೀರರಾಗುವರು. ಅಲೆಗ್ಸಾಂಡರ್ ನೆಪೋಲಿಯನ್ ಮೊದಲಾದವರು, ಈ ರೀತಿಯಾದ ಸ್ಥಿರಸಂಕಲ್ಪವುಳ್ಳ

ವರಾಗಿ ಕೆಲಸಮಾಡಿ, ಅದರ ಪ್ರಭಾವದಿಂದ ಅಸಾಧಾರಣವಾದ ಸಂಪತ್ತನ್ನು ಹೊಂದಿದರು. ಅಂಥ ಸಂಪತ್ತನ್ನು ಅಪೇಕ್ಷಿಸತಕ್ಕವರು, ಇಷ್ಟಾರ್ಥಸಿದ್ಧಿ ಗೋಸ್ಕರ ಅವರಂತೆ ಕೆಲಸಮಾಡುವುದನ್ನು ಕಲಿಯಬೇಕು. ಪ್ರಯತ್ನ ಗಳು ಫಲಕ್ಕೆ ಅನುರೂಪವಾಗಿರಬೇಕು. ಭಗೀರಥಪ್ರಯತ್ನದಿಂದ ಲಭ್ಯ ವಾಗತಕ್ಕುವುಗಳು, ಮಶಕಪ್ರಯತ್ನದಿಂದ ಸಾಧ್ಯವಾಗುವುದಿಲ್ಲ. ಜಿತೇಂ ದ್ರಿಯರಾಗದವರು, ವಸಿಷ್ಠಾದಿಗಳಂತೆ, ವಿಶ್ವಾಮಿತ್ರನಂಥ ರಾಜರ್ಷಿ ಗಳಿಗೂ ಹೊಟ್ಟೆಯುಕಿಚ್ಚನ್ನುಂಟುಮಾಡುವ ಪದವಿಯನ್ನು ಹೊಂದುವುದು ಸಾಧ್ಯವೆ? ಪ್ರತಿಯೊಂದು ಇಷ್ಟಾರ್ಥಪ್ರಾಪ್ತಿಗೂ, ಉದ್ಯೋಗರೂಪ ವಾದ ಬೆಲೆಯೊಂದುಂಟು. ಆ ಬೆಲೆಯನ್ನು ಕೊಟ್ಟಹೊರತು, ಇಷ್ಟಾರ್ಥ ಪ್ರಾಪ್ತಿಯಾಗುವುದಿಲ್ಲ. ಗಣಿತಶಾಸ್ತ್ರವಿಶಾರದನಾದ ಯೂಕ್ಲಿಡ್ ಎಂಬ ವನನ್ನು, ಒಬ್ಬ ಚಕ್ರವರ್ತಿಯು, ಆ ಶಾಸ್ತ್ರವನ್ನು ಸ್ವಾಧೀನಮಾಡಿಕೊಳ್ಳು ವುದಕ್ಕೆ ಸುಲಭವಾದ ಮಾರ್ಗವೊಂದನ್ನು ಸೂಚಿಸಬೇಕೆಂದು ಪ್ರಾರ್ಥಿಸಿ ದನು. ಆಗ ಯೂಕ್ಲಿಡ್ ಎಂಬ ಪಂಡಿತನು, ದೊರೆಯನ್ನು ಕುರಿತು " ಈ ಶಾಸ್ತ್ರವನ್ನು ಸ್ವಾಧೀನಮಾಡಿಕೊಳ್ಳಲಪೇಕ್ಷಿಸತಕ್ಕವರು, ತಾವು ವ್ಯಾಸಂಗಮಾಡತಕ್ಕ ಕಾಲದಲ್ಲಿ ವಿಷಯಾಂತರಗಳಿಗೆ ಮನಸ್ಸು ಚಲಿಸದಂತೆ ಏಕಾಗ್ರವಾಗಿ ನಿಲ್ಲಿಸಬೇಕು. ಇದೇ ಅತ್ಯಂತ ಸುಲಭವಾದ ಉಪಾಯವು. ವಿಷಯಸುಖಗಳಲ್ಲಿ ಮಗ್ನರಾಗಿ, ಪುಷ್ಪದಿಂದ ಪುಷ್ಪಕ್ಕೆ ಮಕರಂದಾ ರ್ಥವಾಗಿ ಚಲಿಸುವ ಜೇನುಹುಳಗಳಂತೆ ಸಂಚರಿಸತಕ್ಕವರಿಗೆ, ಗಣಿತಶಾಸ್ತ್ರ ರಸವು ಲಭಿಸುವುದು ಕಷ್ಟ. ಅಮೂಲ್ಯವಾದ ರತ್ನವನ್ನು ತೆಗೆಯತಕ್ಕ ವರು ಹೇಗೆ ಬಹಳ ಆಳವಾದ ಗಣಿಗಳಿಗೆ ಇಳಿದು ಭೂಗರ್ಭಶೋಧನೆ

ಯನ್ನು ಮಾಡುತ್ತಾರೋ, ಹಾಗೆ ಗಣಿತಶಾಸ್ತ್ರರಸವನ್ನು ಅಪೇಕ್ಷಿಸತಕ್ಕ ವರೂ ಕೂಡ ನಿಶ್ಚಲವಾಗಿ ಶೋಧನೆಯನ್ನು ಮಾಡಬೇಕು.' ಎಂದು ಹೇಳಿದನು. ವಿದ್ಯಾರ್ಥಿಗಳು ಈ ವಿಷಯವನ್ನು ಸದಾ ಸ್ಮರಣೆಯಲ್ಲಿಟ್ಟು ಕೊಂಡಿರಬೇಕು. ಗಣಿತಶಾಸ್ತ್ರವು ಇತರ ಶಾಸ್ತ್ರಗಳಂತೆ ದಿವ್ಯದೃಷ್ಟಿಗೆ ಸಮಾನವಾದುದು. ಪಾಮರರಿಗೆ ತಿಳಿಯದಿರತಕ್ಕ ಅನೇಕವಿಷಯಗಳು ಪಂಡಿತರಿಗೆ ಗೊತ್ತಾಗುವುವು. ಸಕಲ ಶಾಸ್ತ್ರಜ್ಞರಾದ ಪಂಡಿತರು, ತಮ್ಮ ಪಾಂಡಿತ್ಯವನ್ನು ಆಚರಣೆಯಲ್ಲಿಟ್ಟುಕೊಂಡು ಆಚಾರ್ಯಪದವಿಗೆ ಅರ್ಹರಾದರೆ, ಅಪ್ರತಿಹತವಾದ ಶಕ್ತಿಯನ್ನು ಸಂಪಾದಿಸುವರು. ಚಕ್ರವರ್ತಿಪದವಿಗಿಂತಲೂ ಆಚಾರ್ಯಪದವಿಯು ಅತ್ಯಂತ ಉತ್ತಮವಾದುದು. ಚಕ್ರವರ್ತಿಗಳು ಜಡಪ್ರಪಂಚಕ್ಕೆ ಅಧಿಪತಿಗಳಾಗಿರುವರು; ಶಾಸ್ತ್ರದೃಷ್ಟಿಯುಳ್ಳ ವಿದ್ವಾಂಸರು ಜ್ಞಾನಪ್ರಪಂಚಕ್ಕೆ ಚಕ್ರವರ್ತಿಗಳಾಗುವರು. ಜಡಪ್ರಪಂಚದ ಚಕ್ರವರ್ತಿ ಪದವಿಗಿಂತಲೂ, ಜ್ಞಾನಪ್ರಪಂಚಕ್ಕೆ ಚಕ್ರವರ್ತಿಯಾಗಿರುವುದು ಉತ್ತಮವೆಂದು ಹೇಳಬೇಕಾದುದೇ ಇಲ್ಲ. ಈ ಚಕ್ರವರ್ತಿಪದವಿಯನ್ನು ಹೊಂದುವುದು ಸರ್ವರಿಗೂ ಸಾಧ್ಯವು. ಈ ವಿಷಯಕ್ಕೆ ಎಲ್ಲರ ಗಮನವೂ ಕೊಡಲ್ಪಡಬೇಕು.

ಪ್ರತಿಯೊಬ್ಬನಿಗೂ, ಅವನ ಇಷ್ಟಾರ್ಥಪ್ರಾಪ್ತಿಗೆ ಸಾಧಕವಾದ ಕೆಲಸಗಳು ಗೊತ್ತಿಲ್ಲದಿಷ್ಟಿರುವುವು. ಪ್ರತಿಯೊಬ್ಬನೂ, ಅವುಗಳಲ್ಲಿ ತನಗೆ ಯಾವುಗರಲ್ಲಿ ಸುಲಭವಾಗಿ ಪ್ರವೇಶ ದೊರೆಯುವುದೋ ಅದನ್ನು ಗೊತ್ತು ಮಾಡಿಕೊಂಡು ಕೃಷಿಮಾಡುವುದಕ್ಕುಪಕ್ರಮಿಸಿದರೆ, ಬಹಳ ಸುಲಭವಾಗಿ ಅವನು ತನ್ನ ಇಷ್ಟಾರ್ಥವನ್ನು ಪಡೆಯಬಹುದು. ಆದರೆ, ಜನಗಳು

ಪ್ರಾಯಕವಾಗಿ ಅಲಸರು. ಆಲಸ್ಯದಿಂದ ಅಮೃತವೂ ವಿಷವಾಗುವುದೆಂಬ ವಿಷಯವು ಇವರಿಗೆ ತಿಳಿದಿದ್ದಾಗ್ಯೂ, ಅದನ್ನು ಆಚರಣೆಯಲ್ಲಿಟ್ಟು ಕೊಳ್ಳುವ ಶಕ್ತಿಯಿವರಿಗಿರುವುದಿಲ್ಲ. ವಿಹಾರಗಳಿಗೆ ಮನಸ್ಸು ಕೊಟ್ಟು, ಮಾಡಬೇಕಾದ ಕೆಲಸಗಳನ್ನು ನಾಳೆಮಾಡೋಣವೆಂದು ಹೇಳಿಕೊಳ್ಳುತ ಕಾಲಹರಣಮಾಡುತ್ತಾರೆ. ಒಂದಾವೃತ್ತಿ ನಾಳೆ ಮಾಡೋಣವೆಂದು ಆಲಸ್ಯ ಮಾಡಿದರೆ, ಅನೇಕರಿಗೆ ಅನುಕೂಲವಾದ ನಾಳೆ ಬರುವುದೇ ಅಪೂರ್ವ ವಾಗುತ್ತದೆ; ಪ್ರಾಯಕವಾಗಿ ಬರುವುದೇ ಇಲ್ಲ. ಅವರು ಭಗ್ನಮನೋ ರಥರಾಗುವುದೇ ನಿಜ. ಕ್ಲೇಶವನ್ನುಂಟುಮಾಡತಕ್ಕ ಕರ್ತವ್ಯವನ್ನು ಪ್ರಥ ಮತಃ ಮಾಡಿ, ಆ ಕೆಲಸ ಪೂರಯಿಸಿದಮೇಲೆ ವಿಹಾರಗಳಲ್ಲಿ ಆಸಕ್ತರಾ ಗುವುದುತ್ತಮವು. ಹಾಗೆ ಕೆಲಸಮಾಡತಕ್ಕವರೇ ಕೃತಕೃತ್ಯರಾಗುವರು. ಹಾಗೆ ಮಾಡದವರಿಗೆ ಇಷ್ಟಸಿದ್ಧಿಯೇ ಆಗುವುದಿಲ್ಲ. ಪ್ರತಿಯೊಬ್ಬರೂ, ತಮ್ಮ ಕಾಲವನ್ನು ವಿನಿಯೋಗಿಸುವುದಕ್ಕೆ ಪಟ್ಟಿಯನ್ನು ಹಾಕಿಕೊಳ್ಳ ಬೇಕು. ಆ ಪಟ್ಟಿಯ ಪ್ರಕಾರ, ಯಾವ ಕಾಲದಲ್ಲಿ ಯಾವ ಕೆಲಸ ಮಾಡ ಲ್ಪಡಬೇಕೆಂದು ಗೊತ್ತುಮಾಡಲ್ಪಟ್ಟಿರುವುದೋ, ಆ ಕಾಲದಲ್ಲಿ ಆ ಕೆಲಸ ವನ್ನು ತಪ್ಪದೆ ಮಾಡಬೇಕು; ಎಷ್ಟು ವಿಘ್ನಗಳು ಬಂದಾಗ್ಯೂ ಬಿಡ ಬಾರದು. ವಿಹಾರಕ್ಕೋಸ್ಕರ ನಿಯತವಾದ ಕಾಲದಲ್ಲಿ ವಿಹಾರವಿಚಾರ ವನ್ನು ಮಾಡಬೇಕೇ ಹೊರತು, ಕೆಲಸದ ವೇಳೆಯಲ್ಲಿ ಆ ವಿಷಯವನ್ನು ಪರ್ಯಾಲೋಚಿಸಲೂಬಾರದು. ಈ ವಿಷಯದಲ್ಲಿ ಸ್ಥಿರಸಂಕಲ್ಪರಾದವರು, ಯಾವ ಕೆಲಸವನ್ನು ಹಿಡಿದಾಗ್ಯೂ ಅದರಲ್ಲಿ ಅಗ್ರಗಣ್ಯರಾಗುತ್ತಾರೆ. ಅವರ ಸಂಕಲ್ಪವೂ ಸಾಹಸವೂ ಆಶ್ಚರ್ಯವನ್ನುಂಟುಮಾಡುವುವು.

12 ನೆಯ ಛಾರಲ್ಸ್ ಎಂಬ ಚಕ್ರವರ್ತಿಯು, ದುಷ್ಟನಿಗ್ರಹ ಶಿಷ್ಟ ಪರಿಪಾಲನಾರ್ಥವಾಗಿ ಸರ್ಕ್ಯುಟು ಮಾಡಬೇಕಾಯಿತು. ತನ್ನ ಪರಿವಾರಕ್ಕೆ ಸೇರಿದ ಕೆಲವು ಜನರನ್ನು ಕರೆದುಕೊಂಡು ಅವನು ಹೊರಟನು. ಹೋದ ಕಡೆಗಳಲ್ಲೆಲ್ಲ ಸರಿಯಾಗಿ ಏರ್ಪಾಡುಗಳನ್ನು ಮಾಡುತ, ಒಂದುದಿನ ಇಪ್ಪತ್ತನಾಲ್ಕು ಘಂಟೆಗಳೂ ಕುದುರೆಯಮೇಲೆಯೇ ಇದ್ದನು. ಅವನ ಜತೆಯಲ್ಲಿ ಬಂದವರೆಲ್ಲರೂ ಆಯಾಸಪಟ್ಟು, ಮುಂದಕ್ಕೆ ಹೊರಡುವುದಕ್ಕೆ ಶಕ್ತಿಯಿಲ್ಲದೆ, ಅಲ್ಲಲ್ಲಿಯೇ ನಿಂತುಬಿಟ್ಟರು. ಹಿಡಿದ ಕೆಲಸ ಪೂರಯಿಸುವ ವರೆಗೂ ನಿಲ್ಲಕೂಡದೆಂಬ ಸಂಕಲ್ಪದಿಂದ ಇವನೊಬ್ಬನೇ ಪ್ರಯಾಣಮಾಡಿದನು. ಮಧ್ಯದಲ್ಲಿ ಕುದುರೆಯು ಸತ್ತುಬಿದ್ದಿತು ; ಇದರಿಂದಲೂ ಭಗ್ನ ಮನೋರಥನಾಗದೆ, ಈ ಪ್ರಭುವು, ಜೀನನ್ನೂ ಕಡಿವಾಣವನ್ನೂ ಕುದುರೆಯಿಂದ ತೆಗೆದು ತನ್ನ ತಲೆಯಮೇಲಿಟ್ಟುಗೊಂಡು ಮುಂದಕ್ಕೆ ಪ್ರಯಾಣ ಮಾಡಿದನು. ಸ್ವಲ್ಪದೂರ ಹೋದಮೇಲೆ, ಅಲ್ಲಿ ಒಂದು ಮುಸಾಫರಖಾನೆ ಸಿಕ್ಕಿತು. ಅಲ್ಲಿ ಕಟ್ಟಲ್ಪಟ್ಟಿದ್ದ ಒಂದು ಕುದುರೆಯನ್ನು ಬಿಚ್ಚಿಕೊಂಡು, ಅದಕ್ಕೆ ಜೀನನ್ನೂ ಲಗಾಮನ್ನೂ ಹಾಕಿ, ಅದರಮೇಲೆ ಕುಳಿತುಕೊಂಡು ಹೊರಟನು. ಕುದುರೆಯ ಯಜಮಾನನು ಇವನನ್ನು ಹರಿಸಿಕೊಂಡು ಬಂದು, ನಾನಾವಿಧವಾಗಿ ನಿಂದಿಸಿ, ಶಿಕ್ಷೆಗೆ ಗುರಿಮಾಡುವುದಾಗಿ ಹೇಳಿದನು. ಈ ಪ್ರಭುವು, ಅವನನ್ನು ಕುರಿತು “ ಅಯ್ಯಾ ! ಕ್ಷಮಿಸಬೇಕು. ನಾನು ಕಾರ್ಯಗೌರವದಿಂದ ಹೊರಟಿದ್ದೇನೆ. ನನ್ನ ಕೆಲಸ ಪೂರಯಿಸಿದ ಕೂಡಲೆ ನಿನ್ನ ಕುದುರೆಯನ್ನು ನಿನಗೆ ಹಿಂದಿರುಗಿ ಕೊಡುವುದಲ್ಲದೆ, ಇಂತಹ ನಾಲ್ಕು ಕುದುರೆಗಳನ್ನು ಕೊಂಡುಕೊಳ್ಳುವುದಕ್ಕೆ ಸಾಕಾದಷ್ಟು

ದ್ರವ್ಯವನ್ನೂ ಕೊಡುವೆನು.'' ಎಂದು ಹೇಳಿದನು. ಅದನ್ನು ಮನಸ್ಸಿಗೆ ತಂದುಕೊಳ್ಳದೆ, ಆ ಕುದುರೆಯ ಯಜಮಾನನು, ಕತ್ತಿಯನ್ನು ಹಿರಿದು ಈ ಪ್ರಭುವನ್ನು ಸಂಹರಿಸುವ ಪ್ರಯತ್ನವನ್ನು ಮಾಡಿದನು. ದೊರೆಯು ಅತ್ಯಂತ ಲಾಘವದಿಂದ ಅವನ ಕತ್ತಿಯನ್ನು ಕಿತ್ತುಕೊಂಡನು. ಅಷ್ಟರಲ್ಲಿ, ದೊರೆಯ ಕುದುರೆಯವನು ಬಂದು, ಈತನೇ ಚಕ್ರವರ್ತಿಯೆಂದು ಆ ಕುದುರೆಯ ಯಜಮಾನನಿಗೆ ಹೇಳಲು, ಅವನು ಕ್ಷಮಾಪಣೆಯನ್ನು ಕೇಳಿ ಕೊಂಡು, ತನ್ನ ಕುದುರೆಯನ್ನು ಕಾಣಿಕೆಯಾಗಿ ಪರಿಗ್ರಹಿಸಬೇಕೆಂದು ಕೇಳಿಕೊಂಡನು. ಆಗ ದೊರೆಯು ತನ್ನ ಕೆಲಸ ಪೂರಯಿಸುವವರೆಗೂ ಆ ಕುದುರೆಯನ್ನುಪಯೋಗಿಸಿಕೊಂಡು, ಅನಂತರ ವಿಶೇಷವಾದ ಬಹುಮಾನ ಗಳೊಡನೆ ಕುದುರೆಯನ್ನು ಮರಳಿ ಕೊಟ್ಟುಬಿಟ್ಟನು. ಹೀಗೆ ಸ್ಥಿರಸಂಕಲ್ಪ ರಾದವರು, ಹಿಡಿದ ಕೆಲಸದಲ್ಲಿ ಮನಸ್ಸನ್ನು ಲೀನಮಾಡಿ, ಕಾರ್ಯಾಂತರ ಗಳಿಗೆ ಬುದ್ಧಿಯನ್ನು ಕೊಡದೆ, ಕೆಲಸ ಪೂರಯಿಸುವವರೆಗೂ ನಿಶ್ಚಲಚಿತ್ತ ರಾಗಿ ಕೆಲಸಮಾಡುವರು. ಇದೇ ನಿಜವಾದ ತಪಸ್ಸು. ಇಂಥ ತಪಸ್ಸಿಗೆ ಸಿದ್ಧಿಯಾಗುವುದೇ ಹೊರತು, ಚಂಚಲಚಿತ್ತರಾಗಿ ಕೆಲಸಮಾಡತಕ್ಕವರ ತಪಸ್ಸು ಎಂದಿಗೂ ಸಿದ್ಧಿಸುವುದಿಲ್ಲ.

ಪ್ರತಿಯೊಂದು ಕೆಲಸವನ್ನು ಮಾಡುವುದಕ್ಕೂ ಕಾಲವನ್ನು ಕ್ಲೃಪ್ತ ಮಾಡಿ–ಆ ಕಾಲದಲ್ಲಿ ಬೇರೆಯಾದ ಕೆಲಸಗಳು ಎಷ್ಟು ಬಂದಾಗ್ಯೂ ಅದನ್ನು ಬಿಟ್ಟು–ಉಪಕ್ರಮಿಸಿದ ಕೆಲಸವನ್ನು ಮಾಡುವುದಕ್ಕೆ, ಬ್ರಿಟಿಷ್ ಜನರು "ಪಂಕ್ಚ್ಯುಯಾಲಿಟಿ'' ಎಂದು ಹೇಳುವರು. ಬ್ರಿಟಿಷ್ ಜನಗಳ ಸಂಪತ್ತಿಗೆ ಇದೇ ಮುಖ್ಯಕಾರಣವು. ಈ ಗುಣದ ಬೆಲೆಯನ್ನು ಗೊತ್ತು

ಮಾಡುವುದಕ್ಕಾಗುವುದಿಲ್ಲ. ಕಾಲದ ಪಟ್ಟಿಯಂತೆ ತಪ್ಪದೆ ಕೆಲಸಮಾಡ ತಕ್ಕವರು, ಈ ಕಟ್ಟಳೆಯನ್ನು ಅತಿಕ್ರಮಿಸಿ ಕೆಲಸಮಾಡತಕ್ಕವರಿಗಿಂತ ಬಹಳ ಹೆಚ್ಚು ಕೆಲಸವನ್ನು ಮಾಡುವರು. ಹೆನ್ರಿ ಬ್ರೂಹಂ ಎಂಬವರು, ವಿಲಾಯತಿಯ ಲಾರ್ಡ್ ಛಾನ್ಸಲರಾಗಿ, ಬ್ರಿಟಿಷ್ ಚಕ್ರಾಧಿಪತ್ಯದ ಭಾರವನ್ನೆಲ್ಲ ವಹಿಸಿದ್ದರು; ಹೌಸ್ ಆಫ್ ಲಾರ್ಡ್ಸ್ ಎಂಬ ಪಾರ್ಲಿಮೆಂಟಿನಲ್ಲಿ ಅಗ್ರಾಸನವನ್ನು ವಹಿಸುತಿದ್ದರು; ಛಾನ್ಸರಿ ಕೋರ್ಟಿನಲ್ಲಿ ಮುಖ್ಯನ್ಯಾಯಾಧಿಪತಿಯ ಕೆಲಸವನ್ನು ಮಾಡುತಿದ್ದರು. ಪ್ರತಿದಿವಸ ದಲ್ಲಿಯೂ ಅನೇಕಜನ ಬ್ಯಾರಿಸ್ಟರ್ ಮೊದಲಾದವರ ವಿಜ್ಞಾಪನೆಗಳನ್ನು ಕೇಳುತ್ತಿದ್ದರು; ಅನೇಕ ರೆವ್ಯೂಗಳನ್ನು ಪ್ರತಿದಿವಸವೂ ಬರೆಯುತಿದ್ದರು. ಕನಿಷ್ಠಪಕ್ಷ ದಿನಕ್ಕೆ ಹತ್ತು ಮೀಟಿಂಗುಗಳಲ್ಲಿ ಅಗ್ರಾಸನವನ್ನು ವಹಿಸಿ ಕೆಲಸಗಳನ್ನು ಜರುಗಿಸುತ್ತಿದ್ದರು; ಇದಲ್ಲದೆ, ರಾಜ್ಯಭಾರಕ್ಕೆ ಸಂಬಂಧ ಪಟ್ಟ ಸಾವಿರಾರು ಕೆಲಸಗಳಿಗೆ ಗಮನವನ್ನು ಕೊಡುತ್ತಿದ್ದರು. ಕಾಲದ ಪಟ್ಟಿಯಲ್ಲಿ ಇವುಗಳನ್ನೆಲ್ಲ ಕಾಣಿಸಿ, ಪ್ರತಿಯೊಂದು ಕೆಲಸದಲ್ಲಿಯೂ ಕ್ಲುಪ್ತವಾದ ಕಾಲಕ್ಕೆ ಸರಿಯಾಗಿ ಗಮನವನ್ನು ಕೊಡುತ, ಕೆಲಸಗಳನ್ನು ವ್ಯವಸ್ಥೆ ಮಾಡುತಿದ್ದರು. ಕಾಲವ್ಯವಸ್ಥೆಯಿಲ್ಲದೆ ಕೆಲಸಮಾಡತಕ್ಕವರು, ಪ್ರತಿಯೊಂದು ಕೆಲಸವನ್ನೂ ಮಾಡಿ ಪೂರಯಿಸುವುದು ಅಸಾಧ್ಯವು. ಬ್ರೂವರೆಂಬ ಒಬ್ಬ ದೊಡ್ಡ ಮನುಷ್ಯರು, ಹೆನ್ರಿಬ್ರೂಹಂ ರವರಂತೆ ಕ್ಲುಪ್ತ ಕಾಲಕ್ಕೆ ಕೆಲಸಮಾಡತಕ್ಕವರಾಗಿದ್ದರು. ಒಂದಾನೊಂದು ದಿವಸ, ಅವರ ದೇವಸ್ಥಾನದಲ್ಲಿದ್ದ ಗಡಿಯಾರದ ಪ್ರಕಾರ ಕ್ಲುಪ್ತವಾದ ಹೊತ್ತಿಗೆ ಅವರು ಬರಲಿಲ್ಲ. ಅವರ ಜನ್ಮದೊಳಗಾಗಿ ಅವರೆಂದಿಗೂ ಒಂದು ನಿಮಿಷವೂ

ಕೂಡ ಕ್ಲೃಪ್ತಕಾಲವನ್ನು ಮೀರಿ ನಡೆಯಲಿಲ್ಲ. ಆ ದಿನ ಇವರೂ ಕೂಡ ಕಾಲತಪ್ಪಿ ಬಂದರೆಂದು ಕೆಲವರು ತಿಳಿದುಕೊಂಡರು. ಕೊಂಚ ಹೊತ್ತಾದ ಮೇಲೆ ಅವರು ಬಂದರು. ಅಲ್ಲಿದ್ದ ಜನಗಳು ಇವರು ಹೊತ್ತುಮಾಡಿ ಕೊಂಡು ಬಂದುದಕ್ಕೆ ಕಾರಣವನ್ನು ಕೇಳಿದರು. ನಾನು ಕ್ಲೃಪ್ತವಾದ ಹೊತ್ತಿಗೆ ಸರಿಯಾಗಿ ಬಂದಿರುನೆನೆಂಬುದಾಗಿಯೂ, ಈ ದೇಹವು ಬಿಡ ಲ್ಪಟ್ಟಾಗ ನನ್ನ ಕಾಲದ ಪಟ್ಟಿಗೆ ವ್ಯತ್ಯಾಸವುಂಟಾಗುವುದೇ ಹೊರತು-ಪ್ರಾಣವೂ ಆರೋಗ್ಯವೂ ಶಕ್ತಿಯೂ ಇರುವಾಗ ಇಂಥ ವ್ಯತ್ಯಾಸಕ್ಕೆ ಅವಕಾಶವೆಂದಿಗೂ ಉಂಟಾಗುವುದಿಲ್ಲವೆಂದೂ, ಇವರು ಅಪ್ಪಣೆಕೊಡಿಸಿ ದರು. ಆಗ ಕಾಲವು ಪರೀಕ್ಷಿಸಲ್ಪಟ್ಟಿತು. ದೇವಸ್ಥಾನದ ಗಡಿಯಾರ ದಲ್ಲೂ ಇತರರ ಗಡಿಯಾರದಲ್ಲೂ ತಪ್ಪಿರುವುದೇ ಹೊರತು, ಅವರು ಒಂದು ನಿಮಿಷವೂ ವ್ಯತ್ಯಾಸವಿಲ್ಲದೆ ಕಾಲಕ್ಕೆ ಸರಿಯಾಗಿ ಬಂದರೆಂದು ಗೊತ್ತಾಯಿತು. ಸೂರ್ಯನ ಗತಿಯಲ್ಲಿ ಹೇಗೆ ವ್ಯತ್ಯಾಸ ಬರುವುದಿಲ್ಲವೋ ಹಾಗೆ ಇವರ ಕಾಲಕ್ರಮದಲ್ಲಿಯೂ ವ್ಯತಾಸವುಂಟಾಗುವುದಿಲ್ಲವೆಂಬು ದಾಗಿಯೂ, ಇವರ ಕ್ಲೃಪ್ತಕಾಲವೇ ನಿಜವಾದ ಕಾಲವೆಂಬುದಾಗಿಯೂ ಗೊತ್ತಾಯಿತು. ಬ್ರಿಟಿಷ್ ಜನಗಳಲ್ಲಿ ಈ ಗುಣಾತಿಶಯವು ವಿಶೇಷವಾಗಿರು ತ್ತದೆ. ಒಂದು ನಿಮಿಷವೂ ಹೆಚ್ಚು ಕಡಮೆಯಾಗದೆ, ನಿಯತವಾದ ಕಾಲ ದಲ್ಲಿ ಕೆಲಸಮಾಡುವುದನ್ನು ಮೊದಲು ಕಲಿತು, ಆಮೇಲೆ ಇವರು ಉದ್ದಿಷ್ಟ ವಾದ ಕೆಲಸವನ್ನು ಉಪಕ್ರಮಿಸುವರು. ನಮ್ಮ ಜನಗಳಲ್ಲಿಯೂ ಅನೇಕರು ಇವರ ಮೇಲುಪಂಕ್ತಿಯನ್ನು ಅನುಸರಿಸುವರು. ಈ ರಾಜಧಾನಿಯಲ್ಲಿ ಒಬ್ಬರು ಜಡ್ಜಿಗಳಿದ್ದರು. ಕ್ಲೃಪ್ತವಾಗಿ ಪ್ರತಿದಿನವೂ ಹತ್ತೂವರೆಘಂಟೆಗೆ

ಕೋರ್ಟಿಗೆ ಬಂದು ಛೇಂಬರ್ಸಿನಲ್ಲಿ ಕೆಲಸಮಾಡುತ್ತಿದ್ದರು. ಹನ್ನೊಂದು ಘಂಟೆ ಹೊಡೆಯುವುದಕ್ಕೆ ಉಪಕ್ರಮವಾದಕೂಡಲೆ ಮೇಲಕ್ಕೆದ್ದು, ತಮ್ಮ ಕೊಟ್ಟಡಿಯ ಬಾಗಿಲನ್ನು ತೆಗೆದು ಕೋರ್ಟಿಗೆ ಹೊರಡುತ್ತಿದ್ದರು. ಹನ್ನೊಂದು ಹೊಡೆದು ಪೂರಯಿಸುವಾಗ್ಗ ಸರಿಯಾಗಿ ಸೀಟಿನಮೇಲೆ ಇರುತ್ತಿದ್ದರು. ಅವರು ಈ ವೂರಿನಲ್ಲಿರುವವರೆಗೂ, ಪ್ರತಿಯೊಂದು ದಿವಸವೂ, ಒಂದು ನಿಮಿಷವೂ ಹೆಚ್ಚುಕಡಿಮೆಯಿಲ್ಲದಂತೆ ಕ್ಲೃಪ್ತಕಾಲಕ್ಕೆ ಸರಿಯಾಗಿ ಕೆಲಸಕ್ಕೆ ಉಪಕ್ರಮಮಾಡಿ, ಆ ದಿವಸದ ಕೆಲಸ ಪೂರಯಿಸುವವರೆಗೂ ಸೀಟಿನಿಂದ ಈಚೆಗೆ ಬರುತ್ತಿರಲಿಲ್ಲ. ಮುಂದಕ್ಕೆ ಬರಬೇಕೆಂಬ ಅಪೇಕ್ಷೆಯುಳ್ಳವರಿಗೆ, ಈ ರೀತಿಯಲ್ಲಿ ಕಾಲನಿಬಂಧನೆಯನ್ನು ಮಾಡಿಕೊಂಡು ಕೆಲಸಮಾಡುವುದು ಅತ್ಯಂತ ಶ್ರೇಯಸ್ಕರವಾದುದು.

ನಮ್ಮ ಹಿರಿಯರು, ಬೆಳಗ್ಗೆ ನಾಲ್ಕು ಘಂಟೆಗೆ ಏಳುವ ಪದ್ಧತಿಯನ್ನಿಟ್ಟುಕೊಂಡಿದ್ದರು. ಈಗ ಅನೇಕ ವಿದ್ಯಾರ್ಥಿಗಳೂ ಹೊತ್ತಿಗೆ ಮುಂಚೆ ಏಳುವ ಅಭ್ಯಾಸವನ್ನು ಇಟ್ಟುಕೊಂಡಿರುತ್ತಾರೆ. ಬೆಳಗ್ಗೆ ವ್ಯಾಸಂಗಮಾಡತಕ್ಕವರಿಗೆ, ಪಾಠಗಳನ್ನು ಕಲಿಯಲು ಇದು ಅತ್ಯುತ್ತಮವಾದ ಕಾಲವು. ಆಗ ಯಾವ ತೊಂದರೆಯೂ ಇರುವುದಿಲ್ಲ. ನಾವು ಮಾಡುವ ವ್ಯಾಸಂಗವು ವಿಶೇಷ ಫಲಕಾರಿಯಾಗಬೇಕಾದರೆ, ನಮಗೆ ಸಂಪೂರ್ಣವಾದ ವಿಶ್ರಾಂತಿಯಿರಬೇಕು. ಸಾಯಂಕಾಲ ಏಳುಘಂಟೆಗೆ ಊಟಮಾಡಿ ಒಂಬತ್ತು ಘಂಟೆಯೊಳಗಾಗಿ ಮಲಗಿಕೊಂಡರೆ, ನಾಲ್ಕುಘಂಟೆಯವರೆಗೆ ಸಂಪೂರ್ಣವಾದ ವಿಶ್ರಾಂತಿಯೂ ಆಗಿರುವುದು ; ಓದಿದುದನ್ನು ಮರೆಯದಂತೆ ಇಟ್ಟುಕೊಳ್ಳುವ ಶಕ್ತಿಯೂ ಬರುವುದು. ವಿದ್ಯಾರ್ಥಿಗಳಿಗೆ ಪ್ರಾಯಕವಾಗಿ

ಏಳು ಘಂಟೆಗಳ ನಿದ್ದೆ ಸಾಕು; ಕೆಲವರಿಗೆ ಮಾತ್ರ ಎಂಟುಘಂಟೆ ನಿದ್ದೆ ಬೇಕಾಗುತ್ತದೆ. ಅಂಥವರು ರಾತ್ರಿ ಯೆಂಟು ಘಂಟೆಗೇ ಮಲಗಬೇಕು. ಅದು ಅಸಾಧ್ಯವಾದರೆ, ಬೆಳಗ್ಗೆ ಏಳುಘಂಟೆಗೆ ಏಳುವ ಅಭ್ಯಾಸವನ್ನು ಮಾಡಬೇಕು. ನಿದ್ರೆಗೆ ಕೊಡತಕ್ಕ ಕಾಲವನ್ನು ಕಡಮೆಮಾಡಿದರೆ, ಗ್ರಹಣಶಕ್ತಿ ಕಡಮೆಯಾಗುವುದು. ಚೆನ್ನಾಗಿ ವಿಶ್ರಾಂತಿಯಾಗುವುದಕ್ಕೆ ಮುಂಚೆ ಹತ್ತುಘಂಟೆಗಳಲ್ಲಿ ಗ್ರಹಿಸಲ್ಪಡತಕ್ಕ ವಿಷಯವನ್ನು, ಸಂಪೂರ್ಣವಾದ ವಿಶ್ರಾಂತಿಯನ್ನು ಹೊಂದಿದಮೇಲೆ ಅರ್ಧಘಂಟೆಯಲ್ಲಿ ಸ್ವಾಧೀನಪಡಿಸಿಕೊಳ್ಳಬಹುದು. ಈ ಮರ್ಮವನ್ನು ತಿಳಿದುಕೊಳ್ಳದೆ, ಅನೇಕವಿದ್ಯಾರ್ಥಿಗಳು, ನಿದ್ರೆಗೆ ಬಹಳ ಸ್ವಲ್ಪಕಾಲವನ್ನು ಕೊಟ್ಟು, ಉಳಿದ ಕಾಲವನ್ನೆಲ್ಲ ವ್ಯಾಸಂಗಕ್ಕಿಟ್ಟುಕೊಳ್ಳುವುದುಂಟು. ಇಂಥವರನ್ನು ವ್ಯಾಸಂಗಕ್ರಮದ ರಹಸ್ಯವನ್ನು ತಿಳಿಯದವರೆಂದು ಧಾರಾಳವಾಗಿ ಹೇಳಬಹುದು.

ಪಾಶ್ಚಾತ್ಯಪಂಡಿತರಲ್ಲಿ, ಸಕಲಶಾಸ್ತ್ರವಿಶಾರದನಾದ "ಬರ್ಫ" ಎಂಬ ಫ್ರಾನ್ಸ್ ದೇಶಸ್ಥನೊಬ್ಬನಿದ್ದನು. ಇವನು, ಬಹಳ ದರಿದ್ರಾವಸ್ಥೆಯಲ್ಲಿದ್ದು, ತನ್ನ ವ್ಯಾಸಂಗದ ಮಹಿಮೆಯಿಂದ ಫ್ರಾನ್ಸ್ ಚಕ್ರಾಧಿಪತ್ಯದ ರಾಯಲ್ ಇಂಜನೀಯರಾದನು. ಸಂಪತ್ತು ಬಂದಮೇಲೆ, ಸೋಮಾರಿತನವೂ ನಿದ್ರೆಯಲ್ಲಿ ಆಸಕ್ತಿಯೂ ಹೆಚ್ಚಾದುವು. ಹೊತ್ತಿಗೆಮುಚೆ ಎದ್ದು 'ನ್ಯಾಚುರಲ್ ಹಿಸ್ಟರಿ' ಎಂಬ ಪ್ರಾಣಿಚರಿತ್ರೆಯನ್ನು ಬರೆಯಬೇಕೆಂದು ಉದ್ದೇಶಮಾಡಿದನು. ಎಷ್ಟು ಪ್ರಯತ್ನಮಾಡಿದಾಗ್ಯೂ, ಹೊತ್ತಿಗೆಮುಂಚೆ ಎದ್ದು ಬೆಳಗ್ಗೆ ಎಂಟುಘಂಟೆಯೊಳಗಾಗಿ ಕೆಲಸವನ್ನು ಪೂರಯಿಸಬೇಕೆಂಬ ಇವನ ಸಂಕಲ್ಪವು ನಡೆಯಲಿಲ್ಲ. ಜೋಸಪ್ ಎಂಬ ಒಬ್ಬ ಆಳನ್ನು

ನಿಯಮಿಸಿ " ನನ್ನನ್ನು ಬೆಳಗ್ಗೆ ಮೂರುಘಂಟೆಗೆ ಎಬ್ಬಿಸಿದದಿನ ನಿನಗೆ ಒಂದು ಪೌನು ಕೊಡುತ್ತೇನೆ; ತಪ್ಪಿದರೆ ನೀನು ಎರಡುಪೌನು ಕೊಡ ಬೇಕು." ಎಂದು ನಿಷ್ಕರ್ಷೆಮಾಡಿದನು. ಅದಕ್ಕೆ ಆ ಭೃತ್ಯನು ಒಪ್ಪಿ ಮೂರುಘಂಟೆಗೆ ಸರಿಯಾಗಿ ಎಬ್ಬಿಸಲು, ಆ ಬಫನ್ನನು ಅತ್ಯಂತವಾಗಿ ಕೋಪಮಾಡಿ, ಆ ಜವಾನನನ್ನು ಓಡಿಸಿಬಿಟ್ಟನು. ಬೆಳಗ್ಗೆ ಎದ್ದಮೇಲೆ, ಆ ಭೃತ್ಯನನ್ನು ಕರೆದು " ನಮ್ಮ ನಿಯಮದಂತೆ ನೀನು ನನ್ನನ್ನು ಎಬ್ಬಿಸ ಲಿಲ್ಲ ; ಎರಡು ಪೌನನ್ನು ತಂದುಕೊಡು." ಎಂದು ಹೇಳಿದನು. ಆಗ ಭೃತ್ಯನು " ನಾನು ಎಚ್ಚರಮಾಡಿದಾಗ್ಯೂ ನೀವು ಏಳಲಿಲ್ಲ. ಅದು ನನ್ನ ತಪ್ಪಲ್ಲ." ಎಂದು ಎಷ್ಟುಹೇಳಿದರೂ ಕೇಳದೆ, ಅವನಿಂದ ಎರಡು ಪೌನು ಗಳನ್ನು ದಂಡವಾಗಿ ತೆರಿಸಿದನು. ಆ ಭೃತ್ಯನು, ಮಾರನೆಯದಿನ ಒಂದು ಪಾತ್ರೆಯಲ್ಲಿ ನೀರನ್ನು ಹಾಕಿ ಹೊರಗೆ ಇಟ್ಟಿದ್ದನು. ಮೂರುಘಂಟೆಗೆ ಸರಿಯಾಗಿ ಎದ್ದು ಯಜಮಾನನಿಗೆ ಎಚ್ಚರಮಾಡಲು, ಬಫನ್ನನು ಹಿಂದಣ ರಾತ್ರಿಯಂತೆಯೇ ಹಾರಾಟಮಾಡುವುದಕ್ಕೆ ಉಪಕ್ರಮಿಸಿದನು. ಆಗ ಭೃತ್ಯನು ಆ ತಣ್ಣೀರನ್ನು ತಂದು ಅವನಮೇಲೆ ಸುರಿದುಬಿಟ್ಟನು. ಆಮೇಲೆ ಬಫನ್ನನು ಎದ್ದು ಇವನನ್ನು ನಿಂದಿಸಿ, ಮೈಯೊರೆಸಿಕೊಂಡು, ಬೇರೆ ಬಟ್ಟೆ ಯನ್ನು ಹಾಕಿಕೊಂಡು, ಪ್ರಾಣಿಶಾಸ್ತ್ರವನ್ನು ಬರೆಯುವುದಕ್ಕುಪಕ್ರಮಿಸಿ ದನು. ಕೆಲವು ವರುಷಗಳಲ್ಲಿ ಈ ಶಾಸ್ತ್ರ ಮುಗಿಯಿಸಲ್ಪಟ್ಟಿತು. ಅದರ ಪೀಠಿಕೆಯಲ್ಲಿ, ಈ ಶಾಸ್ತ್ರರಚನೆಗೆ ಮುಖ್ಯಕಾರಣಭೂತನಾದವನು ತನ್ನ ಭೃತ್ಯನಾದ ಜೋಸಫ್ ಎಂಬುದಾಗಿಯೂ, ಈ ಗ್ರಂಥದಿಂದ ಲೋಕ ಕ್ಕೇನಾದರೂ ಪ್ರಯೋಜನವಾಗಿದ್ದರೆ ಅದಕ್ಕೆ ಜನರಿಂದ ತೋರಿಸಲ್ಪಡ

ಬೇಕಾದ ಕೃತಜ್ಞತೆಗೆ ಜೋಸಪ್ಪನೇ ಪಾತ್ರನೆಂಬುದಾಗಿಯೂ, ಬಪನ್ನನು ಬರೆದಿರುವನು. ವಿದ್ಯಾರ್ಥಿಗಳು ಈ ವಿಷಯವನ್ನು ಪರ್ಯಾಲೋಚಿಸಿ, ಚಿಂತನೆಯಿಂದಲೂ ಏಕಾಗ್ರತೆಯಿಂದಲೂ ಸ್ವಾಧೀನಪಡಿಸಿಕೊಳ್ಳಬೇಕಾದ ಗ್ರಂಥಗಳನ್ನು ವ್ಯಾಸಂಗಮಾಡುವುದಕ್ಕೆ ಸ್ವಲ್ಪವೂ ಚಿತ್ತವಿಕ್ಷೇಪಕಾರಣ ವಿಲ್ಲದಿರತಕ್ಕ ಕಾಲವನ್ನು ಗೊತ್ತುಮಾಡಿಕೊಳ್ಳಬೇಕು. ವಿಶ್ರಾಂತಿ ಯನ್ನು ಹೊಂದಿದಮೇಲೆ ಈ ವ್ಯಾಸಂಗಕಾಲ ದೊರೆಯುವಂತೆ ಮಾಡಿ ಕೊಳ್ಳಬೇಕು. ಯೂನಿವರ್ಸಿಟಿ ಪರೀಕ್ಷೆಗಳಲ್ಲಿ ಅತ್ಯುತ್ತಮವಾಗಿ ತೇರ್ಗಡೆಯಾಗಿ ಮಹೋನ್ನತಿಗೆ ಬಂದ ವಿದ್ವಾಂಸರಲ್ಲಿ ಅನೇಕರು, ಸಾಯಂಕಾಲ ಸೂರ್ಯಾಸ್ತಮಯವಾಗುವುದರೊಳಗಾಗಿ ಊಟಮಾಡಿ, ಎಂಟುಘಂಟೆಗೆ ನಿದ್ರೆಗೆ ಉಪಕ್ರಮಮಾಡಿ, ಎರಡು ಅಥವಾ ಮೂರು ಘಂಟೆಗೆದ್ದು, ಬೆಳಗ್ಗೆ ಏಳು ಅಥವಾ ಎಂಟುಘಂಟೆಯವರೆಗೂ ಅವಿಚ್ಛಿನ್ನ ವಾಗಿ ವ್ಯಾಸಂಗಮಾಡಿದವರಾಗಿರುತ್ತಾರೆ. ವೃದ್ಧಿಗೆ ಬರಬೇಕೆಂಬ ಆಶೆ ಯುಳ್ಳ ವಿದ್ಯಾರ್ಥಿಗಳೆಲ್ಲರೂ, ಈ ವಿಷಯಕ್ಕೆ ಗಮನಕೊಟ್ಟು, ಬದು ಕುವ ಮಾರ್ಗದಲ್ಲಿ ಆಸಕ್ತರಾಗುವುದುತ್ತಮವು.

ಮಧ್ಯರಾತ್ರಿಗೆ ಪೂರ್ವಭಾಗದಲ್ಲಿ ಒಂದು ಘಂಟೆ ನಿದ್ರೆಮಾಡಿದರೆ, ಮಧ್ಯರಾತ್ರಿಯಾದಮೇಲೆ ಎರಡುಘಂಟೆ ನಿದ್ರೆಮಾಡಿದಷ್ಟು ಪ್ರಯೋಜನ ವಾಗುವುದೆಂದು, ಡಾಕ್ಟರ್ ಕ್ರೈಟರವರು ಅಪ್ಪಣೆಕೊಡಿಸಿರುವರು. ರಾತ್ರಿವಿಹಾರಾದಿಗಳಲ್ಲಿ ಕಾಲಕ್ಷೇಪಮಾಡಿ ಬೆಳಗ್ಗೆ ಎಂಟೊಂಬತ್ತು ಘಂಟೆಗೆ ಏಳತಕ್ಕ ಜನಗಳಿಗಿಂತ, ರಾತ್ರಿ ಎಂಟೊಂಬತ್ತು ಘಂಟೆಗಳೊಳಗಾಗಿ ಮಲಗಿ ಬೆಳಗ್ಗೆ ಮೂರುನಾಲ್ಕು ಘಂಟೆಗಳೊಳಗಾಗಿ ಎದ್ದು ಎಂಟೊಂಬತ್ತು

ಘಂಟೆಯವರೆಗೂ ಏಕಾಗ್ರಚಿತ್ತದಿಂದ ವ್ಯಾಸಂಗಮಾಡತಕ್ಕವರು, ಹದಿನೈದಿಪ್ಪತ್ತು ವರುಷಗಳವರೆಗೂ ಹೆಚ್ಚಾಗಿ ಬದುಕಿದಂತಾಗುವುದೆಂದು, ಡಾಡ್ರಿಜ್ ಎಂಬ ಮಹಾವಿದ್ವಾಂಸರು ಅಪ್ಪಣೆಕೊಡಿಸಿರುವರು. ಪ್ರಷ್ಯಾ ದೇಶದ ಚಕ್ರವರ್ತಿಗಳಾದ ಎರಡನೆಯ ಫ್ರೆಡರಿಕ್‌ರವರು, ಬೆಳಗ್ಗೆ ನಾಲ್ಕು ಘಂಟೆಗಳಮೇಲೆ ಎಂದಿಗೂ ಹಾಸಿಗೆಯಲ್ಲಿರುತ್ತಿರಲಿಲ್ಲ. ಲಂಡರ್ಸ್ ಪಟ್ಟಣದ ಕಾರ್ಖಾನೆಯಲ್ಲಿ ಕೂಲಿಯವರಂತೆ ವೇಷವನ್ನು ಹಾಕಿಕೊಂಡು ಬಡಗಿಯ ಕೆಲಸವನ್ನು ಮಾಡುತ್ತ, ಹಡಗುಗಳ ರಚನೆಯನ್ನು ಕಲಿತುಕೊಂಡ ಪೀಟರ್ ದಿ ಗ್ರೇಟ್ ಎಂಬ ಪ್ರಷ್ಯಾದೇಶದ ಚಕ್ರವರ್ತಿಗಳು, ಬೆಳಗ್ಗೆ ಐದು ಘಂಟೆಯೊಳಗಾಗಿ ಎದ್ದು ರಾಜ್ಯಭಾರದ ಕೆಲಸಗಳನ್ನು ಮಾಡುತ್ತಿದ್ದರು. ನಮ್ಮ ಶ್ರೀಮನ್ಮಹಾರಾಜರವರೂ ಕೂಡ, ಐದುಘಂಟೆಗೆ ಮುಂಚೆಯೇ ಎದ್ದು, ಆರುಘಂಟೆಯೊಳಗಾಗಿ ಕುದುರೆಯಸವಾರಿ ಮೊದಲಾದ ವ್ಯಾಯಾಮಗಳನ್ನು ಮಾಡಿಕೊಂಡು ಬಂದು, ರಾಜ್ಯಭಾರದ ಆಡಳಿತಗಳಿಗೆ ಗಮನಕೊಡುತಿರುವರು. ನಮ್ಮ ಪೂರ್ವದ ಮಹರ್ಷಿಗಳೂ, ರಾಜರ್ಷಿಗಳೂ, ಉಷಃಕಾಲಕ್ಕೆ ಸರಿಯಾಗಿ ಎದ್ದು, ಸ್ನಾನವನ್ನೂ ನಿತ್ಯಕರ್ಮಾದಿಗಳನ್ನೂ ಪೂರಯಿಸಿಕೊಂಡು, ಸೂರ್ಯೋದಯವಾಗುವುದರೊಳಗಾಗಿ ತಮ್ಮ ಕೆಲಸವನ್ನು ಮಾಡುವುದರಲ್ಲಿ ನಿರತರಾಗುತಿದ್ದರು. ನಮ್ಮ ಮೊದಲನೆಯ ದಿವಾನ್‌ರಾಗಿದ್ದ ಮೆ|| ರಂಗಾಚಾರ್ಯರವರು, ಬೆಳಗ್ಗೆ ನಾಲ್ಕು ಘಂಟೆಗೆದ್ದು, ತಿರುಗಿ ರಾತ್ರಿ ಹನ್ನೆರಡುಘಂಟೆಯವರೆಗೂ ರಾಜ್ಯಕಾರ್ಯಗಳಲ್ಲಿ ಕೆಲಸಮಾಡಿ, ತಮ್ಮ ಇಪ್ಪತ್ತೆರಡುತಿಂಗಳ ದಿವಾನಗಿರಿಯೂ ರಾಮರಾಜ್ಯವಾಗಿ ಪರಿಣಮಿಸುವಂತೆ ಮಾಡಿದರು.

ಯಾರು ಆಲಸ್ಯಕ್ಕೆ ಗುರಿಯಾಗದೆ, ಸಾಯಂಕಾಲ ಹೊತ್ತಿಗೆ ಮುಂಚೆ ಭೋಜನವನ್ನು ಮಾಡಿ, ಎಂಟೊಂಬತ್ತು ಘಂಟೆಗಳೊಳಗಾಗಿ ಮಲಗಿಕೊಂಡು, ಬೆಳಗ್ಗೆ ನಾಲ್ಕುಘಂಟೆಗೆ ಮುಂಚೆಯೇ ಎದ್ದು, ವ್ಯಾಸಂಗ ಮೊದಲಾದ ಕೆಲಸಗಳಲ್ಲಿ ಶ್ರದ್ಧೆಯಿಂದ ಕೃಷಿಮಾಡುವರೋ, ಅವರು ಸಕಲ ವಾದ ಇಷ್ಟಾರ್ಥಗಳನ್ನೂ ಪಡೆದು, ಇಹಪರಗಳನ್ನು ಸುಲಭವಾಗಿ ಸಾಧಿಸುವರು. ಹೊತ್ತಿಗೆಮುಂಚೆ ಏಳುವುದು ಕಷ್ಟವೆಂದು ಕೆಲವರು ತಿಳಿದುಕೊಳ್ಳುವುದುಂಟು. ಅದೆಂದಿಗೂ ಕಷ್ಟವಲ್ಲ. ಸಂಕಲ್ಪಮಾಡಿದರೆ, ಆ ಸಂಕಲ್ಪಕ್ಕೆ ತಕ್ಕಂತೆ ಅನೇಕರಿಗೆ ಉದ್ದಿಷ್ಟವಾದ ಕಾಲಕ್ಕೆ ಸರಿಯಾಗಿ ಎಚ್ಚರಿಕೆಯಾಗುವುದು. ಹಾಗೆ ಎಚ್ಚರಿಕೆಯಾಗದಿರತಕ್ಕವರಿಗೆ, ಎಚ್ಚರಿಕೆಯಾಗುವಂತೆ ಮಾಡಿಕೊಳ್ಳುವುದಕ್ಕೂ ಉಪಾಯುಗಳಿರುವುವು. ಅಲಾರಮ್ ಟೈಂಪೀಸ್ ಎಂಬ ಗಡಿಯಾರಗಳು, ಬಹಳ ಸುಲಭಕ್ರಯಕ್ಕೆ ದೊರೆಯುತ್ತವೆ. ಉದ್ದಿಷ್ಟವಾದ ಕಾಲಕ್ಕೆ ಸರಿಯಾಗಿ ಮುಳ್ಳನ್ನು ತಿರುಗಿಸಿಟ್ಟರೆ, ಆ ಕಾಲಕ್ಕೆ ಸರಿಯಾಗಿ ಘಂಟೆಗಳನ್ನು ಹೊಡೆದು ಅವು ಎಚ್ಚರಪಡಿಸುವುವು. ಕೆಲವು ದಿವಸಗಳೊಳಗಾಗಿ, ಇದೊಂದೂ ಇಲ್ಲದೆ ಜನಗಳು ತಾವಾಗಿ ಏಳುವ ಅಭ್ಯಾಸವನ್ನು ಹೊಂದುವರು. ಸಾಯಂಕಾಲ ಏಳೆಂಟುಘಂಟೆಗಳಿಗೇ ಮಲಗಿಕೊಂಡರೆ ನಿದ್ದೆ ಬರುವುದಿಲ್ಲವೆಂದು ಕೆಲವರು ಅಭಿಪ್ರಾಯಪಡುವುದುಂಟು. ಅಭ್ಯಾಸವಿಲ್ಲದವರಿಗೆ ಒಂದುದಿವಸಮಾತ್ರ ಹೀಗಾಗಬಹುದು. ಆದಾಗ್ಯೂ ಲಕ್ಷ್ಯ ಮಾಡದೆ ಎರಡು ಅಥವಾ ಮೂರುಘಂಟೆಗೆ ಎದ್ದು ವ್ಯಾಸಂಗಮಾಡಿದರೆ, ಮಾರನೆಯ ದಿವಸದಿಂದ ಸರಿಹೋಗುವುದು. ವಿಶ್ರಾಂತಿಯಾಗುವುದಕ್ಕೆ

ಪ್ರತಿಯೊಬ್ಬರಿಗೂ ಏಳೆಂಟು ಘಂಟೆಗಳ ಕಾಲ ಬೇಕಾಗಿರುತ್ತದೆ. ಒಂದು ದಿವಸಕ್ಕೆ ಬೇಕಾದಷ್ಟು ಕಾಲವು ನಿದ್ದೆಗೋಸ್ಕರ ಕೊಡಲ್ಪಡದಿದ್ದರೆ, ಮಾರನೆಯ ದಿವಸ ಹೊತ್ತಿಗೆಮುಂಚೆಯೇ ನಿದ್ರೆ ಬರುವುದು ಅನುಭವಸಿದ್ಧವಾಗಿದೆ. ಜಾಗರಣೆಮಾಡಿದ ಮಾರನೆಯ ದಿವಸ, ಹಗಲುಹೊತ್ತು ನಿದ್ರೆ ಮಾಡದಿರತಕ್ಕವರಿಗೂ ಕೂಡ ನಿದ್ರೆ ಬರುವುದು ಅನೇಕ ಕಾರಖಾನೆಗಳಲ್ಲಿ ರಾತ್ರಿಯೆಲ್ಲ ಕೆಲಸನಡೆಯುವುದು. ಅಲ್ಲಿ ರಾತ್ರಿ ಕೆಲಸಮಾಡತಕ್ಕವರು ಹಗಲು ನಿದ್ರೆಮಾಡುವರು. ಹೀಗೆ ಸಮಸ್ತವ್ಯಾಸಂಗಗಳೂ ಅಭ್ಯಾಸಕ್ಕನುಸಾರವಾಗಿರುವುವು. ಆದುದರಿಂದ, ಈ ಮರ್ಮವನ್ನು ತಿಳಿಯದೆ, ಇಂಥ ಹೊತ್ತಿನಲ್ಲಿ ನಿದ್ದೆ ಬರುತ್ತದೆಂಬುದಾಗಿಯೂ, ಇಂಥ ಹೊತ್ತಿನಲ್ಲಿ ಬರುವುದಿಲ್ಲವೆಂಬುದಾಗಿಯೂ ತಿಳಿದುಕೊಳ್ಳುವುದು ಯುಕ್ತವಲ್ಲ. ನಮ್ಮ ಅನುಕೂಲ್ಯಗಳಿಗೆ ತಕ್ಕಹಾಗೆ ನಮ್ಮ ಅಭ್ಯಾಸಗಳು ನಮಗೆ ಅಧೀನವಾಗಿರುವಂತೆ ನಾವು ಮಾಡಿಕೊಳ್ಳಬೇಕೇ ಹೊರತು, ನಾವು ಅವಕ್ಕೆ ಅಧೀನರಾಗಕೂಡದು. ಈ ವಿಷಯಕ್ಕೆ ಗಮನಕೊಡತಕ್ಕವರೆಲ್ಲರೂ, ಎಂಥ ಕಷ್ಟವಾದ ಕೆಲಸವನ್ನು ಪ್ರಾರಂಭಿಸಿದಾಗ್ಯೂ, ಅದನ್ನು ಸಾಧಿಸದೆ ಬಿಡುವುದಿಲ್ಲ. ವಿದ್ಯಾರ್ಥಿಗಳು ಈ ವಿಷಯವನ್ನು ಚೆನ್ನಾಗಿ ಪರ್ಯಾಲೋಚಿಸಿ, ಇಷ್ಟಾರ್ಥಸಿದ್ಧಿಯ ಮಾರ್ಗಗಳನ್ನು ಚೆನ್ನಾಗಿ ತಿಳಿದುಕೊಳ್ಳಬೇಕು.

ಭೂಮಿಯಲ್ಲಿ ಜನನವಾದಕೂಡಲೆ, ಸ್ತ್ರೀಪುರುಷರಬ್ಬರಿಗೂ ವಿದ್ಯಾಭ್ಯಾಸಕ್ಕುಪಕ್ರಮವಾಗುವುದು ; ದೇಹವನ್ನು ಬಿಡುವವರೆಗೂ ವಿದ್ಯಾಭ್ಯಾಸ ನಡೆಯುತ್ತಲೇ ಇರುವುದು. ಬರೆಯುವುದು ಓದುವುದು ಮಾತ್ರವೇ ವಿದ್ಯಾಭ್ಯಾಸವೆಂದು ತಿಳಿದುಕೊಳ್ಳಬಾರದು. ಜ್ಞಾನಾರ್ಜನೆಗೆ ನಮ್ಮ

ಕಣ್ಣು, ಕಿವಿ, ಮೂಗು, ನಾಲಗೆ, ತ್ವಗಿಂದ್ರಿಯ, ಇವುಗಳೆಲ್ಲವೂ ಮುಖ್ಯ ದ್ವಾರಗಳು ; ಇವುಗಳ ಮೂಲಕವಾಗಿ ಎಷ್ಟೋ ವಸ್ತುತತ್ವಗಳು ನಮ್ಮ ಮನಸ್ಸಿಗೆ ಬರುತ್ತವೆ. ಅದರಿಂದ ಜ್ಞಾನವುಂಟಾಗುತ್ತದೆ. ಪಂಚೇಂದ್ರಿಯ ಗಳನ್ನೂ ಚೆನ್ನಾಗಿ ಉಪಯೋಗಿಸಿಕೊಂಡು ವಸ್ತುತ್ವಗಳನ್ನು ಯಾರು ವಿಶೇಷವಾಗಿ ತಿಳಿದುಕೊಳ್ಳುವರೋ, ಅವರು ಸರ್ವತೋಮುಖವಾದ ಪ್ರಜ್ಞೆ ಯುಳ್ಳವರಾಗುತ್ತಾರೆ. ವಿದ್ವಾಂಸರಾದಮಾತ್ರಕ್ಕೆ ಜನರು ಸರ್ವಜ್ಞರಾದ ರೆಂದು ಹೇಳುವುದಕ್ಕಾಗುವುದಿಲ್ಲ. ಬೀದಿಗುಡಿಸತಕ್ಕವರೇ ಮೊದಲಾದ ಹೀನಸ್ಥಿತಿಯಲ್ಲಿರತಕ್ಕ ಪ್ರತಿಯೊಬ್ಬರೂ, ಪಂಡಿತೋತ್ತಮರೆಂದೆನ್ನಿಸಿಕೊಂ ಡಿರತಕ್ಕ ಮಹಾಜನಗಳಿಗೂ ಗೊತ್ತಿಲ್ಲದಿರುವ ಅನೇಕ ವಿಷಯಗಳನ್ನು ತಿಳಿದುಕೊಂಡಿರುವರೆಂಬುದಾಗಿಯೂ, ದೊಡ್ಡ ಪಂಡಿತರೂ ಅವರಿಂದ ಗ್ರಹಿಸ ತಕ್ಕ ವಿಷಯಗಳು ವಿಶೇಷವಾಗಿರುವುವೆಂಬುದಾಗಿಯೂ, ಆಂಗ್ಲೇಯ ಪಂಡಿತೋತ್ತಮರಾದ ಸರ್ ವಾಲ್ಟರ್ ಸ್ಕಾಟ್‌ರವರು ಹೇಳಿರುವರು. ಪ್ರಪಂಚದಲ್ಲಿರತಕ್ಕ ಎಲ್ಲಾ ಸ್ತ್ರೀಪುರುಷರೂ ಅನೇಕ ಭಾಗಗಳಲ್ಲಿ ನಮಗೆ ಗುರುಗಳಾಗಿರುವುದಕ್ಕೆ ಅರ್ಹತೆಯುಳ್ಳವರೆಂದು, ರಾಜೇಂದ್ರಲಾಲ್ ಮಿತ್ರ ರವರು ಹೇಳಿರುವರು. ಕೂಲಿಯವರಿಂದಲೂ ಸಂಪದಭ್ಯುದಯ ಪ್ರಯತ್ನ ಗಳ ವಿಷಯದಲ್ಲಿ ಅನೇಕ ರಹಸ್ಯಗಳು ತಿಳಿಯುವುವೆಂದು, ಅರ್ಥಶಾಸ್ತ್ರ, ವಿಶಾರದರಾದ ಮ|| ಸಿ. ರಂಗಾಚಾರ್ಯರವರು ಹೇಳುತ್ತಿದ್ದರು.

ಹೀನಸ್ಥಿತಿಯಲ್ಲಿರತಕ್ಕ ಅನೇಕ ಜನಗಳು, ಅನೇಕ ವಿಷಯಗಳಲ್ಲಿ, ಪ್ರಭುಪದವಿಯಲ್ಲಿಯೂ ಸಚಿವಪದವಿಯಲ್ಲಿಯೂ ಇರತಕ್ಕ ಮಹಾಜನ ಗಳಿಗಿಂತಲೂ ಹೆಚ್ಚು ತಿಳಿವಳಿಕೆಯುಳ್ಳವರಾಗಿರುವರು. ಆದರೆ, ಅದೃಷ್ಟ

ವಶದಿಂದಲೂ, ಪ್ರಭುಪದವಿಗೂ ಸಚಿವಪದವಿಗೂ ಬೇಕಾದ ಕೆಲವು ಮುಖ್ಯವಿಷಯಗಳಲ್ಲಿ ಜ್ಞಾನವಿಹೀನರಾಗಿರುವುದರಿಂದಲೂ, ಇವರು ದೊಡ್ಡ ಪದವಿಗೆ ಬರುವುದಕ್ಕವಕಾಶವಿಲ್ಲವಾಗುವುದು. ಆದಾಗ್ಯೂ, ಪ್ರಭುಪದವಿಗೂ ಸಚಿವಪದವಿಗೂ ಯಾವ ಜ್ಞಾನವತ್ಯಾವಶ್ಯಕವೋ, ಅಂಥ ಜ್ಞಾನವು ಇವರಲ್ಲಿ ವಿಶೇಷವಾಗಿರುವುದು. ಪ್ರಭುಗಳೂ ಸಚಿವರೂ ಪ್ರಜಾರಂಜನೆಯನ್ನು ಮಾಡಿ ಕೃತಾರ್ಥರಾಗಬೇಕಾದರೆ, ಇವರಿಂದಲೂ ತಿಳಿದುಕೊಳ್ಳತಕ್ಕ ವಿಷಯಗಳು ವಿಶೇಷವಾಗಿರುವುವು. ಹೀನಸ್ಥಿತಿಯಲ್ಲಿರತಕ್ಕವರು ನಿರಕ್ಷರಕುಕ್ಷಿಗಳೆಂದು ಭಾವಿಸಿ ಯಾರು ಅವರನ್ನು ನಿರಾಕರಿಸುತ್ತಾರೋ, ಅವರು ಲೋಕವ್ಯವಹಾರಜ್ಞಾನವುಳ್ಳವರೆಂದು ಹೇಳುವುದಕ್ಕಾಗುವುದಿಲ್ಲ. ಬಾಲ್ಯದಿಂದಲೂ ಯಾರು ಸಮಸ್ತರೊಡನೆಯೂ ಸಂಭಾಷಣೆ ಮಾಡುತ, ಯಾರುಯಾರಿಗೆ ಯಾವಯಾವ ವಿಷಯದಲ್ಲಿ ಪರಿಶ್ರಮವಿರುವುದೋ ಅದನ್ನು ತಿಳಿದುಕೊಳ್ಳುತ ಬರುವರೋ, ಅವರು, ಸರ್ವಜ್ಞತೆಯನ್ನು ಹೊಂದದಿದ್ದಾಗ್ಯೂ ಇತರಜನಗಳಿಗಿಂತ ಹೆಚ್ಚಾದ ಪ್ರಜ್ಞೆಯನ್ನು ಹೊಂದಿ ಲೋಕೋತ್ತರವಾದ ಪದವಿಗೆ ಬರುವರು. ಪುಸ್ತಕಗಳಿಂದ ಬರತಕ್ಕ ಜ್ಞಾನಕ್ಕಿಂತಲೂ, ಜನಗಳೊಡನೆ ಸಂಭಾಷಣದಿಂದ ಅತ್ಯುತ್ತಮವಾದ ಜ್ಞಾನವು ಲಭ್ಯವಾಗುವುದು. ಪುಸ್ತಕದ ಜ್ಞಾನವು ಗ್ರಂಥಕರ್ತನ ಅಭಿಪ್ರಾಯವನ್ನು ಒಳಕೊಂಡಿರುವುದು. ಮಹಾಜನಗಳ ಸಂಭಾಷಣದಿಂದ ಉಂಟಾಗತಕ್ಕ ಅಭಿಪ್ರಾಯವಾದರೋ, ಅನೇಕಮುಖವಾಗಿರುವುದು. ಆದುದರಿಂದ, ವಿದ್ಯಾರ್ಥಿಗಳು, ಕೂಡಿದಮಟ್ಟಿಗೂ ಸದ್ಗ್ರಂಥಗಳಿಂದ ಲಭ್ಯವಾಗತಕ್ಕ ಜ್ಞಾನದ ಜತೆಗೆ, ಮಹಾಜನಗಳ ಸಂಭಾಷಣದಿಂದುಂಟಾಗತಕ್ಕ

ಜ್ಞಾನವನ್ನೂ ಆರ್ಜಿಸಿಕೊಳ್ಳಬೇಕು. ನಿಜವಾದ ಶ್ರೇಯಸ್ಸಿಗೆ ಇದೇ ಮುಖ್ಯಕಾರಣವು. ಪ್ರತಿಯೊಬ್ಬನೂ ಪ್ರಯೋಜನಕರವಾದ ಯಾವುದಾದರೂ ಕೆಲವು ವಿಷಯಗಳಲ್ಲಿ ನಮಗೆ ತಿಳಿಯದಿರತಕ್ಕ ವಿಷಯಗಳನ್ನು ತಿಳಿಯಿಸಬಲ್ಲರೆಂದು ತಿಳಿದುಕೊಂಡು ಪ್ರವರ್ತಿಸಿದರೆ, ಜ್ಞಾನಾರ್ಜನೆಗೆ ತುಂಬ ಸಹಾಯವಾಗುವುದರಲ್ಲಿ ಯಾವ ಸಂದೇಹವೂ ತೋರುವುದಿಲ್ಲ.

ಸದಿಷ್ಟಾರ್ಥಪ್ರಾಪ್ತಿಯೇ ನಿಜವಾದ ಸೌಖ್ಯವು. ಧರ್ಮರಹಿತವಾದ ಇಷ್ಟಾರ್ಥಗಳೆಂದಿಗೂ ಸೌಖ್ಯಪ್ರದವಾಗಲಾರವು. ಇಂಥ ಸೌಖ್ಯವನ್ನು ತೋರಿಸುವುದಕ್ಕೋಸ್ಕರವೇ, ಸಕಲ ವೇದ ಶಾಸ್ತ್ರ ಪುರಾಣೇತಿಹಾಸಗಳೂ ಹುಟ್ಟಿರುವುವು. ಇವುಗಳನ್ನು ಪರಿಶೀಲಿಸಿದರೆ, ಧರ್ಮಾಧರ್ಮಗಳೂ ಸಾರಾಸಾರಗಳೂ ಗೊತ್ತಾಗುವುವು. ಅಸತ್ಕಾವ್ಯಗಳು ಅವಲೋಕನಕ್ಕೇ ಅರ್ಹವಾದುವುಗಳಲ್ಲ; ಅವುಗಳು ಸದಿಷ್ಟಾರ್ಥಸಿದ್ಧಿಗೆ ವಿರುದ್ಧವಾಗಿ ಪರಿಣಮಿಸುವುವು. ಆದುದರಿಂದ, ಜನಗಳು ಧರ್ಮದಿಂದ ನಡೆದುಕೊಳ್ಳುವಂತೆ ಮಾಡಬೇಕೆಂಬ ಅಭಿನಿವೇಶವುಳ್ಳ ಸರ್ಕಾರದವರು, ಸತ್ಯಧರ್ಮಪ್ರತಿಪಾದಕಗಳಾದ ಗ್ರಂಥಗಳು ಅವರಿಗೆ ಸುಲಭವಾಗಿ ದೊರೆಯುವಂತೆ ಏರ್ಪಾಡುಗಳನ್ನು ಮಾಡಬೇಕು. ಅಧರ್ಮಕ್ಕೂ ಅಸತ್ಯಕ್ಕೂ ಆಕರ್ಷಣರೂಪವಾಗಿರತಕ್ಕ ಧ್ವನಿಯುಳ್ಳ ಗ್ರಂಥಗಳನ್ನು ಕೂಡ, ಕೇವಲ ಬಾಲ್ಯಾವಸ್ಥೆಯಲ್ಲಾದರೂ ವಿದ್ಯಾರ್ಥಿಗಳಿಗೆ ದೊರೆಯದಂತೆ ಮಾಡಬೇಕು. ಅಸತ್ಕಾವ್ಯಗಳು ಅತ್ಯಂತ ಅನರ್ಥಕ್ಕೆ ಹೇತುವಾದುವುಗಳು. ಜಾವಾಪಟ್ಟಣದಲ್ಲಿ, ವಿಷದ ಹಬೆ ಹೊರಡತಕ್ಕ ಒಂದು ಚಿಲುಮೆಯಿರುವುದು. ಇದರ ಸಮೀಪಕ್ಕೆ ಹೋದವರೆಲ್ಲರೂ, ಈ ಹಬೆಯನ್ನು ತೆಗೆದುಕೊಂಡ ಕೂಡಲೆ ದೇಹವನ್ನು ಬಿಡು

ವರು. ಅಸತ್ಕಾವ್ಯಗಳುಳ್ಳ ಪುಸ್ತಕ ಭಂಡಾರಗಳೂ ಕೂಡ ಸದಿಷ್ಟಾರ್ಥ ಸಿದ್ಧಿಗೆ ಕುಠಾರಪ್ರಾಯವಾದ ವಿಷದ ಚಿಲುಮೆಯೆಂದು ಧಾರಾಳವಾಗಿ ಹೇಳಬಹುದು ಸರ್ಕಾರದವರೂ, ಪಾಠಕರೂ, ವಿದ್ಯಾರ್ಥಿಗಳ ಹಿತಚಿಂತಕರೂ, ದೇಶದ ಏಳಿಗೆಯಲ್ಲಿ ಆಸಕ್ತರಾದವರೂ, ನಿರ್ದುಷ್ಟವಾದ ಸೌಖ್ಯವನ್ನೂ ಶ್ರೇಯಸ್ಸನ್ನೂ ಅಪೇಕ್ಷಿಸತಕ್ಕ ವಿದ್ಯಾರ್ಥಿಗಳೂ ಕೂಡ, ಸತ್ಯಕ್ಕೂ ಧರ್ಮಕ್ಕೂ ತಪ್ಪಿ ನಡೆಯುವಂತೆ ಮಾಡತಕ್ಕ ಪುಸ್ತಕಗಳನ್ನು ಎಂದಿಗೂ ಅವಲೋಕಿಸಬಾರದು ; ಅವುಗಳನ್ನೆಂದಿಗೂ ತಮ್ಮ ಭಂಡಾರಕ್ಕೇ ಸೇರಿಸಬಾರದು. ಹಾಗೆ ಮಾಡಿದರೆ, ವಿಷವು ಹೇಗೆ ದೇಹವಿನಾಶಹೇತುವಾಗುವುದೋ, ಹಾಗೆ ಇಹಪರಗಳ ನಷ್ಟಕ್ಕೆ ದುಷ್ಟಗ್ರಂಥಗಳು ಸಾಧಕಗಳಾಗುವುವು. ದುಷ್ಟಗ್ರಂಥಗಳು ಹೇಗೋ, ಹಾಗೆ ದುಷ್ಟರ ಸಹವಾಸವೂ ಕೂಡ ಅಪ್ರತಿಹತವಾದ ವಿಷದ ಚಿಲುಮೆಯಾಗಿ ಪರಿಣಮಿಸುವುದು. ಶ್ರೇಯಸ್ಸನ್ನು ಅಪೇಕ್ಷಿಸತಕ್ಕವರು, ಮನೋವಾಕ್ಕರ್ಮಗಳಲ್ಲಿ ಧರ್ಮವನ್ನವಲಂಬಿಸಿ, ಅಧರ್ಮಕ್ಕೆ ಸಾಧಕವಾದ ಗ್ರಂಥಗಳನ್ನೂ ಸಹವಾಸಗಳನ್ನೂ ಪರಿತ್ಯಾಗ ಮಾಡುವುದರಲ್ಲಿ ಸ್ಥಿರಸಂಕಲ್ಪರಾಗಿರಬೇಕು.

ವಿದ್ಯಾರ್ಥಿಗಳು ಕೆಡುವುದಕ್ಕೆ ಕಾರಣಗಳು ಅನೇಕವಾಗಿರುವುವು. ಚುಟ್ಟಾ ಬೀಡಿ ನಸ್ಯ ಮೊದಲಾದುವುಗಳ ಉಪಯೋಗವು, ಈ ದುರಭ್ಯಾಸಗಳಲ್ಲಿ ಮೊದಲನೆಯದಾಗಿರುವುದು. ಇದರ ಉಪಯೋಗದಿಂದ ಆಗತಕ್ಕ ಅನರ್ಥಗಳನ್ನು, ವಿದ್ಯಾರ್ಥಿಗಳು ಸಾವಧಾನವಾಗಿ ಪರ್ಯಾಲೋಚಿಸಬೇಕು. ಹೊಗೇಸೊಪ್ಪನ್ನುಪಯೋಗಿಸುವುದರಿಂದ, ಕೆಲವು ರೋಗಗಳು ನಿವಾರಣೆಯಾಗುವುದುಂಟು. ವೈದ್ಯರು ಅದನ್ನು ಔಷಧವಾಗಿ ಉಪಯೋಗಿಸ

ಬೇಕೆಂದು ನಿಯಮಿಸಿದರೆ, ಆಗ ಕೆಲವುವಿಧವಾದ ರೋಗದ ಬೀಜಗಳನ್ನೂ ಕ್ರಿಮಿಗಳನ್ನೂ ಕೊಲ್ಲುವುದಕ್ಕೋಸ್ಕರ ಹೊಗೆಯಸೊಪ್ಪನ್ನುಪಯೋಗಿಸ ಬೇಕು. ಅಂಥ ರೋಗಗಳಿಗೆ ಗುರಿಯಾಗದಿರತಕ್ಕವರು ಈ ವಿಷರೂಪ ವಾದ ಎಲೆಯನ್ನುಪಯೋಗಿಸಿದರೆ, ಅದು ನಮ್ಮ ದೇಹಕ್ಕೆ ವಿಷವಾಗಿ ಪರಿಣಮಿಸಿ, ಹೊಸ ರೋಗಗಳನ್ನು ಕಲ್ಪಿಸುವುದೇನೂ ಆಶ್ಚರ್ಯವಲ್ಲ. ಇದ ನ್ನುಪಯೋಗಿಸುವುದರಿಂದ, ಆರೋಗ್ಯಕ್ಕೆ ಮಾತ್ರವೇ ಅಲ್ಲದೆ, ಬುದ್ಧಿವಿಕಾ ಸಕ್ಕೂ ತುಂಬ ಪ್ರತಿಬಂಧಕವಾಗುವುದು. ಸಿಗರೆಟ್ಟು ಸೇದತಕ್ಕವರ ಅವಸ್ಥೆ ಯನ್ನು ಪರೀಕ್ಷಿಸಬಹುದು. ರಾತ್ರಿವೇಳೆಯಲ್ಲಿ ಯಥೇಷ್ಟವಾಗಿ ಚುಟಾ ಸೇದಿ ಮಲಗಿಕೊಂಡವರು ಬೆಳಗ್ಗೆ ಎದ್ದಕೂಡಲೆ ಹೇಗಿರುತ್ತಾರೆ—ಪರೀಕ್ಷಿ ಸೋಣ. ಇವರ ಬಾಯಿ ಅಂಟಾಗಿರುತ್ತದೆ; ಬಾಯಲ್ಲಿ ದುರ್ಗಂಧ ಹೊರಡು ತ್ತದೆ; ಅನ್ನಕೋಶ ಕೆಟ್ಟುಹೋಗಿರುತ್ತದೆ; ಚಟುವಟಿಕೆಯಿರುವುದಿಲ್ಲ; ಆಕಳಿಕೆ ಬರುತ್ತಲೇ ಇರುತ್ತದೆ. ಇದನ್ನು ಸೇವಿಸತಕ್ಕವರಿಗೆ, ಪಾನಾ ಸಕ್ತಿ ಹೆಚ್ಚುತ್ತದೆ. ವಿಶೇಷವಾಗಿ ಚುಟ್ಟಾಸೇದತಕ್ಕವರ ಕಣ್ಣುಗಳು ಕೆಟ್ಟುಹೋಗುತ್ತವೆ; ಆಘ್ರಾಣಶಕ್ತಿ ಮಂದವಾಗುತ್ತದೆ; ಮೆದುಳಿನ ಧಾರಣಾಶಕ್ತಿ ಹೋಗುತ್ತದೆ. ಶ್ವಾಸಕೋಶಗಳ ಬಲ ಕಡಮೆಯಾಗು ತ್ತದೆ. ಚುಟ್ಟಾಗಳು ಮಾತ್ರವೇ ಇಂಥ ಅನರ್ಥಗಳಿಗೆ ಕಾರಣವೆಂದು ತಿಳಿಯಕೂಡದು; ಹೊಗೆಯಸೊಪ್ಪನ್ನು ಯಾವ ರೂಪದಲ್ಲುಪಯೋಗಿಸಿ ದಾಗ್ಯೂ, ಅದು ಅನರ್ಥಕ್ಕೆ ಕಾರಣವಾಗುವುದೆಂದು ತಿಳಿಯಬೇಕು. ಕೆಲವು ರೋಗಗಳಿಗೆ ಔಷಧವಾಗಿ ವೈದ್ಯರಿಂದ ಕೊಡಲ್ಪಟ್ಟರೆ ಅದನ್ನುಪ ಯೋಗಿಸಬೇಕೇ ಹೊರತು, ಇತರವಿಧದಲ್ಲುಪಯೋಗಿಸಕೂಡದು. ಹಾಗೆ

ಉಪಯೋಗಿಸುವುದರಿಂದ, ನರಗಳು ದುರ್ಬಲವಾಗುವುವು; ಗಂಟಲು ಒಣಗಿಹೋಗುವುದು; ಕುಡುಕತನಕ್ಕವಕಾಶವಾಗುವುದು; ಶರೀರ ಕೆಡುವುದು; ಕ್ಷಯರೋಗವೂ ಬರುವುದು. ಇದರಿಂದುಂಟಾಗತಕ್ಕ ಅನರ್ಥಗಳನ್ನೆಲ್ಲ ಸಂಪೂರ್ಣವಾಗಿ ವಿವರಿಸುವುದಸಾಧ್ಯವು. ಇದರ ಉಪಯೋಗದಿಂದ ದೇವರಿಗೆ ಸಮಾನನಾದ ಮನುಷ್ಯನೂ ಹಂದಿಗೆ ಸಮಾನನಾಗುವನೆಂದು ಒಬ್ಬ ಲೇಖಕನು ಬರೆದಿರುವನು. ಇದು ನಿಜವೆಂಬುದಕ್ಕೆ ಯಾವ ಸಂದೇಹವೂ ಇಲ್ಲ.

ಜನಗಳು ತಮ್ಮ ಉಡುಗೆಯ ವಿಷಯದಲ್ಲಿ ಬಹಳ ಜಾಗರೂಕರಾಗಿರಬೇಕು. ಉಡುಗೆಗಳು ನಿರ್ಮಲವಾಗಿಯೂ ಶುಭ್ರವಾಗಿಯೂ ಇರಬೇಕು. ಕೂಡಿದಮಟ್ಟಿಗೂ ಒಳ್ಳೆಯ ಬಟ್ಟೆಗಳನ್ನು ಹಾಕಿಕೊಳ್ಳಬೇಕು. ಆ ಬಟ್ಟೆಗಳು, ಬಾಳಿಕೆಬರತಕ್ಕುವುಗಳಾಗಿಯೂ ಇರಬೇಕು. ಕೆಲಸಮಾಡುವಾಗಲೂ ಮನೆಯಲ್ಲಿರುವಾಗಲೂ ಹಾಕಿಕೊಳ್ಳತಕ್ಕ ಬಟ್ಟೆಗಳು ನಿರ್ಮಲವಾಗಿರಬೇಕು. ಆದರೆ, ನೋಡುವುದಕ್ಕೆ ಲಕ್ಷಣವಾಗಿರಬೇಕೆಂದು, ಅದಕ್ಕೋಸ್ಕರ ಹೆಚ್ಚು ಖರ್ಚುಮಾಡಬಾರದು. ಹಳೆಯ ಉಡುಗೆಗಳನ್ನು ಮನೆಯಲ್ಲಿರುವಾಗ ಹಾಕಿಕೊಳ್ಳಬಹುದು. ಹೊರಗೆ ಹೋಗುವಾಗ್ಗೆ ಒಳ್ಳೆಯಬಟ್ಟೆಗಳನ್ನು ಹಾಕಿಕೊಳ್ಳತಕ್ಕದು ಅತ್ಯಂತಾವಶ್ಯಕ. ಪ್ರಾಯಕವಾಗಿ ಜನಗಳು ನಮ್ಮ ಉಡುಗೆಗಳನ್ನು ನೋಡಿ ನಮ್ಮ ಗಣ್ಯತೆಯನ್ನು ಗೊತ್ತುಮಾಡುವರು. ಸರಿಯಾದ ಉಡುಗೆಗಳನ್ನು ಹಾಕಿಕೊಳ್ಳದಿರತಕ್ಕವರ ಯೋಗ್ಯತೆಯು, ಪರಿಚಿತರಲ್ಲಿ ಗಣನೆಗೆ ಬರುವುದೇ ಹೊರತು, ಅಪರಿಚಿತರಲ್ಲಿ ಗಣನೆಗೆ ಬರುವುದಿಲ್ಲ. ಒಳ್ಳೆಯ ಉಡುಗೆಗಳನ್ನು ಹಾಕಿ

ಕೊಂಡು ಯಾವ ಕೆಲಸದಮೇಲೆ ಹೋದಾಗ್ಯೂ, ಅಂಥವರಿಗೆ ಎಲ್ಲ ಸ್ಥಳ ಗಳಿಗೂ ಪ್ರವೇಶ ದೊರೆಯುವುದು ; ಅನೇಕ ಸಂದರ್ಭಗಳಲ್ಲಿ ಕಾರ್ಯ ಸಿದ್ಧಿಯೂ ಆಗುವುದು. ಒಳ್ಳೆಯ ಉಡುಗೆಗಳನ್ನು ಹಾಕಿಕೊಂಡು ಬಹಳ ವಿಜೃಂಭಣೆಯಿಂದ ಬರತಕ್ಕ ಭಿಕ್ಷುಕನಿಗೂ ಕೂಡ, ಅವನ ವೇಷಕ್ಕನುರೂಪ ವಾಗ ಭಿಕ್ಷೆ ಕೊಡಲ್ಪಡುವುದು. ಹರುಕು ಬಟ್ಟೆಗಳನ್ನು ಹಾಕಿಕೊಂಡು ಅಸಹ್ಯವಾದ ರೀತಿಯಲ್ಲಿ ಬರತಕ್ಕ ಭಿಕ್ಷುಕನು, ಧರ್ಮಕ್ಕೆ ವಿಶೇಷ ಪಾತ್ರ ನಾಗಿದ್ದಾಗ್ಯೂ, ಅವನ ಪಾತ್ರತೆಗೆ ತಕ್ಕ ಭಿಕ್ಷೆ ದೊರೆಯುವುದಿಲ್ಲ. ಕಾರ್ಯ ಸಿದ್ಧಿಯೂ ಕೂಡ, ವೇಷಕ್ಕೂ ಭಾಷೆಗೂ ಅನುಸಾರವಾಗಿರುವುದು. ಹೀಗೆ ಉಡುಗೆಯು ಇಷ್ಟಾರ್ಥಸಿದ್ಧಿಗೆ ಅತ್ಯಂತಾವಶ್ಯಕವಾಗಿದ್ದಾಗ್ಯೂ, ಅದು ವಿಶೇಷ ಕಾಂತಿಯುಳ್ಳದಾಗಿಯೂ ಇರಬಾರದು. ನಿರ್ಮಲವಾಗಿಯೂ ಶುಭ್ರವಾಗಿಯೂ ಇದ್ದರೆ ಸಾಕಾಗಿರುತ್ತದೆ. ಉಡುಗೆಯಲ್ಲಿ ವಿಶೇಷ ವಿಜೃಂ ಭಣೆಯನ್ನು ಮಾಡತಕ್ಕವರು, ಇವರು ದೊಡ್ಡಮನುಷ್ಯರಹುದೋ ಅಲ್ಲವೋ ಎಂಬ ಸಂದೇಹಕ್ಕೆ ಪಾತ್ರರಾಗುವುದೂ ಉಂಟು. ಆದುದರಿಂದ, ವೇಷದಲ್ಲಿ ವಿಶೇಷವಿಜೃಂಭಣೆಯು, ಕಾರ್ಯಸಿದ್ಧಿಗೆ ಹೆಚ್ಚಾಗಿ ಸಹಕಾರಿ ಯಾಗಲಾರದು. ಯಾರಲ್ಲಿ ನಾವು ಕಾರ್ಯಾರ್ಥಿಗಳಾಗಿ ಹೋಗುತ್ತೇವೋ- ಅವರ ಉಡುಗೆಗಳಿಗಿಂತಲೂ ಹೆಚ್ಚಾದ ಬೆಲೆಯೂ ಕಾಂತಿಯೂ ಉಳ್ಳ ಉಡು ಗೆಗಳನ್ನು ಹಾಕಿಕೊಂಡು ಅವರೆದುರಿಗೆ ವಿಜೃಂಭಿಸಿದರೆ, ಕೆಲವು ಸಂದರ್ಭ ಗಳಲ್ಲಿ ಅವರ ತಿರಸ್ಕಾರಕ್ಕೆ ಪಾತ್ರರಾಗುವ ಸಂಭವವೂ ಬರಬಹುದು. ಆದುದರಿಂದ, ಉಡುಗೆಗಳನ್ನು ಹಾಕಿಕೊಳ್ಳುವುದರಲ್ಲಿ ವಿಶೇಷ ವಿಜೃಂಭಣೆ ಯನ್ನು ಮಾಡಕೂಡದು. ಎಲ್ಲಾ ಸ್ತ್ರೀಪುರುಷರೂ, ತಮ್ಮ ಆಯತಿಗೆ

ಸ್ವಲ್ಪಮೀರಿ ಉಡುಗೆಗಳನ್ನು ಹಾಕಿಕೊಳ್ಳಬೇಕೆಂಬುದಾಗಿಯೂ, ತಮ್ಮ ಆಯತಿಗೆ ಸ್ವಲ್ಪ ಕಡಮೆಯಾಗಿ ಜೀವನವನ್ನು ಮಾಡಬೇಕೆಂಬುದಾಗಿಯೂ, ಲೋಕವ್ಯವಹಾರಜ್ಞರಲ್ಲಿ ಶಿರೋಮಣಿಗಳಾದ ಲಾರ್ಡ್ ಛೆಸ್ಟರ್ ಫ್ಹೀಲ್ಡ ರವರು ಹೇಳುತ್ತಾರೆ. ಇದು ನಿಜವಾದ ಮಾತು. ಯಾರ ವೇಷವೂ ಭಾಷೆಯೂ ಹೃದಯಂಗಮವಾಗಿರುವುವೋ, ಅವರು-ಕೂಡಿದಮಟ್ಟಿಗೂ ಇಷ್ಟಾರ್ಥಸಿದ್ಧಿಯನ್ನು ಹೊಂದುವರು. ಈ ವಿಷಯದಲ್ಲಿ ಉದಾಸೀನ ರಾದವರು, ಪ್ರಾಯಕವಾಗಿ ಭಗ್ನಮನೋರಥರಾಗುವರು. ಕಾರ್ಯವಾಸಿ ಗಳೆಲ್ಲರೂ ಈ ವಿಷಯಕ್ಕೆ ಸಂಪೂರ್ಣವಾದ ಗಮನವನ್ನು ಕೊಡಬೇಕು.

ಉಡುಗೆಯ ವಿಷಯದಲ್ಲಿ ಹೇಗೆ ಗಮನವನ್ನು ಕೊಡಬೇಕೋ, ಹಾಗೆಯೇ ಮನೆಗಳ ವಿಷಯದಲ್ಲಿಯೂ ಸಂಪೂರ್ಣವಾದ ಗಮನವನ್ನು ಕೊಡಬೇಕು. ಮನೆಗಳು ಅರಮನೆಗಳಾಗಿರಬೇಕೆಂದು ಅಭಿಪ್ರಾಯವಲ್ಲ. ಕೂಡಿದಮಟ್ಟಿಗೂ ವಿಶಾಲವಾಗಿಯೂ, ಬೆಳಕುಗಾಳಿಗಳಿಗೆ ಅವಕಾಶ ವುಳ್ಳವಾಗಿಯೂ, ಆಯಾ ಜನಗಳ ಅಂತಸ್ತಿಗೆ ಅನುರೂಪವಾದು ವಾಗಿಯೂ, ನಿರ್ಮಲವಾಗಿರತಕ್ಕ ಕುರ್ಚಿ ಮೇಜು ಜಮಖಾನ ಮೊದಲಾ ದುವುಗಳುಳ್ಳವಾಗಿಯೂ, ನೋಡುವುದಕ್ಕೆ ಲಕ್ಷಣವಾಗಿಯೂ, ಪರಿಚಿತ ರಾದ ದೊಡ್ಡಮನುಷ್ಯರು ಬಂದಾಗ್ಗೂ ಅವರನ್ನು ಕೂರಿಸಿಕೊಂಡು ಮಾತನಾಡುವುದಕ್ಕೆ ಅನುಕೂಲವಾಗಿಯೂ ಇರಬೇಕು. ಹುಲ್ಲುಮನೆ ಗಳನ್ನು ಕೂಡ ಈ ರೀತಿಯಲ್ಲಿಟ್ಟುಕೊಳ್ಳುವುದು ಸಾಧ್ಯವಾಗಿರುವುದು. ಸ್ವಂತವಾಗಿ ಮನೆಯುಳ್ಳವರು, ಅದು ಲಕ್ಷಣವಾಗಿರುವಂತೆ ಮಾಡಿಕೊಳ್ಳ ಬಹುದು. ಸ್ವಂತ ಮನೆಗಳಿಲ್ಲದವರು, ಅನುಕೂಲವಾಗಿಯೂ ಲಕ್ಷಣ

ವಾಗಿಯೂ ಇರತಕ್ಕ ಮನೆಗಳನ್ನು ಬಾಡಿಗೆಗೆ ತೆಗೆದುಕೊಳ್ಳಬೇಕು. ಜನಗಳ ಉಡುಗೆಗಳನ್ನು ನೋಡಿದರೆ ಹೇಗೋ, ಹಾಗೆ ಅವರ ಮನೆಗಳನ್ನು ನೋಡಿಯೂ ಅವರ ಗಣ್ಯತೆಯನ್ನು ಗೊತ್ತುಮಾಡುವ ಸಂಪ್ರದಾಯ ವಿರುವುದು. ಆದುದರಿಂದ, ಒಳ್ಳೆಯ ಮನೆಗೋಸ್ಕರ ಆಗತಕ್ಕ ಖರ್ಚಿಗೆ ಹಿಂದೆಗೆಯಬಾರದು. ಈ ಭಾಗದಲ್ಲಿ ಮಾಡತಕ್ಕ ಖರ್ಚು, ಪ್ರತಿಫಲ ವುಂಟಾಗುವಂತೆ ಮಾಡಲ್ಪಡಬಹುದು. ಆರೋಗ್ಯವಿಧಿಗನುಸಾರವಾದ ಒಳ್ಳೆಯ ಮನೆಗಳಲ್ಲಿ ವಾಸಮಾಡತಕ್ಕವರಿಗೆ, ರೋಗಾದಿಗಳು ಬರುವು ದಪೂರ್ವ; ಆಯುರಾರೋಗ್ಯಗಳು ಹೆಚ್ಚುತ್ತವೆ; ಔಷಧಗಳಿಗೂ ವೈದ್ಯ ರಿಗೂ ಕೊಡತಕ್ಕ ಖರ್ಚು ಕಡಮೆಯಾಗುತ್ತದೆ; ಗಣ್ಯರೆಂಬ ಹೆಸರು ಬರುತ್ತದೆ; ಗಣ್ಯತೆಯ ಜತೆಗೆ ಇಷ್ಟಾರ್ಥಸಿದ್ಧಿಗೂ ಅವಕಾಶವಾಗುತ್ತದೆ. ಈ ಕಾರಣಗಳಿಂದ, ಪ್ರತಿಯೊಬ್ಬನೂ ತನ್ನ ಶಕ್ತಿಗೆ ಸ್ವಲ್ಪ ಮೀರಿದಾಗ್ಯೂ ಸ್ವಲ್ಪಹೆಚ್ಚು ಬಾಡಿಗೆಯನ್ನು ಕೊಟ್ಟು ಒಳ್ಳೆಯ ಮನೆಗಳನ್ನು ಬಾಡಿಗೆಗೆ ತೆಗೆದುಕೊಂಡು ಅದನ್ನು ವಾಸಾರ್ಥವಾಗಿ ಉಪಯೋಗಿಸಿಕೊಳ್ಳಬೇಕು. ಹಾಗೆ ಮಾಡುವುದರಿಂದ, ಅದಕ್ಕಾಗಿ ಆಗತಕ್ಕ ಖರ್ಚಿಗೆ ಒಂದಕ್ಕೆರಡ ರಷ್ಟು ಪ್ರತಿಫಲವು ನಮಗೆ ಪರೋಕ್ಷವಾಗಿ ದೊರೆಯುವುದರಲ್ಲಿ ಸಂದೇಹ ವಿಲ್ಲ. ಈ ಭಾಗದಲ್ಲಿ ಜಿಪುಣತನಮಾಡತಕ್ಕವರು, ಗಣ್ಯತೆಯನ್ನು ಕಳೆದುಕೊಳ್ಳುವುದಲ್ಲದೆ, ಅನೇಕಸಂದರ್ಭಗಳಲ್ಲಿ ಇಷ್ಟಾರ್ಥಸಿದ್ಧಿಯನ್ನು ಹೊಂದದೆ ಭಗ್ನಮನೋರಥರಾಗಿಯೂ ಆಗುತ್ತಾರೆ. ಸಕಲಕೃಷಿಗಳೂ ಕೂಡ, ನೆಮ್ಮದಿಯಾಗಿಯೂ ಸುಖವಾಗಿಯೂ ಇರುವುದಕ್ಕೋಸ್ಕರ ಮಾಡಲ್ಪಡುವುವು. ಪತ್ತಿಯಾದ ಮನೆಗಳಿಲ್ಲದವರಿಗೆ, ನೆಮ್ಮದಿಯೂ

ಸುಖವೂ ಎಂದಿಗೂ ಸಮಗ್ರವಾಗಿ ಲಭ್ಯವಾಗುವುದಿಲ್ಲ. ಆದುದರಿಂದ, ಈ ವಿಷಯಕ್ಕೆ ಸರ್ವರೂ ಸಂಪೂರ್ಣವಾಗಿ ಗಮನಕೊಡಬೇಕು. ಪಾಶ್ಚಾತ್ಯರಲ್ಲಿ ಈ ಸಂಕೇತಗಳು ಬಹಳ ಪ್ರಬಲವಾಗಿವೆ. ಯಾರು ಲಕ್ಷಣವಾದ ಬಂಗಲೆಗಳಲ್ಲಿ ವಾಸಮಾಡುವುದಿಲ್ಲವೋ, ಯಾರು ತಮ್ಮ ಬಂಗಲೆಗಳಲ್ಲಿ ಕುರ್ಚಿ ಮೇಜು ಮೊದಲಾದ ಸಾಮಾನುಗಳನ್ನು ಬಹಳಲಕ್ಷಣವಾಗಿಟ್ಟುಕೊಂಡಿರುವುದಿಲ್ಲವೋ, ಯಾರ ಮನೆಗಳಲ್ಲಿ ಒಳ್ಳೆಯ ಪುಸ್ತಕ ಭಂಡಾರಗಳೂ ಮನೋಹರವಾದ ತಸ್ಬೀರುಗಳೂ ವಿಚಿತ್ರವಾದ ಸಾಮಾನುಗಳೂ ಇರುವುದಿಲ್ಲವೋ, ಯಾರ ಮನೆಯಲ್ಲಿ ಸೇವಕರೂ ಕೂಡ ಲಕ್ಷಣವಾಗಿ ಉಡುಗೆಗಳನ್ನು ಹಾಕಿಕೊಂಡು ಅತ್ಯಂತ ನಿರ್ಮಲವಾಗಿರುವುದಿಲ್ಲವೋ ಯಾರ ಬಟ್ಟೆಗಳೂ ಟೋಪಿಗಳೂ ಮೋಜಾಗಳೂ ಹೊಳೆಯುತಿರುವುದಿಲ್ಲವೋ, ಯಾರ ದೇಹವೂ ಬಾಯಿಯೂ ಹಲ್ಲುಗಳೂ ನಿರ್ಮಲವಾಗಿರುವುದಿಲ್ಲವೋ, ಯಾರ ಭಾಷೆಯು ಪರಿಶುದ್ಧವಾಗಿರುವುದಿಲ್ಲವೋ, ಯಾರ ಕರ್ಮಗಳು ಜಘನ್ಯವಾಗಿರುವುವೋ, ಅವರು ಕನಿಷ್ಠವರ್ಣದವರೆಂಬುದಾಗಿ ಭಾವಿಸಲ್ಪಡುವರು. ಅವರನ್ನು ಸಂವ್ಯವಹಾರಕ್ಕೂ ಸೇರಿಸುವುದಿಲ್ಲ. ಜಾತಿಭೇದಗಳು ಅವರಲ್ಲಿಲ್ಲದಿದ್ದಾಗ್ಯೂ, ಈ ಸಮಾಚೀನವಾದ ಜಾತಿಭೇದವು ಅವರಲ್ಲಿ ವಿಶೇಷವಾಗಿರುವುದು. ಹೊಗೆಯುಬತ್ತಿ ಸೇದತಕ್ಕವರನ್ನೂ, ನಿಷಾದ್ರವ್ಯ ಸೇವನೆಮಾಡತಕ್ಕವರನ್ನೂ ಕೂಡ, ಒಳ್ಳೆಯ ಪದವಿಯಲ್ಲಿರತಕ್ಕ ದೊಡ್ಡ ಮನುಷ್ಯರೂ ಸ್ತ್ರೀಯರೂ ತಮ್ಮ ಸಹವಾಸಕ್ಕೆ ಸೇರಿಸುವುದಿಲ್ಲ. ಈ ವಿಷಯಗಳಿಗೆ ಭಾರತೀಯರಾದ ನಾವು ವಿಶೇಷವಾಗಿ ಗಮನಕೊಡುವುದತ್ಯಾವಶ್ಯಕವು.

ಲೋಕದಲ್ಲಿ ಆತ್ಮಾವಲಂಬನೆಯಿಂದಲೂ ಸ್ವಾತಂತ್ರ್ಯದಿಂದಲೂ ಬದುಕುವುದಕ್ಕೆ ಅನೇಕ ವೃತ್ತಿಗಳಿರುವುವು. ಆದಾಗ್ಯೂ, ಸರ್ವರೂ ತಮ್ಮ ಬುದ್ಧಿಗೂ ಶಕ್ತಿಗೂ ಅನುರೂಪವಾದ ವೃತ್ತಿಗಳಾವುವೋ ಅವುಗಳನ್ನು ತಿಳಿದುಕೊಳ್ಳುವುದಕ್ಕೆ ಅನುಕೂಲ್ಯಗಳಿಲ್ಲದಿರುವುದರಿಂದಲೂ, ಲಾಭಕರವಾದ ವೃತ್ತಿಯನ್ನು ಹೊಂದುವುದಕ್ಕೆ ಸರಿಯಾದ ಮಾರ್ಗದರ್ಶಕರು ಸಿಕ್ಕದಿರುವುದರಿಂದಲೂ, ಭಿಕ್ಷದಿಂದ ಜೀವಿಸುವುದಕ್ಕುಪಕ್ರಮಮಾಡುತ್ತಾರೆ. ಎಲ್ಲ ವೃತ್ತಿಗಳಿಗಿಂತಲೂ ಅತ್ಯಂತ ಜಘನ್ಯವಾದ ವೃತ್ತಿಯು ಭಿಕ್ಷಾವೃತ್ತಿ. ಸಕಲ ವೇದಶಾಸ್ತ್ರವಿಶಾರದರಾದ ಪಂಡಿತೋತ್ತಮರಲ್ಲಿ ಯಾರಾದರೂ ಅಹೋರಾತ್ರಿಯೂ ವಿರಾಮವಿಲ್ಲದೆ ಜನಗಳಿಗೆ ಐಹಿಕಾಮುಷ್ಮಿಕ ಧರ್ಮಗಳನ್ನು ಬೋಧಿಸುವುದರಲ್ಲಿ ನಿರತರಾಗಿದ್ದರೆ, ಅವರ ಬೋಧನೆಗೆ ಅಲ್ಪಸ್ವಲ್ಪ ಪ್ರತಿಫಲರೂಪವಾಗಿ ಅಶನವಸನಗಳಿಗೋಸ್ಕರ ಭಿಕ್ಷವನ್ನು ಕೊಡಬಹುದು. ಅಂಗಹೀನರಾಗಿಯೂ, ಬುದ್ಧಿಬಲದಿಂದಲೂ ಭುಜಬಲದಿಂದಲೂ ಜೀವನವನ್ನು ಸಂಪಾದಿಸಿಕೊಳ್ಳುವುದಕ್ಕೆ ಅನರ್ಹರಾಗಿಯೂ ಇರತಕ್ಕವರೂ ಕೂಡ, ಭಿಕ್ಷದಿಂದ ಜೀವಿಸಬಹುದು. ಇತರರಿಗೆ ಭಿಕ್ಷಾವೃತ್ತಿ ಯೋಗ್ಯವಾದುದಲ್ಲ. ಬ್ರಾಹ್ಮಣರಲ್ಲಿಯೂ, ಮುಸಲ್ಮಾನರಲ್ಲಿಯೂ, ಇತರರಲ್ಲಿಯೂ, ಆರೋಗದೃಢಕಾಯರಾಗಿಯೂ ಬುದ್ಧಿಬಲವುಳ್ಳವರಾಗಿಯೂ ಯಾವ ಕೆಲಸದಲ್ಲಿ ಪ್ರವರ್ತಿಸಿದರೂ ಅದರಲ್ಲಿ ಬೇಕಾದಹಾಗೆ ಸಂಪಾದಿಸುವುದಕ್ಕೆ ಶಕ್ತಿಯುಳ್ಳವರಾಗಿಯೂ ಇರತಕ್ಕವರು ಕೂಡ, ಭಿಕ್ಷದಿಂದ ಜೀವಿಸುವುದಕ್ಕುಪಕ್ರಮಿಸುತ್ತಾರೆ. ಇದರಿಂದ, ಇವರು ಯಾವಜ್ಜೀವವೂ ದರಿದ್ರಾವಸ್ಥೆಯಲ್ಲಿಯೇ ಇರಬೇಕಾಗುವುದು.

ಭಿಕ್ಷುಕರೆಂದಿಗೂ ಒಳ್ಳೆಯ ಪದವಿಗೆ ಬರುವುದಿಲ್ಲ. ಇವರು ಅಭಿನಯಿಸುವ ವೈರಾಗ್ಯವು, ಎಂದಿಗೂ ಅಕೃತ್ರಿಮವಾದುದಲ್ಲ. ಅಭಾವದಿಂದುಂಟಾದ ವೈರಾಗ್ಯವು, ನಿಜವಾದ ವೈರಾಗ್ಯವೇ ಅಲ್ಲ. ದೈವಾಧೀನದಿಂದ, ಕೆಲವುಜನ ಭಿಕ್ಷುಕರು ಭಿಕ್ಷಾವೃತ್ತಿಯನ್ನು ಬಿಟ್ಟು ತಮ್ಮ ಶಕ್ತಿಯಿಂದ ಬದುಕುವರು.

ಒಬ್ಬ ಫಕೀರನು, ನಿತ್ಯವೂ ಅಹೋರಾತ್ರಿಯೂ ಬಹಳದೈನ್ಯದಿಂದ ಭಿಕ್ಷವನ್ನೆತ್ತಿ ಉದರಭರಣಮಾಡಿಕೊಳ್ಳುತಿದ್ದನು. ಒಂದಾನೊಂದು ದಿನ, ಒಂಟೆಯಮೇಲೆ ಹೋಗುತಿದ್ದ ಒಬ್ಬ ದೊಡ್ಡಮನುಷ್ಯನನ್ನು, ಏನಾದರೂ ಭಿಕ್ಷೆಕೊಡಬೇಕೆಂದು ಕೇಳಿದನು. ಅವನು, ಒಂದು ನೂರುಕಾಸಿನ ಬಿಲ್ಲೆಯನ್ನು ಕೊಡುವುದಕ್ಕೆ ತೆಗೆದನು. ಅದನ್ನು ತೆಗೆದುಕೊಳ್ಳುವುದಕ್ಕೆ, ಈ ಭಿಕ್ಷುಕನು ಒಂಟೆಯ ಸಮೀಪಕ್ಕೆ ಹೋದನು. ಅದು ಅವನನ್ನು ಝಾಡಿಸಿ ಒದ್ದಿತು. ಈ ಪೆಟ್ಟಿನಿಂದ ತುಂಬ ಗಾಯವಾಗಿ ಕೆಳಕ್ಕೆ ಬಿದ್ದು, ಅವನು ಮೂರ್ಛೆಹೋದನು. ಇದನ್ನು ನೋಡಿ, ಒಂಟೆಯ ಮೇಲೆ ಸವಾರಿಮಾಡುತಿದ್ದ ಮನುಷ್ಯನೂ, ದಾರಿಯಲ್ಲಿ ಹೋಗುತಿದ್ದವರೂ, ಶೈತ್ಯೋಪಚಾರಗಳಿಂದ ಅವನು ಚೇತರಿಸಿಕೊಳ್ಳುವಂತೆ ಮಾಡಿ ಮನೆಗೆ ಕಳುಹಿಸಿದರು. ಒಂಟೆಯ ಒದೆಯಿಂದಾದ ಗಾಯಗಳು ವಾಸಿಯಾಗುವುದಕ್ಕೆ ಕೆಲವುದಿವಸಗಳಾದುವು. ತರುವಾಯ, ಅವನು ಇನ್ನು ಮೇಲೆ ಭಿಕ್ಷವನ್ನು ಮಾಡುವುದಿಲ್ಲವೆಂದು ಪ್ರತಿಜ್ಞೆಮಾಡಿ, ಒಬ್ಬ ವರ್ತಕನಲ್ಲಿ ಜವಾನನಾಗಿ ಸೇರಿದನು. ಕೆಲವುದಿವಸಗಳಲ್ಲಿ ಅವನಿಗೆ ವ್ಯಾಪಾರ ಧರ್ಮಗಳೆಲ್ಲ ಗೊತ್ತಾದುವು. ಅನಂತರ ತಾನೇ ವ್ಯಾಪಾರಮಾಡುವ

ದಕ್ಕುಪಕ್ರಮಿಸಿದನು. ಹಿಡಿದ ಕೆಲಸಗಳೆಲ್ಲ ಫಲದಾಯಕಗಳಾದುವು. ಸುಮಾರು ಮುವ್ವತ್ತುವರುಷಗಳು ಕೆಲಸಮಾಡುವುದರಲ್ಲಿ, ಅವನು ಕೋಟೀಶ್ವರನಾದನು. ತನ್ನ ಸಂಪತ್ತಿಗೆ ತನ್ನನ್ನೊದೆದ ಒಂಟೆಯೇ ಮುಖ್ಯ ಕಾರಣವೆಂದು ಭಾವಿಸಿ, ಅವನು ಒಂಟೆಗಳನ್ನು ತನ್ನ ಮನೆದೇವರೆಂದು ಪೂಜಿಸುತ್ತಬಂದನು. ಈ ಮೂಢಭಕ್ತಿ ಹಾಗಿರಲಿ; ಭಿಕ್ಷಾವೃತ್ತಿಯು ಅತ್ಯಂತಜಘನ್ಯವಾದುದೆಂಬುದಕ್ಕೂ, ಎಲ್ಲ ಸ್ತ್ರೀಪುರುಷರೂ ತಮ್ಮ ಭುಜ ಬಲದಿಂದಾಗಲಿ ಬುದ್ಧಿಬಲದಿಂದಾಗಲಿ ಜೀವಿಸುವುದು ಉತ್ತಮವೆಂಬು ದಕ್ಕೂ, ವೈರಾಗ್ಯಚಕ್ರವರ್ತಿಗಳು ವಿನಾ ಇನ್ನಾರೂ ಭಿಕ್ಷದಿಂದ ಜೀವನ ಮಾಡಬಾರದೆಂಬುದಕ್ಕೂ. ಈ ಫಕೀರನ ಚರಿತ್ರೆಯು ಆದರ್ಶಪ್ರಾಯ ವಾಗಿರುವುದು.

ಸಾವಧಾನವಾಗಿ ಮಾಡಿದಹೊರತು, ಯಾವ ಕೆಲಸವೂ ಸಮರ್ಪಕ ವಾಗಿ ಆಗುವುದಿಲ್ಲ. ಗ್ರಂಥಗಳನ್ನು ಬರೆಯತಕ್ಕವರು, ಆತುರಪಡದೆ, ಸಾವಧಾನವಾಗಿ ಬರೆದು, ಅವನ್ನು ಪುನಃಪುನಃ ಪಠಿಸಿ, ಅಭಿಪ್ರಾಯದ ಲ್ಲಿಯೂ ಭಾಷೆಯಲ್ಲಿಯೂ ಯಾವ ನ್ಯೂನತೆಗಳೂ ಇಲ್ಲದಂತೆ ಮಾಡಿ, ಅನಂತರ ಅವುಗಳನ್ನು ಮುದ್ರಣಕ್ಕೆ ಕಳುಹಿಸಬೇಕು. ಅನೇಕ ಗ್ರಂಥ ಕರ್ತರುಗಳು, ಈ ಭಾಗದಲ್ಲಿ ಬಹಳ ತಾಳ್ಮೆಯಿಂದ ಕೆಲಸಮಾಡಿರುವರು. ಅವರ ಗ್ರಂಥಗಳೇ, ಮಹಾಕಾವ್ಯಗಳಾಗಿ ಪರಿಣಮಿಸಿರುವುವು. ಯಾರು ಆತುರದಿಂದ ಬರೆದು ಚೆನ್ನಾಗಿ ಶೋಧಿಸದೆ ಮುದ್ರಿಸುವರೋ, ಅವರ ಗ್ರಂಥ ಗಳಲ್ಲಿ ಅನೇಕದೋಷಗಳು ಸಂಘಟಿಸುವುವು. ಆ ಗ್ರಂಥಗಳೂ ಕೂಡ, ಅಲ್ಪಾಯುಸ್ಸುಳ್ಳವುಗಳಾಗಿ, ಆ ಗ್ರಂಥಕರ್ತರ ಜತೆಯಲ್ಲಿಯೇ ಕಾಲಾ

ಧೀನವಾಗುವುವು. ಮಹಾಕಾವ್ಯಗಳನ್ನು ಬರೆಯತಕ್ಕವರು ಹೇಗೆ ಸಾವಧಾನವಾಗಿ ಕೆಲಸಮಾಡಿ ಆಚಂದ್ರಾರ್ಕವಾದ ಕೀರ್ತಿಯನ್ನು ಪಡೆಯುವರೋ, ಹಾಗೆಯೇ ಈ ಪ್ರಪಂಚದಲ್ಲಿರತಕ್ಕ ಲಕ್ಷಾಂತರ ವೃತ್ತಿಗಳಲ್ಲಿ ಯಾವುದನ್ನವಲಂಬಿಸಿದಾಗ್ಯೂ ಅದರಲ್ಲಿ ಬೇಸರನ್ನು ಹೊಂದದೆ ಸಾವಧಾನವಾಗಿಯೂ ಶ್ರದ್ಧೆಯಿಂದಲೂ ಕೆಲಸಮಾಡಿ ಆತುರಕ್ಕೆ ಅವಕಾಶಕೊಡದಿರತಕ್ಕವರು, ಆ ಕೆಲಸದಲ್ಲಿ ಪರಮಾವಧಿಯಾದ ಶಕ್ತಿಯನ್ನು ಹೊಂದಿ, ದಿಗಂತವಿಶ್ರಾಂತವಾದ ಕೀರ್ತಿಮಹಿಮೆಯನ್ನೂ ಅಸಾಧಾರಣವಾದ ಸಂಪತ್ತನ್ನೂ ಪಡೆಯುವರು ಧರ್ಮಬೋಧನೆಯಲ್ಲಿ ವ್ಯಾಸ ಮೊದಲಾದವರೂ, ರಾಜ್ಯಭಾರಕ್ರಮದಲ್ಲಿ ಭೀಷ್ಮ ಮೊದಲಾದವರೂ, ರಾಜ್ಯತಂತ್ರಗಳಲ್ಲಿ ಚಾಣಕ್ಯ ಮೊದಲಾದವರೂ, ಮಹಾಕವಿಗಳಲ್ಲಿ ಕಾಳಿದಾಸ ಮೊದಲಾದವರೂ, ಸಕಲ ಶಾಸ್ತ್ರವಿಶಾರದರಲ್ಲಿ ಜೈಮಿನಿ ಮೊದಲಾದವರೂ, ರಾಜರ್ಷಿಗಳಲ್ಲಿ ಜನಕ ಮೊದಲಾದವರೂ ಅದ್ವಿತೀಯರಾಗುವುದಕ್ಕೆ, ತಾವು ಹಿಡಿದ ಕೆಲಸಗಳಲ್ಲಿ ಅವರು ತೋರಿಸಿದ ಶ್ರದ್ಧೆಯೂ, ಸಾವಧಾನವಾಗಿ ಕೆಲಸಮಾಡತಕ್ಕ ಶಕ್ತಿಯೂ ಮುಖ್ಯಕಾರಣಗಳು. ಈ ಶಕ್ತಿಗಳನ್ನು ಸಂಪಾದಿಸಿಕೊಳ್ಳತಕ್ಕವರು, ಅವರಂತೆಯೇ ಅತ್ಯುತ್ತಮವಾದ ಸ್ಥಿತಿಗೆ ಬರುವುದರಲ್ಲಿ ಯಾವ ಸಂದೇಹವೂ ಇರುವುದಿಲ್ಲ. ಪಾಶ್ಚಾತ್ಯರಲ್ಲಿ ಯೂರಿಪಿಡೀಸ್ ಎಂಬ ಮಹಾಕವಿಯೂ, ಜಾರ್ಜ್ ಎಂಬ ಮಹಾಕವಿಯೂ, ಅಮೆರಿಕಾ ಖಂಡದವರಲ್ಲಿ ಎಡಿಸನ್ ಎಂಬ ಅದ್ವಿತೀಯನಾದ ಶಾಸ್ತ್ರಜ್ಞನೂ, ಅನನ್ಯಸಾಧಾರಣವಾದ ಐಕಾಗ್ರ್ಯದಿಂದಲೂ ಶ್ರದ್ಧೆಯಿಂದಲೂ ಶಾಶ್ವತವಾದ ಕೀರ್ತಿಯನ್ನು ಸಂಪಾದಿಸಿರುವರು. ಒಬ್ಬ

ಮನುಷ್ಯನು ಮಾಡಿದ ಕೆಲಸವನ್ನು ಇನ್ನೊಬ್ಬನು ಮಾಡುವುದು ಕಷ್ಟ ವಲ್ಲ. ಆದರೆ, ಹಾಗೆ ಕೆಲಸಮಾಡತಕ್ಕವನು, ಆ ಕೆಲಸವನ್ನು ನಿರ್ವಹಿಸು ವುದಕ್ಕೆ ಎಷ್ಟು ಶ್ರದ್ಧೆಯು ಅದನ್ನು ಮಾಡಿ ನಿರ್ವಹಿಸಿದವನಿಂದ ತೋರಿಸ ಲ್ಪಟ್ಟಿತೋ, ಅಷ್ಟು ಶ್ರದ್ಧೆಯನ್ನು ತಾನೂ ತೋರಿಸಿದಹೊರತು, ಕೆಲಸ ಕೈಗೂಡುವುದಿಲ್ಲ. ಬುದ್ಧಿಹೀನರಾದವರು, ಹಿಡಿದ ಕೆಲಸಗಳಲ್ಲಿ ಜಯಾಪ ಜಯಗಳು ಅದೃಷ್ಟಾಯತ್ತವೆಂದು ಹೇಳಿಕೊಳ್ಳುವರು. ಅಪ್ರತಿಹತವಾದ ಪುರುಷಕಾರವು, ಸಕಲ ಕಾರ್ಯಸಿದ್ಧಿಗಳಿಗೂ ಸಾಧಕವಾಗುವುದು. ಪುರುಷ ಕಾರಶಾಲಿಗಳಾದವರು, ಅದೃಷ್ಟವಿಷಯವನ್ನೇ ಪರ್ಯಾಲೋಚಿಸುವು ದಿಲ್ಲ; ಪುರುಷಕಾರವೇ ಅವರಿಗೆ ಅದೃಷ್ಟವಾಗಿ ಪರಿಣಮಿಸುವುದು ; ಸಕಲ ಸಿದ್ಧಿಗಳನ್ನೂ ಅವರು ಪುರುಷಕಾರದಿಂದಲೇ ಹೊಂದುವರು. ಮನುಷ್ಯನಿಗೆ ದೇವರು ಅವನ ಇಷ್ಟಾರ್ಥಸಿದ್ಧಿಗೆ ಬೇಕಾದ ಶಕ್ತಿಗಳನ್ನೆಲ್ಲ ಕೊಟ್ಟಿರುವನು. ಆ ಶಕ್ತಿಗಳನ್ನುಪಯೋಗಿಸುವುದರಲ್ಲಿ ಬೇಜಾರುಪಡ ದಿರತಕ್ಕವರೆಲ್ಲರೂ, ಲೀಲೆಯಿಂದ ಇಷ್ಟಾರ್ಥಸಿದ್ಧಿಯನ್ನು ಹೊಂದುವರು.

ಈ ಜಗತ್ತಿನಲ್ಲಿ, ಅನೇಕಕೋಟಿ ಪ್ರಾಣಿಗಳಿರುವುವು. ಅವುಗಳಲ್ಲಿ-ತಿಂಡಿ ತೀರ್ಥ ಮೊದಲಾದ ಸರ್ವಪ್ರಾಣಿಸಹಜವಾದ ಕರ್ಮಗಳಲ್ಲಿ ಆಸಕ್ತ ಗಳಾಗಿ-ಕೋಪತಾಪಗಳಿಗೆ ಅಧೀನಗಳಾಗಿ-ಸ್ವಕಾರ್ಯದಲ್ಲಿ ನಿರತಗಳಾಗಿರ ತಕ್ಕ ಪ್ರಾಣಿಗಳೇ ವಿಶೇಷವಾಗಿರುತ್ತವೆ. ಅರಿಷಡ್ವರ್ಗಗಳನ್ನು ಗೆದ್ದು, ಜಿತೇಂದ್ರಿಯತ್ವವನ್ನು ಹೊಂದಿ, ಸಕಲಜನಗಳ ಸೌಖ್ಯವೂ ತನ್ನ ಸೌಖ್ಯ ವೆಂಬ ಭಾವವನ್ನೂ ಇಟ್ಟುಗೊಂಡು, ಗುಣವಂತನಾಗಿ, ವೀರ್ಯವಂತನಾಗಿ, ಧರ್ಮಜ್ಞನಾಗಿ, ಕೃತಜ್ಞನಾಗಿ, ಸತ್ಯವಂತನಾಗಿ, ಸಚ್ಚರಿತ್ರೆಯುಳ್ಳವನಾಗಿ,

ಸರ್ವಭೂತದಯೆಯುಳ್ಳವನಾಗಿ, ವಿದ್ವಾಂಸನಾಗಿ, ಸಮರ್ಥನಾಗಿ, ಪ್ರಿಯವಾದ ವಾಕ್ಕೂ ದರ್ಶನವೂ ಉಳ್ಳವನಾಗಿ, ಶಾಸ್ತ್ರಜ್ಞಾನವನ್ನು ಪಡೆದವನಾಗಿ, ಕೋಪತಾಪಗಳನ್ನು ಗೆದ್ದವನಾಗಿ, ಅಸೂಯಾರಹಿತನಾಗಿ, ಸರ್ವರಲ್ಲಿಯೂ ಪ್ರೀತಿಯುಳ್ಳವನಾಗಿ, ಸರ್ವರಿಗೂ ಅಭಯಂಕರನಾಗಿ ಇರತಕ್ಕ ಮನುಷ್ಯನು, ಕೋಟಿಗೊಬ್ಬನು ಸಿಕ್ಕುವುದು ಕಷ್ಟ. ಆದರೆ, ಈ ಗುಣಾತಿಶಯಗಳುಳ್ಳ ಮನುಷ್ಯರು, ಎಲ್ಲ ದೇಶಗಳಲ್ಲಿಯೂ ಎಲ್ಲ ಕಾಲಗಳಲ್ಲಿಯೂ ಅಲ್ಲಲ್ಲಿಯೇ ಇರುವುದುಂಟು. ಇವರನ್ನೇ, ಅವತಾರ ಪುರುಷರೆಂದು ಹೇಳುವರು. ತನ್ನಲ್ಲಿರತಕ್ಕ ಶತ್ರುಗಳನ್ನು ಗೆದ್ದವರು, ಲೋಕವನ್ನೂ ಗೆಲ್ಲಬಲ್ಲರು. ಈ ಗುಣಾತಿಶಯಗಳಿಲ್ಲದೆ, ಇಂದ್ರಿಯಪರವಶರಾಗಿ, ಮಾಡಬಾರದ ಕೆಲಸಗಳನ್ನು ಮಾಡಿ, ಮನುಷ್ಯಾಧಮರಾಗಿರತಕ್ಕವರು, ದಿಗ್ವಿಜಯಮಾಡಿದವರೆಂಬುದಾಗಿಯೂ, ಜಗದೇಕವೀರರೆಂಬುದಾಗಿಯೂ, ಜಗದೇಕಗುರುಗಳೆಂಬುದಾಗಿಯೂ ವಿಜೃಂಭಿಸುವುದನ್ನು ನೋಡಿದರೆ, ಆಶ್ಚರ್ಯವಾಗುತ್ತದೆ.

ಚಂದ್ರಗುಪ್ತನು ತನ್ನ ಚಕ್ರಾಧಿಪತ್ಯವನ್ನೆಲ್ಲ ಒಪ್ಪಿಸುವುದಕ್ಕೆ ಸಿದ್ಧನಾಗಿದ್ದರೂ, ಅವನಿಂದ ಒಂದು ಕಾಸನ್ನೂ ತೆಗೆದುಕೊಳ್ಳದೆ, ಕಂದಮೂಲಗಳನ್ನು ತಾನೇ ತಂದು ಆಹಾರಾರ್ಥವಾಗಿ ಉಪಯೋಗಿಸಿಕೊಳ್ಳುತ್ತ, ತಾನೇ ಪರ್ಣಶಾಲೆಯನ್ನು ಹಾಕಿಕೊಂಡು ಅದರಲ್ಲಿ ವಾಸಮಾಡುತ್ತ, ನಿರ್ದುಷ್ಟವಾದ ಧರ್ಮದಿಂದ ಚಕ್ರಾಧಿಪತ್ಯದ ರಾಜ್ಯಭಾರಕ್ರಮಗಳು ನಡೆಯುವಂತೆ ಏರ್ಪಾಡುಮಾಡಿ, ಇಂಥ ಧರ್ಮರಾಜ್ಯದ ಭಾರವನ್ನು ವಹಿಸಿರತಕ್ಕ ಚಕ್ರವರ್ತಿಯನ್ನು ದ್ವಾರಪಾಲಕನನ್ನಾಗಿ ಮಾಡಿಕೊಂಡಿದ್ದ

ಜಿತೇಂದ್ರಿಯನಾದ ಚಾಣಕ್ಯನಿಗಿಂತ, ದೊಡ್ಡ ಜಿತೇಂದ್ರಿಯರುಂಟೇ? ರಾಜಕೀಯವಿಷಯಗಳಲ್ಲಿ ಅದ್ಭುತವಾದ ಶಕ್ತಿಯನ್ನುತೋರಿಸಿ, ಎಂಥ ವಿಪತ್ತುಗಳು ಬಂದಾಗ್ಯೂ ಶಾಂತಚಿತ್ತನಾಗಿದ್ದುಗೊಂಡು, ಸಾವಧಾನ ವಾಗಿ ತನ್ನ ಧರ್ಮಪ್ರಯತ್ನಗಳಿಗೆ ಬಂದ ವಿಘ್ನಗಳನ್ನೆಲ್ಲ ಲೀಲೆಯಿಂದ ಪರಿಹಾರಮಾಡಿ, ದುಷ್ಟನಿಗ್ರಹವನ್ನೂ ಶಿಷ್ಟಪರಿಪಾಲನೆಯನ್ನೂ ಮಾಡು ವುದರಲ್ಲಿ ಯಮಧರ್ಮನಂತೆ ಪರಿಣಮಿಸಿದ ಚಾಣಕ್ಯನ ಮೇಲುಪಂಕ್ತಿಯು, ಸರ್ವರಿಗೂ ಅನುಸರಣೀಯವಾದುದು. ಈ ಅದ್ಭುತವಾದ ಶಕ್ತಿ ಬರಬೇ ಕಾದರೆ, ಉದ್ದಿಷ್ಟವಾದ ಕೆಲಸದಲ್ಲಿ ಮನಸ್ಸು ಲೀನವಾಗುವಂತೆ ಮಾಡಿ ಕೊಳ್ಳಬೇಕು; ವಿಷಯಾಂತರಗಳಿಗೆ ಮನಸ್ಸು ಚಲಿಸದಂತೆ ಮಾಡಿಕೊಳ್ಳು ವುದೇ, ನಿಜವಾದ ತಪಸ್ಸು. ಇಂಥ ತಪೋಮಹಿಮೆಯನ್ನು ಸಂಪಾದಿಸಿದ ಹೊರತು, ಉದ್ದಿಷ್ಟಕಾರ್ಯಗಳನ್ನು ಮಾಡುವುದಕ್ಕೂ, ಅವತಾರಪುರುಷ ರೆನ್ನಿಸುವುದಕ್ಕೂ, ಅವಕಾಶವೆಂದಿಗೂ ಉಂಟಾಗುವುದಿಲ್ಲ.

ಕೆಲಸಮಾಡತಕ್ಕವನಿಗೆ, ಚಿತ್ರವಿಚಿತ್ರವಾದ ಕಿರಿಕಿರಿಗಳುಂಟಾಗು ವುವು. ಹಿಡಿದ ಕೆಲಸಗಳಿಗೆ ನಾನಾವಿಧವಾದ ವಿಘ್ನಗಳು ಬರುವುವು. ಇವುಗಳಲ್ಲಿ ಅನೇಕ ವಿಘ್ನಗಳು, ತೃಪ್ತಿಯನ್ನೂ ಏಕಾಗ್ರ್ಯವನ್ನೂ ತಪ್ಪಿಸ ತಕ್ಕುವುಗಳಾಗಿರುವುದುಂಟು. ಉಪೇಕ್ಷೆಯಿಂದಲೂ, ಶಾಂತಿಯಿಂದಲೂ, ಈ ಕಿರಿಕಿರಿಗಳನ್ನೂ ವಿಘ್ನಗಳನ್ನೂ ನಿವಾರಣೆಮಾಡಿಕೊಳ್ಳಬೇಕು. ಅಸಾಧ್ಯವಾದರೆ, ಶಾಂತಿಯಿಂದಲೂ ಸಮಾಧಾನದಿಂದಲೂ ಸಹಿಸಿಕೊಳ್ಳ ಬೇಕು. ಹಾಗೆ ಸಹಿಸಿಕೊಂಡು ಉಪಕ್ರಮಿಸಿದ ಕೆಲಸವನ್ನು ಸಾಧಿಸು ವುದರಲ್ಲಿ ಶ್ರದ್ಧೆ ಕಡಮೆಯಾಗದಂತೆ ನೋಡಿಕೊಳ್ಳಬೇಕು. ಎಷ್ಟು ತೊಂದರೆ

ಗಳು ಬಂದಾಗ್ಯೂ, ಉದ್ದಿಷ್ಟವಾದ ಕೆಲಸದಲ್ಲಿ ಮನಸ್ಸನ್ನು ನಿಲ್ಲಿಸಿ ಹಿಡಿದ ಕೆಲಸವನ್ನು ಪೂರಯಿಸುವುದೇ, ಉತ್ತಮ ಪುರುಷರ ಲಕ್ಷಣ. ಈ ಶಕ್ತಿಯನ್ನು ಸಂಪಾದಿಸಿಕೊಳ್ಳದಿರತಕ್ಕವರು, ವಿದ್ಯಾರ್ಜನೆಯಲ್ಲಿಯೂ ಉದ್ಯೋಗದಲ್ಲಿಯೂ ಇಷ್ಟಾರ್ಥಸಿದ್ಧಿಹೊಂದುವುದಸಾಧ್ಯವು. ವ್ಯಾಸಂಗ ಮಾಡತಕ್ಕವರಿಗೆ, ಪರೀಕ್ಷೆಯ ಕಾಲಗಳಲ್ಲಿ ಪೋಷಕರು ಸಾಯುವುದುಂಟು; ಬಂಧುಮಿತ್ರರಿಗೆ ದುಸ್ಸಹವಾದ ಕಷ್ಟಗಳು ಬರುವುದುಂಟು; ಅವರಿಗೂ ಅನೇಕವಾದ ನಷ್ಟಗಳಾಗುವುದುಂಟು. ಚಿತ್ತಸ್ಥೈರ್ಯವುಳ್ಳವರು ಇಂಥ ವಿಷಮಕಾಲಗಳಲ್ಲಿಯೂ ತಮ್ಮ ವ್ಯಾಸಂಗವನ್ನು ಬಿಡುವುದಿಲ್ಲ; ಸರ್ವತ್ರ ಸಾಧನವಾದ ಧೈರ್ಯವನ್ನವಲಂಬಿಸಿ, ಆ ಸಂದರ್ಭಗಳಲ್ಲಿ ಮಾಡಬೇಕಾದ ಕೆಲಸಗಳನ್ನು ಸಾವಧಾನವಾಗಿ ಮಾಡಿ, ಅದರಿಂದ ತಮ್ಮ ವ್ಯಾಸಂಗಕ್ಕೆ ನ್ಯೂನತೆ ಬರದಂತೆ ಮಾಡಿಕೊಳ್ಳುವುದರಲ್ಲಿ ಬದ್ಧಾದರರಾಗಿರುವರು. ಇದೇ ಉತ್ಸಾಹಶಾಲಿಗಳ ಲಕ್ಷಣವು. ಈ ವುತ್ಸಾಹಕ್ಕೆ ಯಾವ ಭಂಗವೂ ಬಾರದಂತೆ ನೋಡಿಕೊಳ್ಳುತ ಹಿಡಿದ ಕೆಲಸ ಪೂರಯಿಸುವವರೆಗೆ ಯಾರು ಉದ್ಯೋಗಮಾಡುವರೋ, ಅವರು ಆ ವುದ್ಯೋಗದ ಫಲವನ್ನು ಹೊಂದುವರು; ಹಾಗಲ್ಲದೆ, ವಿಘ್ನರೂಪವಾದ ಅನರ್ಥಗಳಿಗೊಳಪಟ್ಟು, ಅವುಗಳು ತಮ್ಮ ಕೆಲಸಕ್ಕೆ ಪ್ರತಿಬಂಧಕವಾಗದಂತೆ ಕೃಷಿಮಾಡದೆ, ಆಕಾಶದಲ್ಲಿ ಕೋಟೆಕಟ್ಟತಕ್ಕವನಂತೆ ನಿಷ್ಪ್ರಯೋಜನವಾದ ಆಲೋಚನೆಗಳಿಗೆ ಮನಸ್ಸುಕೊಡತಕ್ಕವರು, ಎಂದಿಗೂ ಇಷ್ಟಾರ್ಥಸಿದ್ಧಿಯನ್ನು ಹೊಂದುವುದಿಲ್ಲ. ಎಡಿಸನ್ನಿನ ಹಾಗೆ, ಹಿಡಿದ ಕೆಲಸ ಪೂರಯಿಸುವವರೆಗೂ ಎಂಥ ಅನರ್ಥಗಳು ಬಂದರೂ ಗಣಿಸದೆ ಕೆಲಸಮಾಡತಕ್ಕವನೇ, ಲೋಕೈಕವೀರ

ನಾಗಿ ಪರಿಣಮಿಸುವನು. ನಿವಾರಣೀಯವಾದ ವಿಘ್ನಗಳಿಂದ ಹಿಡಿದ ಕೆಲಸಗಳನ್ನು ಬಿಡತಕ್ಕವರು, ಸಾಮಾನ್ಯರೆನ್ನಿಸುವರು. ಎಂಥ ವಿಘ್ನಗಳು ಬಂದರೂ ಧೈರ್ಯವನ್ನವಲಂಬಿಸಿ ಹಿಡಿದ ಕೆಲಸವನ್ನು ಸಾಧಿಸತಕ್ಕವರು, ಮಹಾಪುರುಷರೆನ್ನಿಸುವರು. ಪ್ರತಿಯೊಬ್ಬ ಮನುಷ್ಯನೂ, ತಾನು ಇಂಥ ಮಹಾಪುರುಷನಾಗಬೇಕೆಂದು ಪ್ರಯತ್ನಮಾಡಬೇಕು. ಹಾಗೆ ಪ್ರಯತ್ನ ಮಾಡತಕ್ಕವರ ಉದ್ಯೋಗವು, ಫಲಕಾರಿಯಾಗದೆ ಹೋಗುವುದಿಲ್ಲ. ಒಂದು ಸಂಕಲ್ಪವನ್ನು ಮಾಡಿ, ಆ ಸಂಕಲ್ಪವನ್ನು ಸಾಧಿಸುವುದಕ್ಕೋಸ್ಕರ ಮನಸ್ಸನ್ನು ವಿಷಯಾಂತರಗಳಲ್ಲಿ ಬಿಡದೆ, ಪೂರಯಿಸುವವರೆಗೂ ಕೆಲಸ ಮಾಡತಕ್ಕವರಲ್ಲಿ, ಯಾರೂ ಭಗ್ನಮನೋರಥರಾಗಿರುವುದಿಲ್ಲ. ಈ ವಿಷಯು ವನ್ನು ಮನಸ್ಸಿನಲ್ಲಿಟ್ಟುಗೊಂಡು, ಸರ್ವರೂ ತಮ್ಮ ಇಷ್ಟಾರ್ಥಸಿದ್ಧಿಗೋಸ್ಕರ ಸ್ಥೈರ್ಯದಿಂದ ಕೆಲಸಮಾಡುವುದನ್ನು ಅಭ್ಯಾಸಮಾಡಬೇಕು. ನಿಶ್ಚಲವಾದ ತಪಸ್ಸು, ಸಕಲವಾದ ಇಷ್ಟಾರ್ಥಸಿದ್ಧಿಗಳಿಗೂ ಮುಖ್ಯಕಾರಣವು. ಇದನ್ನು ಎಲ್ಲರೂ ತಿಳಿದುಕೊಂಡು ಆಚರಣೆಗೆ ತಂದುಕೊಳ್ಳಬೇಕು.

ಪೂರ್ವಾಪರಗಳನ್ನು ಪರ್ಯಾಲೋಚಿಸಿ ಕೆಲಸಮಾಡುವ ಶಕ್ತಿಯು, ಇತರ ಎಲ್ಲ ಶಕ್ತಿಗಳಿಗಿಂತಲೂ ಬಹಳದೊಡ್ಡದು. ತಿರ್ಯಗ್ಜಂತುಗಳಿಗೂ ನಮಗೂ ಇರತಕ್ಕ ಭೇದವನ್ನು ಪರ್ಯಾಲೋಚಿಸಿದರೆ, ನಮಗೆ ಈ ಶಕ್ತಿ ಯಿರುವುದೆಂಬುದಾಗಿಯೂ, ಅವುಗಳಿಗೆ ಈ ಶಕ್ತಿಯಿಲ್ಲವೆಂಬುದಾಗಿಯೂ ಸ್ಪಷ್ಟವಾಗಿ ಗೊತ್ತಾಗುವುದು. ಯೋಚನೆಯನ್ನು ಮಾಡುವ ಮನುಷ್ಯ ರಿಗೆ, ತಾವು ಮಾಡತಕ್ಕ ಕೆಲಸಗಳ ಪರಿಣಾಮಫಲವು ಗೊತ್ತಾಗುವುದು. ತಿರ್ಯಗ್ಜಂತುಗಳಿಗೆ ಇದು ಚೆನ್ನಾಗಿ ಗೊತ್ತಾಗುವುದಿಲ್ಲ. ತಿರ್ಯಗ್ಜಂತು

ಗಳಿಗೂ ಮನುಷ್ಯನಿಗೂ ಈ ಭಾಗದಲ್ಲಿರುವ ವ್ಯತ್ಯಾಸವು, ಸಾಮಾನ್ಯ ಮನುಷ್ಯನಿಗೂ ಸಾರಾಸಾರವಿಚಾರಜ್ಞನಾದ ಮನುಷ್ಯನಿಗೂ ಇರುವುದು. ಸಾಮಾನ್ಯವಾಗಿ, ಜನಗಳು ಸ್ವಾಭಿಮಾನವುಳ್ಳವರು ; ಪರರು ಮಾಡಿದ ಕೆಲಸಗಳಲ್ಲಿ ಎಷ್ಟು ಗುಣಗಳಿದ್ದಾಗ್ಯೂ, ಅದನ್ನು ಉಪರಿಪ್ಲವವಾಗಿ ನೋಡಿ ನಿಂದಿಸುವ ಸ್ವಭಾವವೂ ಜನರಲ್ಲಿರುವುದುಂಟು. ಇಂಥ ದುರಭಿಮಾನಪ್ರತಿನಿವಿಷ್ಟರಾದವರು, ಸಾರಾಸಾರವಿಚಾರಜ್ಞರಲ್ಲಿ ಗಣನೀಯರಾಗುವುದಿಲ್ಲ. ದುರಭಿಮಾನರಹಿತರಾಗಿ ವಿಚಾರಮಾಡುವ ಶಕ್ತಿಯನ್ನು ಸಂಪಾದಿಸಿಕೊಳ್ಳುವುದು ಅತ್ಯಂತ ಆವಶ್ಯಕವು. ನಮ್ಮನ್ನು ಯಾರಾದರೂ ಸ್ತುತಿಸಿದರೆ ನಾವು ಸಂತೋಷಪಡುತ್ತೇವೆ ; ದೂಷಿಸಿದರೆ ವ್ಯಸನಪಡುತ್ತೇವೆ. ಈ ಸ್ತುತಿಗೂ ನಿಂದೆಗೂ ನಾವು ಅರ್ಹರೇ ಅಲ್ಲವೇ ಎಂಬುದನ್ನು ಪರಿಶೀಲಿಸಿ, ಮೃಷಾಸ್ತುತಿಯಿಂದ ಹಿಗ್ಗದೆ, ಮೃಷಾನಿಂದೆಯಿಂದ ತಗ್ಗದೆ, ತಮ್ಮ ಕೆಲಸಗಳನ್ನು ಮಾಡತಕ್ಕವರು, ಬಹಳ ವಿರಳರಾಗಿರುತ್ತಾರೆ. ಯಾರಾದರೂ ನಮ್ಮನ್ನು ನಿಂದಿಸಿದರೆ, ನಾವು ಆ ನಿಂದೆಗೆ ಅರ್ಹರೇ ಅಲ್ಲವೇ ಎಂಬುದಾಗಿ, ಸ್ವಾಭಿಮಾನವನ್ನು ಬಿಟ್ಟು ಪರೀಕ್ಷಿಸಿಕೊಳ್ಳಬೇಕು. ನಿಂದೆಗೆ ಕಾರಣವಾದ ದುರ್ವ್ಯಾಪಾರಗಳನ್ನು ನಾವು ಮಾಡಿದ್ದರೆ, ಅದರಿಂದುಂಟಾದ ಅನರ್ಥಗಳನ್ನು ಪರಿಹಾರಮಾಡಬೇಕು. ನಿಂದಿಸಲ್ಪಡುವುದಕ್ಕೆ ಅರ್ಹವಾದ ದುರ್ಗುಣಗಳು ನಮ್ಮಲ್ಲೇನಾದರೂ ಇದ್ದರೆ, ಅವುಗಳನ್ನು ಬಿಡಬೇಕು. ಯಾರಾದರೂ ನಮ್ಮನ್ನು ಸ್ತುತಿಸಿದರೆ, ಆ ಸ್ತುತಿಯಿಂದ ಹಿಗ್ಗದೆ, ಅಂಥ ಸ್ತುತಿಗೆ ನಾವು ಅರ್ಹರೇ ಅಲ್ಲವೇ ಎಂಬುದಾಗಿ ಪರೀಕ್ಷಿಸಬೇಕು. ನಾವು ಅನರ್ಹರೆಂದು ಗೊತ್ತಾದರೆ, ಸ್ತುತಿಯನ್ನು

ಮಾಡಿದವನು ಯಾವ ಲಾಭದ ಮೇಲೆ ದೃಷ್ಟಿಯಿಟ್ಟು ಸ್ತುತಿಸಿರುವನೋ-ಅದನ್ನು ಪರೀಕ್ಷಿಸಬೇಕು. ಆ ಲಾಭಕ್ಕೆ ಅವನು ಅರ್ಹನೇ ಅಲ್ಲವೇ ಎಂಬುದನ್ನು ನಿಷ್ಕರ್ಷಿಸಬೇಕು. ಅದಕ್ಕೆ ಅವನು ಅರ್ಹನಾಗಿದ್ದರೆ, ಅವನು ಸ್ತೋತ್ರಮಾಡಿದ್ದಕ್ಕೋಸ್ಕರ ಕೋಪಮಾಡಿಕೊಳ್ಳದೆ, ಅವನ ಕೆಲಸವನ್ನು ಮಾಡಿಕೊಡಬೇಕು; ಅವನು ಅನರ್ಹನಾಗಿದ್ದರೆ, ತಾನು ಆ ಕೆಲಸವನ್ನು ಮಾಡುವುದಿಲ್ಲವೆಂಬುದಾಗಿ ಖಂಡಿತವಾಗಿ ಹೇಳಿಬಿಡಬೇಕು. ಎಲ್ಲ ಕೆಲಸಗಳಲ್ಲಿಯೂ, ಸಮಗ್ರವಾಗಿ ಪೂರ್ವಾಪರಗಳನ್ನು ಯೋಚಿಸಿ ಮಾಡುವುದು ಅತ್ಯಾವಶ್ಯಕವು. ಹೀಗೆ ಯೋಚನೆಮಾಡುವುದರಲ್ಲಿ, ಬೇಜಾರನ್ನು ಹೊಂದಬಾರದು.

ಒಬ್ಬ ಗಡಿಯಾರರಿಪೇರಿಮಾಡುವವನ ಬಳಿಗೆ, ಅತ್ಯುತ್ಕೃಷ್ಟವಾದ ಒಂದು ಗಡಿಯಾರವು ರಿಪೇರಿಗಾಗಿ ತರಲ್ಪಟ್ಟಿತು. ಅದು ಬಹಳಬೆಲೆಯುಳ್ಳದಾಗಿದ್ದಿತು; ಕಾಲವನ್ನು ಮಾತ್ರ ಕ್ಲೃಪ್ತವಾಗಿ ತೋರಿಸುತ್ತಿರಲಿಲ್ಲ. ಗಡಿಯಾರರಿಪೇರಿಮಾಡತಕ್ಕವನು, ಅದನ್ನು ಇಪ್ಪತ್ತುಮುವ್ವತ್ತು ಸಲ ಬಿಚ್ಚಿ, ಪ್ರತಿಯೊಂದುಸಲವೂ ಜಾಗರೂಕತೆಯಿಂದ ಜೋಡಿಸಿದನು. ಯಾವ ಭಾಗದಲ್ಲಿಯೂ ಯಾವ ನ್ಯೂನತೆಯೂ ಇರುವಂತೆ ಅವನಿಗೆ ಕಾಣಬರಲಿಲ್ಲ. ಇದಕ್ಕೇನು ಕಾರಣವಿರಬಹುದೆಂದು, ಅವನು ಏಕಾಗ್ರಚಿತ್ತದಿಂದ ಪರ್ಯಾಲೋಚಿಸಿದನು. ಇಂಥ ಒಳ್ಳೆಯ ಗಡಿಯಾರವು ನಡೆಯುವುದರಲ್ಲಿ ವ್ಯತ್ಯಾಸ ಬರಬೇಕಾದರೆ, ಉಕ್ಕಿನ ಸ್ಪ್ರಿಂಗು- ಅಥವಾ ತಂತಿಯು- ತನ್ನ ಕೆಲಸವನ್ನು ಸರಿಯಾಗಿ ಮಾಡುವುದಕ್ಕೆ ಏನೋ ಒಂದು ಪ್ರತಿಬಂಧಕವಿರಬಹುದೆಂದು, ಅವನ ಮನಸ್ಸಿಗೆ ತೋರಿತು. ಅದನ್ನು

ಪರೀಕ್ಷಿಸಬೇಕೆಂದು, ಒಂದು ಸಣ್ಣ ಸೂಜಿಯನ್ನು ಆ ತಂತಿಯ ಒಳಿಯ ಲ್ಲಿಟ್ಟನು. ಅದು ಆ ಗಡಿಯಾರದ ಒಂದು ಭಾಗಕ್ಕೆ ಆಕರ್ಷಿಸಲ್ಪಟ್ಟಿತು. ಅದನ್ನು ಪರೀಕ್ಷಿಸಿ ನೋಡಲು, ಅಲ್ಲಿ ಅಯಸ್ಕಾಂತವಿದ್ದಿತು. ಅದನ್ನು ತೆಗೆದುಹಾಕಲು, ಗಡಿಯಾರವು ಕ್ಲೃಪ್ತವಾಗಿ ನಡೆಯುವುದಕ್ಕುಪಕ್ರಮ ವಾಯಿತು. ಬೇಜಾರುಪಡದೆ ಈ ಗಡಿಯಾರವು ಸರಿಯಾಗಿ ನಡೆಯ ದಿರುವುದಕ್ಕೆ ಕಾರಣವೇನಿರಬಹುದೆಂದು ಅವನು ಪರ್ಯಾಲೋಚಿಸದಿದ್ದ ದ್ದರೆ, ಅವನಿಗೆ ಈ ವಿಷಯವು ಗೊತ್ತಾಗುತಿದ್ದಿತೆ? ಎಂದಿಗೂ ಗೊತ್ತಾಗು ತಿರಲಿಲ್ಲ.

ನ್ಯೂಟನ್ ಎಂಬ ಇಂಗ್ಲೀಷ್ ಗಣಿತಶಾಸ್ತ್ರವಿಶಾರದನು, ಸೂರ್ಯ ಚಂದ್ರ ಮೊದಲಾದ ಗ್ರಹಗಳು ಹೇಗೆ ನಿರಾಧಾರಗಳಾಗಿ ಆಕಾಶಮಾರ್ಗದಲ್ಲಿ ಸಂಚರಿಸುವುವೋ ಅದನ್ನು ನೋಡಿ, ಈ ಸಂಚಾರಕ್ಕೆ ಕಾರಣಗಳನ್ನು ಅನೇಕವರುಷ ಪರ್ಯಾಲೋಚಿಸಿದನು. ಭೂಪ್ರದಕ್ಷಿಣ ಮಾಡಿದವರು, ಈ ಭೂಮಿಯು ಸೂರ್ಯಚಂದ್ರಾದಿಗಳಂತೆ ಆಕಾಶದಲ್ಲಿರುವುದೆಂಬುದಾಗಿಯೂ ಇದಕ್ಕೆ ಆಧಾರವೇನೂ ಇಲ್ಲವೆಂಬುದಾಗಿಯೂ ಹೇಳಿದ ವಿಷಯವು ಈತನಿಗೆ ಗೊತ್ತಾಯಿತು. ಆಮೇಲೆ, ಹೀಗಿರುವುದಕ್ಕೆ ಕಾರಣವೇನೆಂಬು ದಾಗಿ ಪರ್ಯಾಲೋಚಿಸಿದನು. ಬಳಿಕ, ನಿರಾಧಾರವಾದ ಪದಾರ್ಥಗಳೆ ಲ್ಲವೂ ಸಕಲಪ್ರದೇಶಗಳಲ್ಲಿಯೂ ಆಕಾಶದಿಂದ ಭೂಮಿಗೆ ಬೀಳುತಿರುವು ದನ್ನು ನೋಡಿ, ಇದಕ್ಕೆ ಕಾರಣವೇನೆಂದು ವಿಚಾರಮಾಡುತ್ತಿದ್ದನು. ಇಂಥ ವಿಚಾರಗಳನ್ನು ಅನೇಕರು ಮಾಡಿ ಇದು ತಿಳಿಯತಕ್ಕುದಲ್ಲವೆಂದು ಬಿಟ್ಟುಬಿಡುವುದುಂಟು. ಆದರೆ, ಇವನು ಬೇಸರಪಡದೆ, ವಿರಾಮಕಾಲ

ಗಳಲ್ಲೆಲ್ಲ ಈ ವಿಷಯವನ್ನು ಪರ್ಯಾಲೋಚಿಸುತ್ತಿದ್ದನು. ಒಂದಾನೊಂದು ದಿವಸ ಸೇಬಿನಗಿಡದ ಕೆಳಗೆ ಯೋಚಿಸುತ್ತ ಮಲಗಿರುವಾಗ, ಒಂದು ಸೇಬಿನಹಣ್ಣು ಗಿಡದಿಂದ ಇವನಮೇಲೆ ಬಿದ್ದಿತು. ಆಗ ಅದು ಬಿದ್ದುದಕ್ಕೆ ಕಾರಣವನ್ನು ಪರ್ಯಾಲೋಚಿಸಲುಪಕ್ರಮಮಾಡಿದನು ; ಕೂಡಲೆ ವಾಸ್ತವಾಂಶ ಗೊತ್ತಾಯಿತು. ಈ ಭೂಮಿಯಲ್ಲಿ ಪ್ರತಿಯೊಂದು ವಸ್ತುವಿಗೂ ಆಕರ್ಷಣಶಕ್ತಿಯಿರುವುದು. ಈ ಶಕ್ತಿಯು ವಸ್ತುಗಳ ಗಾತ್ರಕ್ಕೂ ತೂಕಕ್ಕೂ ಅನುಸಾರವಾಗಿರುವುದು. ಅಣುವಿನಲ್ಲಿ ಅಣುವಿನಷ್ಟು ಶಕ್ತಿಯೂ, ಭೂಮಂಡಲದಲ್ಲಿ ಭೂಮಂಡಲದಷ್ಟು ಶಕ್ತಿಯೂ ಇರುವುದು. ಅಣು ಮೊದಲಾದ ಚಿಕ್ಕ ಪದಾರ್ಥಗಳು ಭೂಮಿಯನ್ನು ಆಕರ್ಷಿಸುವುವು ; ಭೂಮಿಯೂ ಆ ಪದಾರ್ಥಗಳನ್ನು ಆಕರ್ಷಿಸುವುದು. ಭೂಮಿಯ ಆಕರ್ಷಣಶಕ್ತಿ ಬಹಳ ಪ್ರಬಲವಾದುದರಿಂದ, ಪದಾರ್ಥಗಳು ಭೂಮಿಯಕಡೆಗೆ ಬೀಳುವುವು. ಭೂಮಿ ಮೊದಲಾದ ಗ್ರಹಗಳೂ, ಸೂರ್ಯ ಮೊದಲಾದ ನಕ್ಷತ್ರಗಳೂ ಪರಸ್ಪರ ಆಕರ್ಷಣಶಕ್ತಿಯಿಂದ ತಮ್ಮತಮ್ಮ ಮಾರ್ಗಗಳಲ್ಲಿ ಸಂಚಾರಮಾಡುತ್ತಿರುವುವು. ಅವುಗಳಲ್ಲಿಯೂ ಒಂದರ ಆಕರ್ಷಣಶಕ್ತಿ ಮತ್ತೊಂದರ ಶಕ್ತಿಗಿಂತ ಹೆಚ್ಚಾದರೆ, ಹೆಚ್ಚಾದ ಆಕರ್ಷಣಶಕ್ತಿಯುಳ್ಳವುಗಳಲ್ಲಿ, ಕಡಮೆಯಾದ ಶಕ್ತಿಯುಳ್ಳವುಗಳು ಐಕ್ಯಹೊಂದುವುವು. ಈ ವಿಷಯಗಳೆಲ್ಲವೂ, ಏಕಾಗ್ರವಾಗಿ ಯೋಚನೆಮಾಡಿದುದರಿಂದ ಆಗ ನ್ಯೂಟನ್ನಿಗೆ ಗೊತ್ತಾದುವು.

ವಿಚಾರಮಾಡುವುದರಿಂದ, ತಿಳಿಯದಿರತಕ್ಕ ಅನೇಕ ವಿಷಯಗಳು ತಿಳಿಯುತ್ತವೆ; ಅನೇಕ ಭಾಗಗಳಲ್ಲಿ ಅಜ್ಞಾನಪರಿಹಾರವಾಗುತ್ತದೆ;

ವಸ್ತುತತ್ವಜ್ಞಾನವುಂಟಾಗುತ್ತದೆ. ಪೂರ್ವಕಾಲದಲ್ಲಿ ಸೂರ್ಯ ಚಂದ್ರ ನಕ್ಷತ್ರ ಮೊದಲಾದುವುಗಳೆಲ್ಲ ಆಕಾಶದಲ್ಲಿಡಲ್ಪಟ್ಟಿರುವ ದೀಪಗಳೆಂದು ಭಾವಿಸಲ್ಪಟ್ಟಿದ್ದುವು ಈಗ ಅವುಗಳು ನಕ್ಷತ್ರಗಳೆಂದೂ ಗ್ರಹಗಳೆಂದೂ ಗೊತ್ತಾಗುವುದಕ್ಕೂ, ಪ್ರತಿಯೊಂದು ನಕ್ಷತ್ರದ ಜ್ವಾಲೆಯೂ ಲಕ್ಷಾಂತರಮೈಲಿಗಳ ವಿಸ್ತೀರ್ಣವುಳ್ಳದಾಗಿದೆಯೆಂದು ಗೊತ್ತಾಗುವುದಕ್ಕೂ ಉಪಕ್ರಮವಾಗಿದೆ. ವಿಚಾರದಿಂದ ಗೊತ್ತಾಗದಿರತಕ್ಕ ವಿಷಯವೇ ಅಪೂರ್ವ. ಬುದ್ಧಿಶಾಲಿಗಳಾದವರು, ವಿಚಾರಮಾಡುವುದರಲ್ಲಿ ಬದ್ಧಾದರರಾಗಬೇಕು. ವಿಚಾರಪರತೆಗಿಂತ, ಜ್ಞಾನಾರ್ಜನೆಗೆ ಹೆಚ್ಚಾಗಿ ಸಾಧಕವಾದುದು ಯಾವುದೂ ಇಲ್ಲ. ವಿಚಾರವು ಮುಖ್ಯವಾದ ಸಮಸ್ತವಿಷಯಗಳಲ್ಲಿಯೂ ಸರಿಯಾದ ಮಾರ್ಗದರ್ಶನಕ್ಕೆ ಅತ್ಯಂತಸಾಧಕವಾದುದು. ಇಷ್ಟಾರ್ಥಸಿದ್ಧಿಯಲ್ಲಿ ಅಪೇಕ್ಷೆಯುಳ್ಳವರು, ದೊಡ್ಡ ವಿಷಯಗಳನ್ನು ಪ್ರಾರಂಭಿಸುವುದಕ್ಕೆ ಮುಂಚೆಯೇ, ಅವುಗಳ ಗುಣದೋಷಗಳನ್ನೂ ಪರಿಣಾಮಫಲವನ್ನೂ ವಿಚಾರಮಾಡದೆ ಎಂದಿಗೂ ಉಪಕ್ರಮಮಾಡಬಾರದು.

ನಮ್ಮ ಜನ್ಮಕ್ಕೆ ಕಾರಣಭೂತರಾದವರು, ತಾಯಿತಂದೆಗಳು. ಜನ್ಮವನ್ನೆತ್ತಿದಾಗ, ನಮ್ಮ ಯೋಗಕ್ಷೇಮಚಿಂತೆಯ ವಿಷಯದಲ್ಲಿ ನಮಗೆ ಯಾವ ಶಕ್ತಿಯೂ ಇರುವುದಿಲ್ಲ. ತಾಯಿತಂದೆಗಳು ಅತ್ಯಂತಜಾಗರೂಕತೆಯಿಂದ ನಮ್ಮನ್ನು ನೋಡಿಕೊಳ್ಳದಿದ್ದರೆ, ನಾವು ರೋಗಾದಿಗಳಿಗೂ ಅಕಾಲಮರಣಕ್ಕೂ ಗುರಿಯಾಗದಿರುವುದಿಲ್ಲ. ತಂದೆಗಿಂತಲೂ ತಾಯಿಯು ನಮಗೋಸ್ಕರ ಬಹಳಕಷ್ಟಪಡುತ್ತಾಳೆ. ಆ ಕಷ್ಟವು ಅನಿರ್ವಚನೀಯವಾದುದು. ನಾವು ತಾಯಿಯಲ್ಲಿ ಎಷ್ಟು ಭಕ್ತಿಯನ್ನೂ ಪ್ರೀತಿಯನ್ನೂ

ತೋರಿಸಿದರೂ, ಅವಳ ಸೇವೆಯನ್ನು ಎಷ್ಟು ಅಕೃತ್ರಿಮವಾದ ಪ್ರೀತಿಯಿಂದ ಮಾಡಿದರೂ, ನಮ್ಮನ್ನುದ್ಧರಿಸುವುದರಲ್ಲಿ ಅವಳು ಪಟ್ಟ ಕಷ್ಟಕ್ಕೆ ಏಕದೇಶಪ್ರತಿಫಲವನ್ನೂ ನಾವು ಕೊಡಲಾರೆವು. ಈ ಕಾರಣದಿಂದಲೇ, ನಮ್ಮ ಹಿರಿಯರು, ಜನಗಳಿಗೆ ತಾಯಿಗಿಂತ ಬೇರೆ ದೇವರಿಲ್ಲವೆಂದು ಹೇಳುವರು. ಇದು ನಿಜವಾದ ಮಾತು. ಯಾರು ತಾಯಿಯನ್ನು ದೇವರಂತೆ ಭಾವಿಸಿ, ಅವಳ ಮನಸ್ಸಿಗೆ ಲೇಶವೂ ಅಸಮಾಧಾನವನ್ನುಂಟುಮಾಡದಂತೆ ನಡೆದುಕೊಳ್ಳುವರೋ, ಅವರಿಗೆ ಇಹಪರಸೌಖ್ಯಗಳೆರಡೂ ದೊರೆಯುವುವು. ತಾಯಿಗೆ ಅಸಮಾಧಾನವನ್ನು ಮಾಡಿ ಮನಸ್ಸನ್ನು ನೋಯಿಸತಕ್ಕವರು, ಕೃತಘ್ನರಲ್ಲಿ ಶಿರೋಮಣಿಗಳೆಂದು ಭಾವಿಸಲ್ಪಡುವರು. ಇಂಥ ಕೃತಘ್ನತೆಗೆ ಶಿಕ್ಷೆ ತಪ್ಪುವುದಿಲ್ಲ. ಅಂಥ ಜನಗಳಿಗೆ ಇಹಪರಗಳೆರಡೂ ನಷ್ಟವಾಗುವುದರಲ್ಲಿ ಸಂದೇಹವಿಲ್ಲ. ಸರ್ವಸಂಗಪರಿತ್ಯಾಗವನ್ನು ವಹಿಸಿದವರೂ ಕೂಡ, ತಂದೆಯ ನಮಸ್ಕಾರಕ್ಕೆ ಪಾತ್ರರಾದಾಗ್ಯೂ, ತಾವು ತಮ್ಮ ತಾಯಿಗೆ ನಮಸ್ಕಾರಮಾಡಬೇಕೆಂದು, ಶಾಸ್ತ್ರವಿರುವುದು. ಈ ವಿಷಯವನ್ನು ಸರ್ವರೂ ಸರ್ವದಾ ಮನಸ್ಸಿನಲ್ಲಿಟ್ಟುಗೊಂಡು, ತಾಯಿತಂದೆಗಳ ವಿಷಯದಲ್ಲಿ ಅಕೃತ್ರಿಮವಾದ ಭಕ್ತಿಯಿಂದಲೂ ಪ್ರೀತಿಯಿಂದಲೂ ನಡೆದುಕೊಳ್ಳಬೇಕು. ತಾಯಿಯ ಮನಸ್ಸಿಗೆ ಕ್ಲೇಶವನ್ನುಂಟುಮಾಡತಕ್ಕವರು, ಎಂದಿಗೂ ಕೃತಕೃತ್ಯರಾಗುವುದಿಲ್ಲ.

ಬಾಲ್ಯದಲ್ಲಿ ಪ್ರತಿಯೊಬ್ಬರಿಗೂ ಪರಿಚಯಸ್ಥರೂ, ಜತೆಗಾರರೂ, ಸಹಾಧ್ಯಾಯಿಗಳೂ, ಸ್ನೇಹಿತರೂ ದೊರೆಯುವರು. ಪರಿಚಯವೂ, ಸಹವಾಸವೂ, ಕ್ರಮಕ್ರಮವಾಗಿ ಸ್ನೇಹಕ್ಕೆ ಅವಕಾಶಮಾಡುವುವು. ಹೀಗೆ

ಮಾಡಿದರೂ, ನಿಸರ್ಗಜನ್ಯವಾಗಿಯೂ ಅಕೃತ್ರಿಮವಾಗಿಯೂ ಇರತಕ್ಕ ಸ್ನೇಹವು, ಕೇವಲಧರ್ಮಿಷ್ಠರಲ್ಲಿ ವಿನಾ ಇತರರಲ್ಲಿ ದೊರೆಯುವುದಿಲ್ಲ. ನಿಜವಾದ ಸ್ನೇಹಿತನು ದೊರೆಯುವುದು ಕಷ್ಟ. ಒಂದುವೇಳೆ ದೊರೆತಾಗ್ಯೂ, ಅಂಥ ಸ್ನೇಹವು ಶಾಶ್ವತವಾಗಿರುವಂತೆ ಮಾಡಿಕೊಳ್ಳುವುದು ಇನ್ನೂ ಕಷ್ಟ. ಸುಖವಾಗಿ ಲಬ್ಧವಾದ ಸ್ನೇಹವು ಸುಖವಾಗಿ ಹೋಗುವುದೂ ಉಂಟು. ಆಪ್ತವಾದ ಸ್ನೇಹವನ್ನು ಮಾಡಿಕೊಳ್ಳುವುದಕ್ಕೆ ಮುಂಚೆ, ಅಂಥ ಸ್ನೇಹಕ್ಕೆ ಉದ್ದಿಷ್ಟನಾದ ಮನುಷ್ಯನು ಅರ್ಹನೇ ಅಲ್ಲನೇ ಎಂಬುದನ್ನು ಪರೀಕ್ಷಿಸಬೇಕು. ನಂಬುಗೆಗೆ ಪಾತ್ರರಾದ ಹೊರತು, ಜನಗಳು ಆಪ್ತಸ್ನೇಹಿತರಾಗುವುದಕ್ಕೂ, ಒಬ್ಬರ ರಹಸ್ಯಗಳನ್ನು ಮತ್ತೊಬ್ಬರು ತಿಳಿದುಕೊಳ್ಳುವುದಕ್ಕೂ ಅರ್ಹರಾಗುವುದಿಲ್ಲ ಸ್ನೇಹಿತರ ಗುಣದೋಷಗಳಿಗೆ ಸ್ನೇಹಿತರೆಲ್ಲರೂ ಪರಸ್ಪರ ಉತ್ತರವಾದಿಗಳಾಗಬೇಕಾಗುತ್ತದೆ. ಯಾರ ಸಹವಾಸದಲ್ಲಿ ನಾವು ಇರುತ್ತೇವೋ, ಅವರ ಗುಣದೋಷಗಳೆಲ್ಲ ನಮ್ಮಲ್ಲೂ ಇರುವುವೆಂದು ಜನಗಳು ತಿಳಿದುಕೊಳ್ಳುತ್ತಾರೆ. ಮನೋವಾಕ್ಕರ್ಮಗಳಲ್ಲಿ ಧರ್ಮದಿಂದ ನಡೆಯತಕ್ಕವರ ಸಹವಾಸದಲ್ಲಿ ನಾವಿದ್ದಗೆ, ನಾವು ಧರ್ಮಿಷ್ಠರೆಂದು ಭಾವಿಸಲ್ಪಡುತ್ತೇವೆ. ಮನೋವಾಕ್ಕರ್ಮಗಳಲ್ಲಿ ಒಂದೊಂದುವಿಧವಾಗಿದ್ದುಗೊಂಡು, ಸುಳ್ಳು ತಟವಟ ಮೋಸ ಅಭಕ್ಷ್ಯಭೋಜನ ಅಪೇಯಪಾನ ಅಗಮ್ಯಾಗಮನ- ಮೊದಲಾದುವುಗಳಲ್ಲಿ ಮುಳುಗಿತೇಲುತಿರತಕ್ಕ ಮನುಷ್ಯರ ಸಹವಾಸದಲ್ಲಿ ನಾವಿದ್ದರೆ, ಈ ದೋಷಗಳೆಲ್ಲ ನಮ್ಮಲ್ಲಿಯೂ ಇರುವುವೆಂದು ಭಾವನೆ ಉಂಟಾಗುತ್ತದೆ. ಹಾಗೆ ಉಂಟಾಗತಕ್ಕದು ಆಶ್ಚರ್ಯವಲ್ಲ. ಆ ದೋಷ

ಗಳು ನಮ್ಮಲ್ಲಿಲ್ಲದಿದ್ದರೆ, ಅಂಥವರ ಸಹವಾಸವು ಒಂದು ಕ್ಷಣವೂ ನಮಗೆ ರುಚಿಸುವುದಿಲ್ಲ. ಜನಗಳಲ್ಲಿ ಜಾತಿಭೇದಗಳು ಹುಟ್ಟುವುದಕ್ಕೆ ಈ ದೋಷ ಗಳೇ ಮುಖ್ಯಕಾರಣವು. ನಿಂದ್ಯವಾದ ಆಹಾರವಿಹಾರಗಳಲ್ಲಿ ಆಸಕ್ತ ರಾದವರಿಗೂ, ಅವುಗಳಲ್ಲಿ ಆಸಕ್ತರಾಗದಿರತಕ್ಕವರಿಗೂ, ಸಹವಾಸವೂ ಕೂಡ ಅಸಾಧ್ಯವಾಗುವುದು ; ಪರಸ್ಪರ ತಿರಸ್ಕಾರವೂ ಹುಟ್ಟುವುದು ; ತಿರಸ್ಕಾರವು ದ್ವೇಷವಾಗಿ ಪರಿಣಮಿಸುವುದು. ಜಾತಿದ್ವೇಷ ಮತದ್ವೇಷ ಗಳಿಗೆ ಇದೇ ಮುಖ್ಯಕಾರಣವು. ಸಜ್ಜನರಾಗಿಯೂ ಧರ್ಮಿಷ್ಠರಾಗಿಯೂ ಇರತಕ್ಕವರ ಸ್ನೇಹವು, ಮರಣಾವಧಿ ಒಂದೇವಿಧವಾಗಿರುವುದು. ಧರ್ಮ ಹೀನರಾಗಿಯೂ ದುರ್ಮಾರ್ಗಪ್ರವೃತ್ತರಾಗಿಯೂ ಇಂತಕ್ಕವರಿಗೂ ಸ್ನೇಹ ವಿರುವುದುಂಟು. ಈ ಸ್ನೇಹವು ಶಾಶ್ವತವಾದುದಲ್ಲ ; ಇದಕ್ಕೆ ಪ್ರತಿ ಬಂಧಕ ಬರುವುದುಂಟು. ಮಧುರವಾದ ವಾಕ್ಕಿನಿಂದ ವಿಶೇಷವಾಗಿ ಸ್ನೇಹಿತರಾಗುವರು. ಆದರೆ, ಅವರೆಲ್ಲರೂ ನಿಜವಾದ ಸ್ನೇಹಿತರಾಗಿ ಪರಿಣಮಿಸುವುದಿಲ್ಲ. ಸಾವಿರಜನರಲ್ಲಿ ಒಬ್ಬನಾದರೂ ಆಪ್ತಸ್ನೇಹಿತನು ಸಿಕ್ಕುವುದು ಕಷ್ಟ. ಕಷ್ಟಕಾಲದಲ್ಲಿ ಸ್ನೇಹದ ಸ್ವಭಾವ ಗೊತ್ತಾ ಗುವುದು.

ಡೇಮನ್ ಮತ್ತು ಪಿಥಿಯಾಸ್ ಎಂಬ ಇಬ್ಬರು ಸ್ನೇಹಿತರು, ಸಿಸಿಲೀ ದ್ವೀಪದಲ್ಲಿದ್ದರು. ಇವರ ಕಾಲದಲ್ಲಿ, ಡಯೋನಿಸಿಸ್ ಎಂಬ ಹೆಸರುಳ್ಳ ನಿರಂಕುಶಪ್ರವರ್ತಕನಾದ ಒಬ್ಬ ದೊರೆಯು ಆ ದ್ವೀಪದಲ್ಲಿ ಪ್ರಭುತ್ವಮಾ ಡುತ್ತಿದ್ದನು. ಈ ಸ್ನೇಹಿತರಿಬ್ಬರೂ ಧರ್ಮಮಾರ್ಗೈಕಪರಾಯಣರಾಗಿ ದ್ದರು. ಇವರಿಬ್ಬರೂ, ಮನೋವಾಕ್ಕರ್ಮಗಳಲ್ಲಿಯೂ ಅಧರ್ಮಪ್ರವರ್ತನೆಗೆ

ಲೇಶವೂ ಅವಕಾಶವನ್ನು ಕೊಡುತ್ತಿರಲಿಲ್ಲ. ಇವರ ಗುಣಾತಿಶಯ ಗಳನ್ನು ಹೋಲಿಸುವಾಗ, ಇವರಲ್ಲಿ ಒಬ್ಬರಿಗೊಬ್ಬರನ್ನು ಹೋಲಿಸಬೇಕಾ ಗಿತ್ತೇ ಹೊರತು, ಇವರ ಜತೆಯಲ್ಲಿ ಹೋಲಿಸುವುದಕ್ಕೆ ಬೇರೆಜನಗಳು ಸಿಕ್ಕುತಿರಲಿಲ್ಲ. ಒಂದಾನೊಂದುದಿವಸ, ಡಯೋನಿಸೆಸ್ ಎಂಬ ಪ್ರಭುವಿನ ನಿರಂಕುಶಪ್ರವರ್ತನದಿಂದ ಪ್ರಜೆಗಳಿಗೆ ಉಂಟಾದ ಅನಿರ್ವಚನೀಯವಾದ ಕಷ್ಟಗಳನ್ನು, ಡೇಮನ್ ಎಂಬವನು ಉದ್ಘಾಟಿಸಿದನು. ಆ ಪ್ರಭುವಿಗೆ ಇವನ ವಿಷಯದಲ್ಲಿ ದುರಾಗ್ರಹವುಂಟಾಯಿತು. ಇವನನ್ನು ಹಿಡತರಿಸಿ "ನಿನಗೆ ಮರಣದಂಡನೆಯನ್ನು ಮಾಡಿರುತ್ತೇನೆ; ಶಿರಶ್ಛೇದನನ್ನು ಮಾಡಿ ಸಿಕೊಳ್ಳುವುದಕ್ಕೆ ಸಿದ್ಧನಾಗು." ಎಂದು ಹೇಳಿದನು. ಆಗ ಇವನು "ನನ್ನ ಹೆಂಡತಿ ಮಕ್ಕಳು ದ್ವೀಪಾಂತರದಲ್ಲಿರುತ್ತಾರೆ. ಮೂರ ದಿವಸ ಅವಧಿಯನ್ನು ಕೊಟ್ಟರೆ, ನಾನು ಹೋಗಿ ನನ್ನ ಗೃಹಕೃತ್ಯಗಳನ್ನೆಲ್ಲ ಕ್ರಮ ಪಡಿಸಿ ಬರುತ್ತೇನೆ; ಅನಂತರ ಶಿರಶ್ಛೇದವನ್ನು ಮಾಡಬಹುದು." ಎಂದು ಪ್ರಾರ್ಥಿಸಿದನು. ಅದಕ್ಕೆ ಡಯೋನಿಸೆಸ್ ರಾಜನು "ಕ್ಲುಪ್ತವಾದ ಕಾಲಕ್ಕೆ ಸರಿಯಾಗಿ ನೀನು ಬಾರದಿದ್ದರೆ ನಿನಗೆ ಬದುಲಾಗಿ ಶಿರಶ್ಛೇದ ಮಾಡಿಸಿಕೊಳ್ಳುತ್ತೇನೆಂದು ಒಪ್ಪತಕ್ಕ ಒಬ್ಬನನ್ನು ಜಾಮೀನಾಗಿ ತಂದು ಕೊಟ್ಟರೆ, ಮೂರುದಿವಸ ಅವಧಿ ಕೊಡಲ್ಪಡುವುದು." ಎಂದು ಹೇಳಿ ದನು. ಅಂಥ ಜನಗಳು ಸಿಕ್ಕುವುದು ಅಸಾಧ್ಯವೆಂದು ಭಾವಿಸಿ, ಡೇಮನ್ ಎಂಬವನು, ದೊರೆಯನ್ನು ಕುರಿತು "ಅಂಥ ಜಾಮೀನುದಾರರು ನನಗೆ ಸಿಕ್ಕುವುದಿಲ್ಲ. ನಿನ್ನ ಇಷ್ಟವಿದ್ದಂತೆ ಮಾಡಿಕೋ." ಎಂದು ಹೇಳಿದನು. ಅವನ ಶಿರಶ್ಛೇದವನ್ನು ಮಾಡಿ ಅವನ ತಲೆಯನ್ನು ತಂದು ತೋರಿಸಬೇ

ಕೆಂದು ಆಜ್ಞೆಮಾಡಿ ದೊರೆಯು ಹೊರಟುಹೋಗುತ್ತಿರಲು, ಪಿಥಿಯಾಸೆಂಬವನು, ಪ್ರಭುವಿನ ಬಳಿಗೆ ಬಂದು “ಮಹಾಸ್ವಾಮಿ! ಮೂರುದಿವಸಗಳೊಳಗಾಗಿ ಡೇಮನ್ ಎಂಬವನು ಬಾರದಿದ್ದರೆ, ಅವನಿಗೆ ಬದುಲಾಗಿ ಶಿರಶ್ಛೇದವನ್ನು ಮಾಡಿಸಿಕೊಳ್ಳುವುದಕ್ಕೆ ನಾನು ಒಪ್ಪುತ್ತೇನೆ; ನನ್ನ ಜಾಮೀನಿನಮೇಲೆ ಇವನನ್ನು ಬಿಡಬೇಕು.” ಎಂದು ಪ್ರಾರ್ಥಿಸಿದನು. ಈ ಜಾಮೀನುದಾರನನ್ನು ನೋಡಿ ಆಶ್ಚರ್ಯಪಟ್ಟು, ದೊರೆಯು ಪಿಥಿಯಾಸನನು ಜೈಲಿನಲ್ಲಿಟ್ಟು ನೋಡಿಕೊಳ್ಳುವುದಾಗಿ ಆಜ್ಞೆಮಾಡಿ, ಡೇಮನ್ನನಿಗೆ “ನಿನ್ನ ದ್ವೀಪಕ್ಕೆ ಹೋಗಿ, ನಿನ್ನ ಗೃಹಕೃತ್ಯಗಳನ್ನು ವ್ಯವಸ್ಥೆಮಾಡಿಕೊಂಡು ಬರಬಹುದು.” ಎಂದು ಆಜ್ಞೆಯನ್ನು ಕೊಟ್ಟನು. ಮೂರು ದಿವಸಗಳು ಕಳೆದುವು. ಡೇಮನ್ನನು ತನ್ನ ಗೃಹಕೃತ್ಯಗಳನ್ನೆಲ್ಲ ವ್ಯವಸ್ಥೆಮಾಡಿ, ಕಾಲಕ್ಕೆ ಸರಿಯಾಗಿ ಬರುವುದಕ್ಕೋಸ್ಕರ ಹಡಗನ್ನು ಹತ್ತಿದನು. ಪ್ರತಿಕೂಲವಾದ ವಾಯು ಬೀಸುವುದಕ್ಕುಪಕ್ರಮವಾಯಿತು. ಅದ್ಭುತವಾದ ಪ್ರಯತ್ನಗಳನ್ನು ಮಾಡಿಸಿ, ಸಿಸಲೀದ್ವೀಪದ ರಾಜಧಾನಿಯಾದ ಸಿರಕ್ಯೂಸ್ ಪಟ್ಟಣಕ್ಕೆ ಬಂದನು. ಆದರೆ, ಅವನು ಬರುವುದಕ್ಕೆ ಒಂದು ಗಳಿಗೆ ಸಾವಕಾಶವಾಯಿತು. ಅಷ್ಟರಲ್ಲಿಯೇ ಡಯೋನಿಸಿಸ್ಸನು ಜೈಲಿಗೆ ಹೋಗಿ, ಪಿಥಿಯಾಸನನ್ನು ನೋಡಿ “ನೀನು ಬುದ್ಧಿಯಿಲ್ಲದೆ ಜಾಮೀನಾದೆ. ಡೇಮನ್ನನು ಬರಲಿಲ್ಲ. ಶಿರಶ್ಛೇದನವನ್ನು ಮಾಡಿಸಿಕೊಳ್ಳುವುದಕ್ಕೆ ಸಿದ್ಧನಾಗು. ವಿವೇಕವಿಲ್ಲದೆ ಜಾಮೀನಾದುದಕ್ಕೆ ಇದೇ ಫಲ.” ಎಂದು ಹೇಳಿದನು. ಪಿಥಿಯಾಸೆಂಬವನ ಮನೋಭಾವವು ವಿಚಿತ್ರವಾಗಿದ್ದಿತು. ಅವನು ತನ್ನ ಮನಸ್ಸಿನಲ್ಲಿ “ಡೇಮನ್ನನು ಅತಿಪ್ರಾಮಾಣಿಕನು; ಅವನು

ತನ್ನ ಮಾತಿನಂತೆ ನಡೆಯುವುದಕ್ಕೆ ಪ್ರಯತ್ನಮಾಡಿದ್ದಾನೆ. ಸರಿಯಾದ ಕಾಲಕ್ಕೆ ಬರುವುದಕ್ಕೆ ಏನೋ ಒಂದು ಅನಿರ್ವಚನೀಯವಾದ ವಿಘ್ನ ಬಂದಿರಬೇಕು. ಹಾಗಿಲ್ಲದಿದ್ದರೆ ಇಷ್ಟು ಹೊತ್ತಿಗೆ ಅವನು ಇಲ್ಲಿರುತಿದ್ದನು. ಈ ವಿಘ್ನವು ದೈವಿಕವಾಗಿರಬಹುದು. ಡೇಮನ್ನನು ಸಕಲಶಾಸ್ತ್ರವಿಶಾರದನು; ಸಕಲ ಧರ್ಮಗಳೂ ಇವನ ಆಚರಣೆಯಲ್ಲಿರುವುವು; ಇವನು ಲೋಕಹಿತೈಷಿ; ಇವನು ಮಹಾಜನಗಳ ಭಾಗ್ಯಸ್ವರೂಪನು; ಇವನು ಬದುಕಿದ್ದರೆ ಲೋಕದಲ್ಲಿ ಧರ್ಮವು ರೂಢಮೂಲವಾಗುವುದು. ಇನ್ನು ಸಾವಕಾಶಮಾಡಿದರೆ, ಅವನು ಬಂದುಬಿಡುವನು ಅವನ ಶಿರಶ್ಛೇದನನ್ನು ಮಾಡಿದರೆ, ಧರ್ಮಕ್ಕೇ ಶಿರಶ್ಛೇದಮಾಡಿದಂತಾಗುವುದು. ದೈವಯೋಗದಿಂದ ಇವನಿಗೆ ಬದುಲಾಗಿ ದೇಹವನ್ನು ಒಪ್ಪಿಸುವ ಭಾಗ್ಯವು ನನಗೆ ಉಂಟಾಯಿತು.'' ಎಂದು ಭಾವಿಸಿ, ದೊರೆಯನ್ನು ಕುರಿತು ''ಮಹಾಸ್ವಾಮಿ! ಸಾವಕಾಶಮಾಡಕೂಡದು; ನನ್ನ ಜಾಮೀನಿಗನು ಸಾರವಾಗಿ ನನ್ನ ಶಿರಶ್ಛೇದವನ್ನು ಮಾಡುವುದಕ್ಕೆ ಜಾಗ್ರತೆಮಾಡಬೇಕು. ಆಲಸ್ಯದಿಂದ ಅಮೃತವೂ ವಿಷವಾಗುವುದು. ಕೃಪೆಯಿಟ್ಟು ನನ್ನ ಶಿರಶ್ಛೇದ ಮಾಡುವುದಕ್ಕೆ ಆಜ್ಞೆಮಾಡಬೇಕು.'' ಎಂದು ಪ್ರಾರ್ಥಿಸಿದನು. ದೇಹವನ್ನು ಬಿಡತಕ್ಕ ವಿಷಯದಲ್ಲಿ ಪಿಥಿಯಾಸ್ ಎಂಬವನು ಇಷ್ಟು ಸಂತೋಷವುಳ್ಳವನಾಗಿಯೂ ಶ್ರದ್ಧೆಯುಳ್ಳವನಾಗಿಯೂ ಇರುವುದನ್ನು ನೋಡಿ, ಡಯೋನಿಸಿಸನು ಆಶ್ಚರ್ಯಪಟ್ಟು, ಅವನ ಶಿರಶ್ಛೇದವನ್ನು ಮಾಡುವುದಕ್ಕೆ ಆಜ್ಞೆಯನ್ನು ಮಾಡಿದನು. ಜೈಲಿನಿಂದ ಅವನನ್ನು ಬೈಲಿಗೆ ಕರೆದುಕೊಂಡು ಬಂದರು. ಇವನ ಶಿರಶ್ಛೇದವನ್ನು ಮಾಡುತಾರೆಂದು ಕೇಳಿ, ಬಹು ಜನ

ಗಳು ಬಂದು, ಕಣ್ಣೀರುಹಾಕುತ್ತ, ಡೇಮನ್ನನನ್ನು ನಿಂದಿಸುತ್ತ, ಏಕಾಂತ ದಲ್ಲಿ ಡಯೋನಿಸೆಸ್ಸನ್ನು ಶಪಿಸುತಿದ್ದರು. ಕಟುಗನು ಪಿಥಿಯಾಸನ ಶಿರಶ್ಛೇದನವನ್ನು ಮಾಡುವುದಕ್ಕೆ ಕತ್ತಿಯನ್ನು ಒರೆಯಿಂದ ತೆಗೆಯುವುದರಲ್ಲಿ ದ್ದನು. ಆ ಸಮಯಕ್ಕೆ ಸರಿಯಾಗಿ "ನಿಲ್ಲು! ನಿಲ್ಲು!! ಶಿರಶ್ಛೇದ ಮಾಡಬೇಡ!!!" ಎಂದು ಗಟ್ಟಿಯಾಗಿ ಕೂಗುತ್ತ, ಬಹಳ ವೇಗವಾಗಿ ಕುದುರೆಯನ್ನು ಬಿಟ್ಟುಕೊಂಡು, ಒಬ್ಬ ಮನುಷ್ಯನು ಬಂದನು. ಅಲ್ಲಿದ್ದ ಜನಗಳೆಲ್ಲರೂ "ನಿಲ್ಲು! ನಿಲ್ಲು!" ಎಂದು ಕೂಗಿಕೊಂಡರು. ಒರೆ ಯಿಂದ ಕತ್ತಿಯನ್ನು ಹಿರಿದಿದ್ದ ಕಟುಗನು, ಭ್ರಾಂತನಾಗಿ ಸುಮ್ಮನೆ ನಿಂತುಕೊಂಡನು. ಹೀಗೆ ಕೂಗಿಕೊಂಡು ಅತ್ಯಂತ ವೇಗವಾಗಿ ಬಂದವನೇ ಡೇಮನ್ನನು. ವಧಸ್ಥಾನಕ್ಕೆ ಬಂದು ಕುದುರೆಯಿಂದಿಳಿದು ದೇವರನ್ನು ವಂದಿಸಿ, ಪಿಥಿಯಾಸನನ್ನು ನೋಡಿ "ಇನ್ನೊಂದು ನಿಮಿಷ ಆಲಸ್ಯವಾಗಿ ದ್ದರೆ ನಾನು ಪರಮದ್ರೋಹಿಯಾಗುತಿದ್ದೆನು. ಭಗವಂತನು ನನ್ನ ಧರ್ಮಕ್ಕೆ ಈ ದಿನ ಪ್ರತಿಫಲವನ್ನು ಕೊಟ್ಟನು. ನಾನು ಧನ್ಯನಾದೆನು." ಎಂದು ಹೇಳಿ, ಶಿರಶ್ಛೇದನಮಾಡಿಸಿಕೊಳ್ಳುವುದಕ್ಕೆ ತಾನು ಸಿದ್ಧನಾದನು. ಕೂಡಲೆ ಪಿಥಿಯಾಸನು ಪ್ರಭುವನ್ನೂ ಅಲ್ಲಿ ನೆರೆದಿದ್ದ ಮಹಾಜನಗಳನ್ನೂ ಕುರಿತು, ಹೀಗೆ ಹೇಳಿದನು:—"ಮಹಾಸ್ವಾಮಿಗಳೇ! ಮಹಾಜನಗಳೇ! ಜಾಮೀನುದಾರನಾದ ನನ್ನ ಶಿರಶ್ಛೇದನಕ್ಕೆ ಕಾಲವು ಕ್ಲೃಪ್ತಮಾಡಲ್ಪಟ್ಟಿ ದ್ದಿತು. ವಾಯಿದೆಗೆ ಸರಿಯಾಗಿ ಡೇಮನ್ನನು ಬರಲಿಲ್ಲ; ಇದು ಅವನ ತಪ್ಪಲ್ಲ; ಕೆಲವು ನಿಮಿಷಗಳು ಸಾವಕಾಶವಾಗುವುದಕ್ಕೆ ದೈವಿಕವಾದ ವಿಘ್ನವೇನೋ ಬಂದಿರಬೇಕು. ಕಾಲಕ್ಕೆ ಸರಿಯಾಗಿ ಬರಲಿಲ್ಲವೆಂದು, ಈ

ಮಹಾತ್ಮನನ್ನು ನಿಂದಿಸುವುದು ಧರ್ಮವಲ್ಲ. ಇವನು ಬದುಕಿದ್ದರೆ ನಮ್ಮ ದೇಶಕ್ಕೆಲ್ಲ ಅನಂತಪ್ರಕಾರವಾದ ಕಲ್ಯಾಣಗಳನ್ನು ಮಾಡಬಲ್ಲನು. ಅದರಿಂದಲೇ, ದೇವರು ಕಾಲಕ್ಕೆ ಸರಿಯಾಗಿ ಇವನು ಬಾರದಂತೆ ವಿಘ್ನವನ್ನು ಮಾಡಿರುವನು. ದೇವರ ಸಂಕಲ್ಪಕ್ಕೆ ಅನುಸಾರವಾಗಿ ನಡೆಯುವುದು ಪ್ರಭುವಿನ ಕರ್ತವ್ಯವು. ಅದಕ್ಕೆ ಒಪ್ಪಿ ತಮ್ಮ ಯೋಗಕ್ಷೇಮಚಿಂತೆಯನ್ನು ಮಾಡಿಕೊಳ್ಳತಕ್ಕದು ಪ್ರಜೆಗಳ ಕರ್ತವ್ಯವು ಕಾಲಕ್ಕೆ ಸರಿಯಾಗಿ ಡೇಮನ್ನನು ಬರುವುದಕ್ಕೆ ಆಗಲಿಲ್ಲ. ಶಿರಶ್ಛೇದವನ್ನು ಮಾಡಿಸಿಕೊಳ್ಳುವ ಹಕ್ಕು ನನ್ನದಾಗಿರುವುದು. ತಾವೆಲ್ಲರೂ ಅನುಗ್ರಹಿಸಿ, ಈ ಭಾಗ್ಯವನ್ನು ನನಗೆ ಕೊಟ್ಟು, ಡೇಮನ್ನನು ಜೀವಂತನಾಗಿದ್ದುಕೊಂಡು ತನ್ನ ಧರ್ಮದಿಂದ ಈ ದ್ವೀಪವನ್ನುದ್ಧರಿಸುವುದಕ್ಕೆ ಅವಕಾಶಕೊಡಬೇಕು.' ಎಂದು ಪ್ರಾರ್ಥಿಸಿದನು. ಇದನ್ನು ಕೇಳಿ, ಡೇಮನ್ನನು ದೊರೆಯ ಕಡೆಗೆ ತಿರುಗಿ ,,ಅಯ್ಯಾ! ಪ್ರಭುವೇ! ಕಾಲಕ್ಕೆ ಸರಿಯಾಗಿ ಶಿರಶ್ಛೇದಮಾಡಿಸಿಕೊಳ್ಳುವುದಕ್ಕೆ ನಾನು ಬಾರದಿದ್ದರೆ ತಾನು ಶಿರಶ್ಛೇದಮಾಡಿಸಿಕೊಳ್ಳುತ್ತೇನೆಂದು ಈತನು ಜಾಮೀನಾಗಿದ್ದನೇ ಹೊರತು, ನಾನು ಬಂದಾಗ್ಯೂ ನನಗೆ ಬದಲಾಗಿ ಶಿರಶ್ಛೇದ ಮಾಡಿಸಿಕೊಳ್ಳುವೆನೆಂದು ಈತನು ಹೇಳಿರಲಿಲ್ಲ; ಅದಕ್ಕೆ ನೀವೂ ಒಪ್ಪಲಿಲ್ಲ. ಪ್ರತಿಕೂಲವಾದ ವಾಯುವಿನದೆಸೆಯಿಂದ ನನ್ನ ಹಡಗು ಈ ದ್ವೀಪಕ್ಕೆ ಬರುವುದಕ್ಕೆ ಕೆಲವುನಿಮಿಷ ಸಾವಕಾಶವಾಯಿತು. ಆದಾಗ್ಯೂ, ದೈವಾನುಗ್ರಹದಿಂದಲೂ, ಈ ಕುದುರೆಯ ಸಹಾಯದಿಂದಲೂ, ಈ ನನ್ನ ಮಿತ್ರನ ಶಿರಶ್ಛೇದವಾಗುವುದಕ್ಕೆ ಮುಂಚೆಯೇ ನಾನು ಬಂದಿರುತ್ತೇನೆ. ನಾನು ಹಾಜರಾದಮೇಲೆ ಅವನ ಶಿರಶ್ಛೇದಮಾಡುವುದಕ್ಕೆ ಯಾವ ಕಾರಣವೂ

ಇರುವುದಿಲ್ಲ. ಹಾಗೆ ಮಾಡುವುದು ಅತ್ಯಂತ ಅಧರ್ಮವು. ಅವನ ಜಾಮೀ ನನ್ನು ಬಿಡುಗಡೆ ಮಾಡಿ, ನನ್ನಲ್ಲಿ ಕೃಪೆಯಿಟ್ಟು, ನನ್ನ ಶಿರಶ್ಛೇದವನ್ನು ಮಾಡುವಂತೆ ಆಜ್ಞೆಮಾಡಬೇಕು.'' ಎಂದು ಪ್ರಾರ್ಥಿಸಿದನು. ಇವರ ಸೌಜನ್ಯವನ್ನೂ, ಧರ್ಮಬುದ್ಧಿಯನ್ನೂ, ಒಬ್ಬರನ್ನು ರಕ್ಷಿಸುವುದಕೋಸ್ಕರ ಮತ್ತೊಬ್ಬರು ತಮ್ಮದೇಹವನ್ನೊಪ್ಪಿಸುವುದಕ್ಕೆ ಮಾಡಿದಪ್ರಯತ್ನಗಳನ್ನೂ, ಇವರ ಶೋಚನೀಯವಾದ ಸ್ಥಿತಿಯನ್ನೂ ನೋಡಿ, ಅತ್ಯಂತ ವ್ಯಸನದಿಂದ, ಮಹಾಜನಗಳು, ಕಣ್ಣೀರುಬಿಡುತ್ತ ಆಶ್ಚರ್ಯಪರವಶರಾದರು. ಇವುಗಳ ನ್ನೆಲ್ಲ ನೋಡಿ, ಡಯೋನಿಸೆಸ್ಸನು ಅತ್ಯಂತ ವಿಸ್ಮಿತನಾದನು. ಪರಮಾವಧಿ ದಶೆಯನ್ನು ಹೊಂದಿದ ಅವರ ಧರ್ಮಪ್ರವರ್ತನಕ್ಕೂ, ಅತ್ಯಂತ ಜಘನ್ಯವಾದ ತನ್ನ ನಿರಂಕುಶಪ್ರವರ್ತನಕ್ಕೂ ಇರತಕ್ಕ ತಾರತಮ್ಯವು, ಅವನಿಗೆ ಸ್ಪಷ್ಟ ವಾಗಿ ಗೊತ್ತಾಯಿತು. ಇಂಥ ಧರ್ಮಸ್ವರೂಪರಾದವರು ಶಿರಶ್ಛೇದಮಾಡಲ್ಪ ಡುವುದಕ್ಕೆ ಎಂದಿಗೂ ಅರ್ಹರಲ್ಲವೆಂಬುದಾಗಿಯೂ, ಇವರು ಬದುಕಿದ್ದರೆ ಧರ್ಮಮಾರ್ಗೈಕಪರಾಯಣತೆಗೆ ಒಳ್ಳೆಯ ಮೇಲುಪಂಕ್ತಿಗಳಾಗಿ ಪರಿಣಮಿ ಸುವರೆಂಬುದಾಗಿಯೂ, ಇವನಿಗೆ ಭಾವನೆಯುಂಟಾಯಿತು. ಈ ಭಾವ ನೆಯುಂಟಾದ ಕೂಡಲೆ, ಈ ದೊರೆಯು ಹೀಗೆ ಹೇಳಿದನು:-ನೀವಿಬ್ಬರೂ ಜಗದ್ವಿಲಕ್ಷಣ ಪುರುಷರು. ಸತ್ವಗುಣವು ಜನಗಳಲ್ಲಿ ಹೀಗೆ ಮೂರ್ತೀ ಭವಿಸುವುದೆಂದು ನಾನು ತಿಳಿದುಕೊಂಡಿರಲಿಲ್ಲ. ದೇವತೆಗಳಿಗೂ ರಾಕ್ಷ ಸರಿಗೂ ಇರತಕ್ಕ ವೈಲಕ್ಷಣ್ಯವನ್ನು ತೋರಿಸುವುದಕ್ಕೋಸರ, ಜಗದೀಶ್ವ ರನು ನಿಮ್ಮಂಥ ಮಹಾಪುರುಷರನ್ನೂ, ನನ್ನಂಥ ಕಿರಾತರನ್ನೂ ನಿರ್ಮಾಣ ಮಾಡಿರಬಹುದೆಂದು ತೋರುತ್ತದೆ ಮಹಾಪುರುಷನಾದ ಡೇಮನ್ನಿಗೆ ಶಿರ

ಶ್ಚೇದವನ್ನು ವಿಧಿಸಿದ ನನ್ನ ಪಾಪಕೃತ್ಯವು, ನನ್ನ ಹೃದಯವನ್ನು ಸುಡುವು ದಕ್ಕುಪಕ್ರಮಮಾಡಿದೆ. ನನ್ನ ಅಪರಾಧಕ್ಕೆ ಇದು ತಕ್ಕ ಶಿಕ್ಷೆಯಾಗಿ ಪರಿಣಮಿಸಲಿ! ನನ್ನಂಥ ದುರ್ಮಾರ್ಗರನ್ನು ಸನ್ಮಾರ್ಗಕ್ಕೆ ತರುವುದಕ್ಕಾಗಿಯೇ, ದೇವರು ನಿಮ್ಮನ್ನು ನಿರ್ಮಾಣಮಾಡಿರುವನು. ನೀವಿಬ್ಬರೂ ಆಯುರಾರೋಗ್ಯವುಳ್ಳವರಾಗಿ ಧರ್ಮಸಂಸ್ಥಾಪನಕ್ಕೆ ಸಹಾಯಮಾಡುತ್ತಿರುವಂತೆ ದೇವರು ಅನುಗ್ರಹಿಸಲಿ " ಎಂದು ಹೇಳಿ, ಡೇಮುನ್ನನಿಗೆ ವಿಧಿಸಲ್ಪಟ್ಟಿದ್ದ ಮರಣದಂಡನೆಯನ್ನು ಹಿಂದಕ್ಕೆ ತೆಗೆದುಕೊಂಡನು. ಈ ಡೇಮುನ್ನಿನಂತೆಯೂ, ಪಿಥಿಯಾಸನಂತೆಯೂ, ಮನೋವಾಕ್ಕರ್ಮಗಳಲ್ಲಿಯೂ ಧರ್ಮನಿಷ್ಠೆಯುಳ್ಳವರಲ್ಲಿ ಮಾತ್ರವೇ ಇಂಥ ಸ್ನೇಹವು ಕಾಣಲ್ಪಡುವುದಲ್ಲದೆ, ಇತರರಲ್ಲಿ ಈ ಸ್ನೇಹವು ಕಾಣಲ್ಪಡುವುದಿಲ್ಲ.

ಸತ್ಯವೇ ಅಕೃತ್ರಿಮವಾದ ಸ್ನೇಹಕ್ಕೆ ಮೂಲವಾದುದು. ಸತ್ಯವೇ ಪ್ರಪಂಚದ ಸ್ಥಿತಿಗೂ ಮೂಲಕಾರಣವಾದುದು. ಸತ್ಯವನ್ನುದ್ಧರಿಸುವ ಪ್ರಯತ್ನವು, ಜಗದೀಶ್ವರನ ಪ್ರಸನ್ನತೆಗೆ ಅತ್ಯಂತ ಸಾಧಕವಾದುದು ಅದರಿಂದಲೇ " ಸತ್ಯಮೇವೋದ್ಧರಾಮ್ಯಹಮ್ " ಎಂಬುದು ನಮ್ಮ ಮಹಾಪ್ರಭುಗಳ ಬಿರುದಾಗಿರುವುದು. ಈ ಬಿರುದಿನಿಂದ ನಡೆಯತಕ್ಕವರ ಭಾಗ್ಯಕ್ಕೆ ಸಮಾನವಾದ ಭಾಗ್ಯ ಬೇರೆ ಯಾವುದೂ ಇರುವುದಿಲ್ಲ. ಕ್ಷಣಭಂಗುರವಾದ ಇಸ್ವಾರ್ಥಗಳು ಅನೇಕವಾಗಿರಬಹುದು ; ಅವುಗಳನ್ನಪೇಕ್ಷಿಸಿ, ಬೆಂಕಿಯಲ್ಲಿ ಪತಂಗದ ಹುಳುಗಳು ಬಿದ್ದು ನಾಶವಾಗುವಂತೆ, ಅನೇಕರು ನಾಶವಾಗಲೂ ಬಹುದು. ಸತ್ಯವನ್ನವಲಂಬಿಸತಕ್ಕವರಿಗೆ, ಇಂಥ ನಾಶವೂ ಅನರ್ಥಗಳೂ ಎಂದಿಗೂ ಉಂಟಾಗುವುದಿಲ್ಲ ; ಅವರಿಗೆಂದಿಗೂ ಎಲ್ಲೆಲ್ಲಿಯೂ ಶ್ರೇಯಸ್ಸೇ ಲಭಿಸುವುದು.

## ಪರಿಚ್ಛೇದ ೩.

ಜರ್ಮನೀ ದೇಶದ ವಿದ್ಯಾರ್ಥಿಗಳು, ಇತರ ಎಲ್ಲಾ ದೇಶದ ವಿದ್ಯಾರ್ಥಿಗಳಿಗಿಂತ ವ್ಯಾಸಂಗಮಾಡುವುದರಲ್ಲಿ ಹೆಚ್ಚು ಶ್ರದ್ಧೆಯುಳ್ಳವರು. ಅದರಿಂದಲೇ, ಆ ದೇಶದ ಪಂಡಿತರೂ ಸಕಲಶಾಸ್ತ್ರವಿಶಾರದರಾಗಿರುತ್ತಾರೆ. ಜರ್ಮನೀ ದೇಶವು ಯೋಚನೆಗೆ ಪಿತೃಸ್ಥಾನವೆಂದು ಕರೆಯಲ್ಪಡುವುದಕ್ಕೆ, ಇದೇ ಮುಖ್ಯಕಾರಣವು. ಆ ದೇಶದ ವಿದ್ಯಾರ್ಥಿಗಳು, ವೇದಜಡರಂತೆ ಪಾಠಗಳನ್ನು ಗಟ್ಟಿಮಾಡುವುದರಲ್ಲಿ ಮಾತ್ರ ತೃಪ್ತರಾಗುವುದಿಲ್ಲ. ಓದಿದ ಗ್ರಂಥಗಳು ಸಂಪೂರ್ಣವಾಗಿ ಸ್ವಾಧೀನವಾಗುವಂತೆ ಮಾಡಿಕೊಳ್ಳುವುದರಲ್ಲಿ ಇವರು ನಿಪುಣರು. ಶ್ರವಣ ಮನನ ನಿದಿಧ್ಯಾಸನಗಳು ಇವರ ಆಚರಣೆಯಲ್ಲಿರುವುವು. ನಮ್ಮ ಹಿರಿಯರು ವ್ಯಾಸಂಗಮಾಡುವುದರಲ್ಲಿ ಯಾವ ಚಿಂತನೆಯ ಪದ್ಧತಿಯನ್ನಿಟ್ಟುಕೊಂಡಿದ್ದರೋ, ಅದು ಈಗ ಜರ್ಮನ್ ವಿದ್ಯಾರ್ಥಿಗಳಲ್ಲಿರುವುದು. ವಿದ್ಯಾರ್ಥಿಗಳು ಹೊಸ ಪಾಠಗಳನ್ನು ಮೊದಲೇ ಓದಿ ಯಾವ ಭಾಗಗಳು ಗೊತ್ತಾಗುವುದಿಲ್ಲವೋ ಅದನ್ನು ಗೊತ್ತು ಮಾಡಿಕೊಳ್ಳಬೇಕು. ಪಾಠ ನಡೆಯುವಾಗ್ಗೆ ತಿಳಿಯದ ವಿಷಯಗಳಲ್ಲಿ ಪ್ರಶ್ನೆಗಳನ್ನು ಹಾಕಬೇಕು. ಸಂದೇಹ ನಿವೃತ್ತಿಯಾದ ಹೊರತು ಮುಂದಕ್ಕೆ ಹೊರಡಬಾರದು. ಈ ರೀತಿಯಲ್ಲಿ ವ್ಯಾಸಂಗಮಾಡಲ್ಪಟ್ಟ ವಿಷಯಗಳು ಕರತಲಾಮಲಕವಾಗಿ ಪರಿಣಮಿಸುವವರೆಗೂ ಚಿಂತನೆ ಮಾಡಬೇಕು. ನಮ್ಮ ಪೌರ್ವಿಕರು ಹೀಗೆ ಮಾಡುತ್ತಿದ್ದರು. ನಮ್ಮ ಆಧುನಿಕ ವಿದ್ಯಾರ್ಥಿಗಳಲ್ಲಿ ಈ ಚಿಂತನೆಯ ಪದ್ಧತಿಗಳೇ ವಿರಳವಾಗುತ್ತಲಿವೆ. ಇದು ತುಂಬ ಶೋಚನೀ

ಯವಾದುದು. ಚಿಂತನೆಯೇ ತಪಸ್ಸು. ವ್ಯಾಸಂಗಕ್ಕೆ ಸಂಬಂಧಪಟ್ಟ ವಿಷ ಯಗಳಲ್ಲಿ ಮನಸ್ಸು ನಿಲ್ಲುವಂತೆ ಮಾಡಿಕೊಂಡ ಹೊರತು, ವ್ಯಾಸಂಗವಿಷ ಯವಾದ ಗ್ರಂಥಗಳು ಸ್ವಾಧೀನಕ್ಕೆ ಬರುವುದಿಲ್ಲ. ಹೀಗೆ ಮನಸ್ಸನ್ನು ಗ್ರಂಥಗಳಲ್ಲಿ ಹೇಳಲ್ಪಟ್ಟಿರತಕ್ಕ ತಾತ್ಪರ್ಯಗಳ ಮೇಲೆ ನಿಲ್ಲಿಸುವುದಕ್ಕೆ ಶಕ್ತಿ ಯಿಲ್ಲದವರು, ಎಂದಿಗೂ ಪಂಡಿತೋತ್ತಮರಾಗಲಾರರು. ಇದಲ್ಲದೆ ಚಿಂತ ನೆಗೆ ಅನುಕೂಲ್ಯಗಳನ್ನು ಕಲ್ಪಿಸಿಕೊಳ್ಳುವುದು ವಿದ್ಯಾರ್ಥಿಗಳಿಗೆ ಪ್ರಥಮ ಕರ್ತವ್ಯವು. ಜನಸಂಮರ್ದವಿಲ್ಲದೆ ಏಕಾಂತವಾಗಿರತಕ್ಕ ಕೊಟಡಿಯನ್ನು ಸಂಪಾದಿಸಿಕೊಳ್ಳಬೇಕು. ಅನುಕೂಲವಾದ ಪುಸ್ತಕಭಂಡಾರವನ್ನಿಟ್ಟುಕೊ ಳ್ಳಬೇಕು. ಚಿಂತನೆಮಾಡುವ ಕಾಲದಲ್ಲಿ ಯಾರೂ ಅಲ್ಲಿಗೆ ಬಾರದಂತೆ ಏರ್ಪಾಡು ಮಾಡಿಕೊಳ್ಳಬೇಕು. ಸ್ನೇಹಿತರೂ ಬಂಧು ಮಿತ್ರರೂ ಅಲ್ಲಿಗೆ ಬಾರದಂತೆ ಮಾಡಿಕೊಳ್ಳಬೇಕು. ಮನೋಭಾವವೂ ಕೂಡ ವ್ಯಾಸಂಗ ಕ್ಕನುಸಾರವಾಗಿರುವಂತೆ ಮಾಡಿಕೊಳ್ಳಬೇಕು. ಇಷ್ಟು ಏರ್ಪಾಡುಗಳನ್ನು ಮಾಡಿಕೊಂಡು, ಅರ್ಥವತ್ತಾಗಿ ಗ್ರಂಥವನ್ನು ಓದಿ, ಅದು ಸಂಪೂರ್ಣವಾಗಿ ಸ್ವಾಧೀನಕ್ಕೆ ಬರುವವರೆಗೂ ಚಿಂತನೆಮಾಡುತ ಬಂದರೆ, ಅದು ಸ್ವಾಧೀ ನವಾಗುವುದು. ಪ್ರತಿದಿವಸವೂ ಹಳೆಯ ಪಾಠಗಳ ಚಿಂತನೆಗೆ ಆವಶ್ಯಕ ವಾದಷ್ಟು ಅವಕಾಶವನ್ನು ಮಾಡಿಕೊಳ್ಳಬೇಕು. ವಿದ್ಯೆ ಮೊದಲಾದುವುಗ ಳನ್ನು ಆರ್ಜಿಸುವುದು ಸುಲಭ; ಆರ್ಜಿಸಿಸುದನ್ನು ರಕ್ಷಿಸಿಕೊಂಡು ಉಪ ಯೋಗಕ್ಕೆ ಬರುವಂತೆ ಮಾಡಿಕೊಳ್ಳುವುದು ಕಷ್ಟ. ನೂರಕ್ಕೆ ತೊಂಬ ತ್ತೊಂಬತ್ತು ಜನಗಳು, ಕಷ್ಟಪಟ್ಟು ಆರ್ಜಿಸಿದ ವಿದ್ಯೆ ಮೊದಲಾದುವುಗ ಳನ್ನು ರಕ್ಷಿಸಿಕೊಳ್ಳುವುದಕ್ಕೆ ತಕ್ಕ ಪ್ರಯತ್ನವನ್ನು ಮಾಡುವುದಿಲ್ಲ. ಈ

ಕಾರಣದಿಂದ, ಅವರಿಗೆ ಎಲ್ಲ ವಿಷಯಗಳಲ್ಲಿಯೂ ದರಿದ್ರಾವಸ್ಥೆ ಪ್ರಾಪ್ತ ವಾಗುವುದು. ಆರ್ಜಿಸಿದ ವಿದ್ಯೆಯನ್ನು ಬಾರಿಬಾರಿಗೂ ಚಿಂತನೆಯನ್ನು ಮಾಡಿ ರಕ್ಷಿಸಿಕೊಳ್ಳತಕ್ಕವರು, ಪರೀಕ್ಷೆಗಳಲ್ಲಿ ಅತ್ಯುತ್ತಮವಾಗಿ ತೇರ್ಗಡೆ ಹೊಂದಿ, ದಿಗಂತವಿಶ್ರಾಂತವಾದ ಕೀರ್ತಿಯನ್ನು ಪಡೆಯುವರು. ಹಾಗೆ ಆರ್ಜಿಸಲ್ಪಟ್ಟ ವಿದ್ಯೆಯ ಮಹಿಮೆಯಿಂದ, ತಾವು ಹಿಡಿದ ಕೆಲಸಗಳನ್ನು ಸಮಗ್ರವಾಗಿ ಮಾಡಿ, ಕಾರ್ಯ್ಯಾಚಾರ್ಯ ಪದವಿಯನ್ನೂ ಹೊಂದುವರು. ಈ ರೀತಿಯಲ್ಲಿ ವ್ಯಾಸಂಗಮಾಡುವ ಶಕ್ತಿಯನ್ನು ಯಾರು ಸಂಪಾದಿಸಿ ಕೊಳ್ಳುವುದಿಲ್ಲವೋ, ಅವರು ಹತ್ತರಲ್ಲಿ ಹನ್ನೊಂದನೆಯವರಾಗಿ ಪರಿಣಮಿ ಸುವರು. ನಮ್ಮ ಭಾರತೀಯ ವಿದ್ಯಾರ್ಥಿಗಳು, ಈ ವಿಷಯವನ್ನು ಪರ್ಯಾ ಲೋಚಿಸಬೇಕು. ಬುದ್ಧಿಬಲದ ಮಹಿಮೆಯಿಂದಲೇ, ಮನುಷ್ಯನು ಇತರ ಪ್ರಾಣಿಗಳಿಗಿಂತ ಅಧಿಕನಾಗಿರುವನು. ಈ ಆಧಿಕ್ಯಕ್ಕೆ, ತೀಕ್ಷ್ಣವಾದ ಬುದ್ಧಿಯೂ ವ್ಯಾಪಾರವೂ ಮುಖ್ಯಕಾರಣವಾದುದರಿಂದ, ಬುದ್ಧಿ ತೀಕ್ಷ್ಣ ವಾಗುವುದಕ್ಕೆ ಏಕಾಂತವಾಗಿಯೂ ಏಕಾಗ್ರಚಿತ್ತದಿಂದಲೂ ವ್ಯಾಸಂಗವು ಮಾಡಲ್ಪಡಬೇಕು. ಆದುದರಿಂದ, ಮನಸ್ಸು ಗ್ರಂಥಗಳನ್ನು ಬಿಟ್ಟು ಚಲಿಸ ದಂತೆ ಮಾಡಿಕೊಂಡು ವ್ಯಾಸಂಗ ಮಾಡುವುದು ಅವಶ್ಯಕ. ಈ ವಿಷ ಯಕ್ಕೆ ವಿದ್ಯಾರ್ಥಿಗಳ ಗಮನವು ಕೊಡಲ್ಪಟ್ಟ ಹೊರತು, ಅವರು ತಮ್ಮ ಇಷ್ಟಾರ್ಥಸಿದ್ಧಿಯನ್ನು ಹೊಂದಲಾರರು.

ಜರ್ಮನ್ ವಿದ್ಯಾರ್ಥಿಗಳು, ದಿನಕ್ಕೆ ಹದಿನಾರುಘಂಟೆಗಳ ಕಾಲ ವ್ಯಾಸಂಗಮಾಡುವರೆಂದು ಹೇಳುವರು. ಅವಿಚ್ಛಿನ್ನವಾಗಿ ಹದಿನಾರು ಘಂಟೆಗಳ ಕಾಲ ಕ್ಲೇಶಕರವಾದ ವ್ಯಾಸಂಗವನ್ನು ಮಾಡುತಬಂದರೆ,

ವಿದ್ಯಾರ್ಥಿಗಳು ಹುಚ್ಚರ ಆಸ್ಪತ್ರೆಗೆ ಕಳುಹಲ್ಪಡಬೇಕಾಗುವುದು ಅರೋಗ ದೃಢಕಾಯರಾದ ವಿದ್ಯಾರ್ಥಿಗಳು, ಅವಿಚ್ಛಿನ್ನವಾಗಿ ಏಕಾಗ್ರ್ಯಬೇಕಾಗಿರುವ ವ್ಯಾಸಂಗವನ್ನು ಮೂರುಘಂಟೆಗಳವರೆಗೂ ಮಾಡಬಹುದು. ಅನಂತರ ಕಾಲುಘಂಟೆಯಾದರೂ ವಿಹಾರರೂಪವಾದ ವಿಶ್ರಾಂತಿಯಿರಬೇಕು. ತರುವಾಯ ಪುನಃ ವ್ಯಾಸಂಗಕ್ಕೆ ಉಪಕ್ರಮಮಾಡಬಹುದು. ಅಭ್ಯಾಸದಿಂದ ಕ್ರಮಕ್ರಮವಾಗಿ ಹೆಚ್ಚು ವ್ಯಾಸಂಗಮಾಡುವ ಶಕ್ತಿ ಬರುವುದು. ವಿದ್ಯಾರ್ಥಿಗಳು, ತಮ್ಮ ಶಕ್ತಿಯನ್ನು ನೋಡಿಕೊಳ್ಳದೆ ವ್ಯಾಸಂಗಮಾಡುವುದಕ್ಕುಪಕ್ರಮಿಸಕೂಡದು. ತಮಗಿರತಕ್ಕ ಶಕ್ತಿಯನ್ನು ಗೊತ್ತುಮಾಡಿಕೊಳ್ಳುವುದು ಕಷ್ಟವಲ್ಲ. ಬೇಸರಿಕೆಯಾಗುವವರೆಗೂ ವ್ಯಾಸಂಗಮಾಡಿ, ಬೇಸರ ತೋರಿದಕೂಡಲೆ ಕಾರ್ಯಾಂತರಗಳಲ್ಲಿ ಮನಸ್ಸನ್ನು ವಿನಿಯೋಗಿಸಬೇಕು. ಸಿದ್ಧಾಂತಿಗಳಲ್ಲಿ ಶಿರೋಮಣಿಪ್ರಾಯನಾದ ನ್ಯೂಟನ್ನಿಗಿಂತ ದೊಡ್ಡ ವಿದ್ಯಾರ್ಥಿ ಯಾರೂ ಅಲ್ಲ. ಇವನು, ಅತ್ಯಂತ ಕ್ಲೇಶಜನಕವಾದ ವ್ಯಾಸಂಗವನ್ನು ಮಾಡಿ, ಬೇಸರಿಕೆಯಾದಕೂಡಲೆ ಆ ವ್ಯಾಸಂಗವನ್ನು ಬಿಟ್ಟು, ಮನೋಹರವಾದ ಇತರ ವ್ಯಾಸಂಗಗಳನ್ನು ಮಾಡುವುದಕ್ಕುಪಕ್ರಮಿಸಿ, ಬೇಸರ ತೀರಿದ ಕೂಡಲೆ ಪುನಃ ಕ್ಲೇಶಕರವಾದ ವ್ಯಾಸಂಗಕ್ಕುಪಕ್ರಮಿಸುತ, ಆರೋಗ್ಯಕ್ಕೆ ಯಾವ ಹಾನಿಯೂ ಬಾರದಂತೆ, ದಿನಕ್ಕೆ ಹದಿನಾರುಘಂಟೆಗಳಿಗೆ ಕಡಮೆಯಿಲ್ಲದೆ, ಎಪ್ಪತ್ತು ವರುಷಗಳಿಗಿಂತ ಹೆಚ್ಚಾಗಿ ವ್ಯಾಸಂಗಮಾಡಿ, ಸಕಲಶಾಸ್ತ್ರವಿಶಾರದರಲ್ಲಿ ಅಗ್ರಗಣ್ಯನಾದನು. ಹೀಗೆ ವ್ಯಾಸಂಗಮಾಡುವುದು ಕಷ್ಟವಲ್ಲ. ಆದರೆ, ಅಭ್ಯಾಸವಾಗುವವರೆಗೂ, ಬೇಸರವಾಗುವವರೆಗೆ ಮಾತ್ರ ವ್ಯಾಸಂಗಮಾಡಿ, ಬೇಸರಿಕೆಯಾದ

ಕೂಡಲೆ ವಿನೋದಕರವಾದ ಯಾವುದಾದರೂ ಇತರ ಕೆಲಸಗಳನ್ನಿಟ್ಟು ಕೊಂಡು, ಪುನಃ ವ್ಯಾಸಂಗಮಾಡುವುದಕ್ಕುಪಕ್ರಮಿಸುತಬಂದರೆ, ಕೆಲವು ದಿವಸಗಳಲ್ಲಿ, ಅತ್ಯಂತ ಕ್ಲೇಶಕರವಾದ ಕೆಲಸವನ್ನು ಬೇಸರಿಕೆಯಿಲ್ಲದೆಯೇ ಮಾಡತಕ್ಕ ಶಕ್ತಿಯೂ ಬರುವುದು. ಈ ವ್ಯಾಸಂಗದ ಮರ್ಮವನ್ನು ತಿಳಿದುಕೊಳ್ಳದೆ, ಬೇಸರಿಕೆಯಾದಮೇಲೂ ವ್ಯಾಸಂಗಮಾಡುತಬಂದರೆ, ಆರೋಗ್ಯವೂ ತಪ್ಪುವುದು ; ರೋಗಾದಿಗಳೂ ಸಂಭವಿಸುವುವು ; ಕೊನೆಗೆ ಅಕಾಲಮರಣವೂ ಉಂಟಾಗುವುದು. ಇಂಥ ಅನರ್ಥಕ್ಕೆ ಗುರಿಯಾಗದೆ, ವ್ಯಾಸಂಗದಲ್ಲಿಯೂ ವಿಹಾರಗಳಲ್ಲಿಯೂ ಏರ್ಪಾಡುಗಳನ್ನು ಮಾಡಿಕೊಳ್ಳುವುದು ಅತ್ಯಂತ ಆವಶ್ಯಕವು.

ವಿದ್ಯಾರ್ಥಿಗಳು ಮೇಜಿನ ಬಳಿಯಲ್ಲಿ ಕುಳಿತುಕೊಂಡು ವ್ಯಾಸಂಗ ಮಾಡುವುದುಂಟು. ವ್ಯಾಸಂಗಮಾಡುವಾಗ್ಗೆ ಕೆಲವರು ಮಲಗಿಕೊಂಡೂ, ಇನ್ನು ಕೆಲವರು ಈಜಿಛೇರೆಂಬ ಕುರ್ಚಿಯ ಮೇಲೆ ಒರಗಿಕೊಂಡೂ ಓದುವುದುಂಟು. ಹೀಗೆ ಮಾಡುವುದರಿಂದ, ಬೆನ್ನುಮೂಳೆ ಕ್ರಮಕ್ರಮವಾಗಿ ಬೊಗ್ಗಿಹೋಗುತ್ತದೆ. ಶರೀರ ನೆಟ್ಟಗಿರುವುದೇ ಅಸಾಧ್ಯವಾಗುತ್ತದೆ. ನಿಂತುಗೊಂಡು ವ್ಯಾಸಂಗಮಾಡುವುದೇ ಉತ್ತಮವು. ಬರೆಯುವಾಗ ಮಾತ್ರ ಕುಳಿತುಕೊಳ್ಳಬಹುದು. ಆಗಲೂ ಕೂಡ, ಬರೆಯುವುದಕ್ಕೆ ಬೊಗ್ಗಬಾರದು. ನೆಟ್ಟಗೆ ಕುಳಿತುಕೊಂಡು ಬರೆಯುವುದನ್ನು ಅಭ್ಯಾಸ ಮಾಡಬೇಕು. ಬೊಗ್ಗಿಕೊಂಡು ಬರೆಯತಕ್ಕವರ ಬೆನ್ನುಮೂಳೆಯೂ ಬೊಗ್ಗಿಹೋಗುವುದು. ಹಾಗಾಗುವುದಕ್ಕೆ ಅವಕಾಶಕೊಡಕೂಡದು. ನಾಲ್ವತ್ತುವರ್ಷ ವಯಸ್ಸಾದ ಮೇಲೆ ನಿಂತುಗೊಂಡು ಓದತಕ್ಕವರೇ

ಅಪೂರ್ವ ; ಅಪರವಯಸ್ಸಿನಲ್ಲಿ ಬೆನ್ನುಮೂಳೆ ನೆಟ್ಟಗಿರತಕ್ಕವರೂ ಅಪೂರ್ವ. ಬೆನ್ನುಮೂಳೆಗಳು ಬೊಗ್ಗುವುದಕ್ಕೆ, ಬೊಗ್ಗಿಕೊಂಡು ಕೆಲಸಮಾಡುವುದೂ ಬೊಗ್ಗಿಕೊಂಡು ಓದುವುದೂ ಮುಖ್ಯಕಾರಣಗಳು. ವಿದ್ಯಾರ್ಥಿಗಳು ಈ ವಿಷಯದಲ್ಲಿ ಎಚ್ಚರಿಕೆಯುಳ್ಳವರಾಗಿರಬೇಕು. ಅನೇಕ ವಿದ್ಯಾರ್ಥಿಗಳು, ನಿಂತುಗೊಂಡೂ ತಿರುಗಾಡುತಲೂ ಓದುವುದುಂಟು. ಇದು ಅತ್ಯುತ್ತಮವಾದ ಏರ್ಪಾಡು. ಇದರಿಂದ ವ್ಯಾಸಂಗದಜತೆಗೆ ಸ್ವಲ್ಪಮಟ್ಟಿಗೆ ವ್ಯಾಯಾಮವೂ ಸೇರಿದಂತಾಗುವುದು. ವ್ಯಾಸಂಗಮಾಡುವಾಗ್ಗೆ, ಪುಸ್ತಕದ ಮೇಲೆ ಎಡಗಡೆಯಿಂದ ಬೆಳಕು ಬೀಳುವಂತೆ ಮಾಡಿಕೊಳ್ಳುವುದುತ್ತಮವು ಹಾಗಿಲ್ಲದಿದ್ದರೆ, ಪುಸ್ತಕದಮೇಲೆ ಬಿದ್ದ ಬೆಳಕು ಪ್ರತಿಫಲಿಸಿ ಕಣ್ಣಿನಮೇಲೆ ಬೀಳುವುದು. ಅದರಿಂದ ಕಣ್ಣಿಗೆ ಬಾಧಕವಾಗುವುದು. ವಿದ್ಯಾರ್ಥಿದಶೆಯಲ್ಲಿ ಕಣ್ಣಿನ ಆರೋಗ್ಯವನ್ನು ನೋಡಿಕೊಳ್ಳುವುದು ಎಲ್ಲರಿಗೂ ಮುಖ್ಯ ಕರ್ತವ್ಯವು. ಈ ವಿಷಯದಲ್ಲಿ ಉದಾಸೀನರಾದರೆ, ದೂರದೃಷ್ಟಿ ಕಡಮೆಯಾಗುವುದು ; ಚಿಕ್ಕ ವಯಸ್ಸಿನಲ್ಲಿಯೇ ಕಣ್ಣಾಡಕವನ್ನು ಹಾಕಿಕೊಳ್ಳಬೇಕಾಗುವುದು ; ಇದಲ್ಲದೆ, ನೇತ್ರಪಾಟವವೇ ಕಡಮೆಯಾಗುವ ಸಂಭವವುಂಟಾಗುವುದು. ವಿಶೇಷವಾಗಿ ವ್ಯಾಸಂಗಮಾಡತಕ್ಕವರು, ಎರಡು ಮೂರು ಘಂಟೆಗಳಿಗೊಂದಾವೃತ್ತಿ ನಿರ್ಮಲವಾದ ತಣ್ಣೀರಿನಿಂದ ಕಣ್ಣನ್ನು ತೊಳೆದುಕೊಳ್ಳುತಿರುವುದುತ್ತಮವು. ವ್ಯಾಸಂಗಮಾಡತಕ್ಕ ಕಾಲದಲ್ಲಿ, ಉಡುಗೆಗಳ ವಿಷಯದಲ್ಲಿ ಬಹಳಜಾಗರೂಕರಾಗಿರಬೇಕು. ಯಾವ ಉಡುಗೆಯೂ ಕೂಡ ಬಿಗಿಯಾಗಿರಕೂಡದು. ಹಾಗಿದ್ದರೆ ಶರೀರದಲ್ಲಿ ರಕ್ತಸಂಚಾರವು ಸರಿಯಾಗಿ ಆಗುವುದಿಲ್ಲ. ನಿರ್ಮಲವಾದ ರಕ್ತವು

ನಿರ್ವಿಘ್ನವಾಗಿ ಮೆದಳಿಗೆ ಒದಗದಿದ್ದರೆ, ಬುದ್ಧಿಗೆ ಆರೋಗ್ಯವು ಕಡಮೆಯಾಗುವುದು. ಆರೋಗ್ಯವಿಲ್ಲದ ಬುದ್ಧಿಯಿಂದ, ಯಾವ ಕೆಲಸವೂ ಆಗುವುದಿಲ್ಲ. ನಮ್ಮ ದೇಶೀಯರ ಆಚರಣೆಯಲ್ಲಿರತಕ್ಕ ಉಡುಗೆಗಳು ಪ್ರಾಯಕವಾಗಿ ಸಡಿಲವಾಗಿಯೇ ಇರುತ್ತವೆ. ಆದಾಗ್ಯೂ, ನಡುವಿನ ಭಾಗದಲ್ಲಿ ರಕ್ತಸಂಚಾರವನ್ನು ನಿರೋಧಿಸುವಷ್ಟು ಬಿಗಿಯಾಗಿ ಕಟ್ಟಲ್ಪಟ್ಟಿರುವುದುಂಟು. ಅನಾರೋಗ್ಯಕ್ಕೆ ಇದೂ ಒಂದು ಕಾರಣವಾಗುವುದು. ಈ ವಿಷಯವೂ ಕೂಡ, ವಿದ್ಯಾರ್ಥಿಗಳ ಪರ್ಯಾಲೋಚನೆಗೆ ಅರ್ಹವಾದುದು.

ಒಂದೊಂದು ಕೊಟ್ಟಡಿಯಲ್ಲಿ ಇಬ್ಬಿಬ್ಬರು ವಿದ್ಯಾರ್ಥಿಗಳಿರುವುದುಂಟು. ವ್ಯಾಸಂಗಕಾಲದಲ್ಲಿ ಅವರು ಒಬ್ಬರೊಬ್ಬರು ಮಾತನಾಡಬಾರದು ; ಮೌನವನ್ನವಲಂಬಿಸಿರಬೇಕು. ಚಿಂತನೆಯನ್ನು ಮಾಡುವಾಗ ಮಾತಿಗೆ ಅವಕಾಶಕೊಟ್ಟರೆ, ಆಲೋಚನಾಶಕ್ತಿಧಾರೆಗೆ ಪ್ರತಿಬಂಧಕವುಂಟಾಗುವುದು. ಮಾತು ಮುಗಿದ ಮೇಲೆ ಈ ಧಾರೆಯುಪಕ್ರಮವಾಗುವುದು. ಹೀಗೆ ಆಗಾಗ್ಗೆ ವಿಘ್ನವಾಗುತಬಂದರೆ, ಚಿಂತನೆಯ ಕೆಲಸ ನಡೆಯುವುದು ಕಷ್ಟವಾಗುವುದು. ಚಿಂತನೆಯ ಕಾಲದಲ್ಲಿ ಯಾವವಿಧವಾದ ವಿಘ್ನಗಳಿಗೂ ಅವಕಾಶವಿರಬಾರದು. ಕೊಟ್ಟಡಿಯು ನಿಶ್ಶಬ್ದವಾಗಿರಬೇಕು. ಕಷ್ಟವಾದ ವಿಷಯಗಳನ್ನು ಚರ್ಚೆಯಿಂದ ತಿಳಿದುಕೊಳ್ಳುವುದೂ ಕೂಡ ಆವಶ್ಯಕವಾಗಿರುವುದು. ಅದಕ್ಕೊಂದು ಕ್ಲೃಪ್ತವಾದ ಕಾಲವನ್ನು ಮಾಡಿಕೊಂಡು, ಸಂಭಾಷಣೆಯಿಂದ ಬೇಕಾದ ವಿಷಯಗಳನ್ನು ತಿಳಿದುಕೊಳ್ಳಬಹುದು. ವ್ಯಾಸಂಗಮಾಡತಕ್ಕ ಕಾಲದಲ್ಲಿಯೂ, ಚಿಂತನೆಯನ್ನು ಮಾಡತಕ್ಕ ಕಾಲದಲ್ಲಿಯೂ, ಸಂಭಾಷಣವು ಅನರ್ಥಕಾರಿಯಾಗುವುದು.

ಸ್ವಶಕ್ತಿಯಿಂದಲೂ ಸ್ವಕೀಯವಾದ ಚಿಂತನೆಯಿಂದಲೂ ಪರ್ಯಾಲೋಚಿಸಿ ವಿಷಯಗಳ ಪೂರ್ವಾಪರಗಳನ್ನು ಗೊತ್ತುಮಾಡಿಕೊಳ್ಳುವುದಕ್ಕೆ, ಏಕಾಂತ ವಾಗಿ ಏಕಾಗ್ರ್ಯದಿಂದ ಯೋಚನೆಮಾಡುವುದು ಅತ್ಯಾವಶ್ಯಕವು. ಇದಕ್ಕೆ ಪ್ರತಿಬಂಧಕವನ್ನುಂಟುಮಾಡಿಕೊಳ್ಳಬಾರದು. ಹಾಗೆ ಉಂಟುಮಾಡಿಕೊಂ ಡರೆ, ವಿದ್ಯೆಯೆಂದಿಗೂ ಸ್ವಾಧೀನವಾಗುವುದಿಲ್ಲ.

ಕೆಲವುಜನ ವಿದ್ಯಾರ್ಥಿಗಳು, ಪಾಠಗಳನ್ನು ಗಟ್ಟಿಯಾಗಿ ಓದು ತ್ತಾರೆ. ಹೀಗೆ ಓದುವುದು, ಶಬ್ದಗಳ ಉಚ್ಚಾರಣೆಗೆ ಸಹಾಯವಾದರೂ ಆಗಬಹುದು ; ಆದರೆ, ವಿಷಯಜ್ಞಾನಕ್ಕೂ ತತ್ವಾರ್ಥ ಗ್ರಹಣಕ್ಕೂ, ಗಟ್ಟಿಯಾಗಿ ಓದುವುದೊಂದು ಮಾತ್ರವೇ ಸಾಲದು; ಚಿಂತನೆಯೂ ಕೂಡ ಆವಶ್ಯಕವು ಅನೇಕರು, ಗಟ್ಟಿಯಾಗಿ ಓದುತ್ತ, ಪುಸ್ತಕದಮೇಲೆ ದೃಷ್ಟಿ ಯನ್ನಿಟ್ಟು, ನಾಲಗೆಗೆ ಕೆಲಸವನ್ನು ಕೊಟ್ಟು, ಮನಸ್ಸುಮಾತ್ರ ವಿಷಯಾಂ ತರಗಳಿಗೆ ಹೋಗುವಂತೆ ಮಾಡಿಕೊಳ್ಳುವರು. ಅಂಥವರ ವ್ಯಾಸಂಗವು ಪರಿಪೂರ್ಣವಾಗುವುದಿಲ್ಲ. ಗಟ್ಟಿಯಾಗಿ ಓದತಕ್ಕವರಲ್ಲಿ ಪ್ರಾಯಕವಾಗಿ ಏಕಾಗ್ರಚಿತ್ತವುಳ್ಳವರು ಅಪೂರ್ವ. ವಾಚನಶಕ್ತಿಯುಂಟಾಗುವುದಕ್ಕೆ ಗಟ್ಟಿಯಾಗಿ ಓದುವುದು ಆವಶ್ಯಕ ; ಆದರೆ, ವಿಷಯಗ್ರಹಣವು ಗಟ್ಟಿ ಯಾಗಿ ಓದುವುದೊಂದರಿಂದ ಮಾತ್ರವೇ ಉಂಟಾಗುವುದಿಲ್ಲ. ವಿಚಾರ ಪೂರ್ವಕವಾಗಿ ಚಿಂತನೆ ಮಾಡಲ್ಪಟ್ಟ ಹೊರತು, ಕೂಲಂಕಷವಾಗಿ ವಸ್ತು ತತ್ವ ಗೊತ್ತಾಗುವುದಿಲ್ಲ. ರಾಜತಂತ್ರವಿಶಾರದರಾದ ಜಯಶಾಲಿಗಳು, ತಾವು ಜಯಿಸಿದ ದೇಶಗಳ ರಕ್ಷಣೆಗೆ ಸರಿಯಾದ ಏರ್ಪಾಡುಗಳನ್ನು ಮಾಡಿ–ಅವುಗಳಿಗೆ ಚ್ಯುತಿಯೇನೂ ಬಾರದಂತೆ ಏರ್ಪಡಿಸುವವರೆಗೂ, ಬೇರೆ

ದೇಶಗಳನ್ನು ಜಯಿಸಲು ಪ್ರಯತ್ನಮಾಡುವುದಿಲ್ಲ. ವಿದ್ಯಾಭ್ಯಾಸವೂ ಕೂಡ ದಿಗ್ವಿಜಯಕ್ಕೆ ಸಮಾನವಾದುದು. ವಿದ್ಯಾರ್ಥಿಗಳು, ತಾವು ಓದಿದ ವಿಷಯಗಳನ್ನು ಚೆನ್ನಾಗಿ ಚಿಂತನೆಮಾಡಿ ಸ್ವಾಧೀನ ಪಡಿಸಿಕೊಂಡು, ಶಲಾಕಾಪರೀಕ್ಷೆಯನ್ನು ಮಾಡಿದರೂ ಅದರಲ್ಲಿ ತಪ್ಪದಿರುವಂತೆ ಮಾಡಿಕೊಂಡು, ಅನಂತರ ಮುಂದಕ್ಕೆ ಹೋಗಬೇಕು. ಹಾಗಿಲ್ಲದೆ ಉಪರಿಪ್ಲವವಾಗಿ ವ್ಯಾಸಂಗಮಾಡತಕ್ಕವರು, ಒಳ್ಳೆಯ ವಿದ್ಯಾರ್ಥಿಗಳಾಗುವುದಿಲ್ಲ. ಅಂಥವರು ಪರೀಕ್ಷೆಯಲ್ಲಿ ತೇರ್ಗಡೆಯಾಗುವುದು ಕಷ್ಟ. ಅವರು ಪಂಡಿತರಾಗುವ ಸಂಭವವೇ ಇರುವುದಿಲ್ಲ. ಈ ವಿಷಯಕ್ಕೆ ಸಂಪೂರ್ಣವಾದ ಗಮನವು ಕೊಡಲ್ಪಡಬೇಕು. ಚೆನ್ನಾಗಿ ಕಲಿಯಲ್ಪಟ್ಟ ಒಂದು ವಿದ್ಯೆಯೂ ಕೂಲಂಕಷವಾಗಿ ತಿಳಿದುಕೊಳ್ಳಲ್ಪಟ್ಟ ಒಂದು ಕೆಲಸವೂ, ನೂರಾರು ವಿದ್ಯೆಗಳಿಗಿಂತಲೂ ನೂರಾರು ಕೆಲಸಗಳಿಗಿಂತಲೂ ವಿಶೇಷಪ್ರಯೋಜನಕಾರಿಯಾಗುವುವು. ಇದನ್ನು ಪರ್ಯಾಲೋಚಿಸಿ, ಎಲ್ಲ ವಿದ್ಯಾರ್ಥಿಗಳೂ ಒಂದೊಂದನ್ನಾದರೂ ಕೂಲಂಕಷವಾಗಿ ತಿಳಿದುಕೊಳ್ಳುವುದು ಅತ್ಯಂತ ಆವಶ್ಯಕವು.

ವ್ಯಾಸಂಗಮಾಡತಕ್ಕವರು, ಆತುರವುಳ್ಳವರಾಗಬಾರದು; ಅನೇಕ ಗ್ರಂಥಗಳನ್ನು ಒಂದೇ ಆವೃತ್ತಿ ಸ್ವಾಧೀನಪಡಿಸಿಕೊಳ್ಳಬೇಕೆಂದು, ಆತುರದಿಂದ ಪ್ರವರ್ತಿಸಬಾರದು; ಸಾವಧಾನವಾಗಿ ವ್ಯಾಸಂಗಕ್ಕೆ ಉಪಕ್ರಮ ಮಾಡಬೇಕು. ಪ್ರತಿಯೊಂದು ಶಬ್ದಕ್ಕೂ ಪ್ರತಿಯೊಂದು ವಾಕ್ಯಕ್ಕೂ ಸರಿಯಾದ ಅರ್ಥವಾದ ಹೊರತು, ಮುಂದಕ್ಕೆ ಹೊರಡಬಾರದು. ಹೀಗೆ ಮಾಡುವುದರಿಂದ, ಆರಂಭದಲ್ಲಿ ವ್ಯಾಸಂಗವು ಬಹಳ ಸ್ವಲ್ಪವಾಗಿರುವಂತೆ

ಕಾಣಬಹುದು ; ಕ್ರಮಕ್ರಮವಾಗಿ ವ್ಯಾಸಂಗವು ವಿಶೇಷವಾಗಿ ನಡೆಯು ವುದಕ್ಕೆ ಇದು ಅತ್ಯಂತಸಾಧಕವಾಗುವುದು. ಹೀಗೆ ವ್ಯಾಸಂಗಮಾಡತಕ್ಕ ವರು, ಬಹು ಸ್ವಲ್ಪಕಾಲದಲ್ಲಿಯೇ, ಪಾಠಕರ ಸಹಾಯವೂ ಇಲ್ಲದೆ ಸ್ವಶಕ್ತಿಯಿಂದ ವ್ಯಾಸಂಗಮಾಡುವುದಕ್ಕೆ ಅರ್ಹತೆಯನ್ನು ಸಂಪಾದಿಸಿ ಕೊಳ್ಳುವರು. ಈ ಅರ್ಹತೆ ಬರಬೇಕಾದರೆ, ಆದಿಭಾಗದಲ್ಲುಂಟಾಗತಕ್ಕ ಬೇಸರಿಕೆಯನ್ನು ಗೆಲ್ಲಬೇಕು. ಈ ಬೇಸರು ಹೋಗುವವರೆಗೂ ಹಿಂದೆಗೆ ಯದೆ ವ್ಯಾಸಂಗಮಾಡತಕ್ಕವರು, ಶೀಘ್ರದಲ್ಲಿಯೇ ಆ ಜುಗುಪ್ಸೆಯನ್ನು ಜಯಿಸುವರು. ವಿಷಯಗಳು ತಿಳಿದಕೂಡಲೆ, ವ್ಯಾಸಂಗದಲ್ಲಿ ಸಂತೋಷ ಹುಟ್ಟುವುದು ; ತರುವಾಯ ಆ ವ್ಯಾಸಂಗವನ್ನು ಬಿಡುವುದೇ ಕಷ್ಟವಾಗು ವುದು ; ಅನಂತರ ಲೀಲೆಯಿಂದ ಪಾಂಡಿತ್ಯವು ಲಭ್ಯವಾಗುವುದು. ಚೆನ್ನಾಗಿ ಕಲಿಯಲ್ಪಟ್ಟ ಒಂದು ಪಾಠವೂ, ಚೆನ್ನಾಗಿ ಜೀರ್ಣಿಸಿಕೊಳ್ಳಲ್ಪಟ್ಟ ಒಂದು ಗ್ರಂಥವೂ, ಕೂಲಂಕಷವಾಗಿ ತಿಳಿದುಕೊಳ್ಳಲ್ಪಡದಿರತಕ್ಕ ನೂರಾರು ಪಾಠಗಳಿಗಿಂತಲೂ ಸಾವಿರಾರು ಗ್ರಂಥಗಳಿಗಿಂತಲೂ ಹೆಚ್ಚು ಪ್ರಯೋಜನ ವನ್ನುಂಟುಮಾಡುವುವು. ಹೃದ್ಗತವಾದ ವಿದ್ಯೆಯು ಬೇಕಾದಾಗ ಉಪ ಯೋಗಿಸುವುದಕ್ಕೆ ಅನುಕೂಲವಾಗುವುದು. ಸೇವಿಂಗ್ಸ್ ಬ್ಯಾಂಕಿನಲ್ಲಿಟ್ಟಿ ರತಕ್ಕ ಹಣವನ್ನು ಬೇಕಾದಾಗ ಹೇಗೆ ಉಪಯೋಗಿಸಿಕೊಳ್ಳಬಹುದೋ, ಹಾಗೆ ಸಮಗ್ರವಾಗಿ ವ್ಯಾಸಂಗಮಾಡಲ್ಪಟ್ಟ ಪಾಠಗಳೂ ಗ್ರಂಥಗಳೂ ಉಪಯೋಗಕ್ಕೆ ಬರುವುವು. ಸ್ವಪ್ನದಲ್ಲಿ ಕಂಡ ಹಣದ ಗಂಟು, ಚೆನ್ನಾಗಿ ಗಟ್ಟಿಮಾಡಲ್ಪಡದಿರತಕ್ಕ ಪಾಠ, ಇವೆರಡೂ ಸಮವಾದುವುಗಳು ; ಇವೆ ರಡೂ ಕೆಲಸಕ್ಕೊದಗುವುದಿಲ್ಲ. ವಿದ್ಯಾರ್ಥಿಗಳು ಈ ವಿಷಯವನ್ನು

ಚೆನ್ನಾಗಿ ಮನಸ್ಸಿನಲ್ಲಿಟ್ಟುಕೊಂಡಿರಬೇಕು. ಉದಾಸೀನವಾದ ವ್ಯಾಸಂಗ ಕ್ಕಿಂತ, ವ್ಯಾಸಂಗಮಾಡದಿರುವುದೇ ಉತ್ತಮ. ಕಷ್ಟಪಟ್ಟು ವ್ಯಾಸಂಗ ಮಾಡುವುದನ್ನು ಅಭ್ಯಾಸಮಾಡಬೇಕು. ಆದಿಭಾಗದಲ್ಲಿ, ಸಾಮಾನ್ಯ ವಾದ ಕೆಲಸವೂ ಕೂಡ ಕಷ್ಟವಾಗಿ ತೋರುವುದು. ಅಭ್ಯಾಸವಾದ ಹಾಗೆಲ್ಲ, ಕಷ್ಟ ತೋರುವುದಿಲ್ಲ. ವ್ಯಾಸಂಗದಮೇಲೆ ಮನಸ್ಸಿಡದಿದ್ದರೆ ಅದು ಕಷ್ಟವಾಗಿ ಪರಿಣಮಿಸುವುದು. ವ್ಯಾಸಂಗವು ತೃಪ್ತಿಕರವಾಗಿ ಆಗಬೇಕಾದರೆ, ದೇಹಸ್ಥಿತಿಯು ಅನುಕೂಲವಾಗಿರಬೇಕು; ಮನಸ್ಸಿನ ಸ್ಥಿತಿಯೂ ಅನುಕೂಲವಾಗಿರಬೇಕು. ಕಾಲಸ್ಥಿತಿಯಲ್ಲಿಯೂ ಆಹಾರ ವಿಹಾರಗಳಲ್ಲಿಯೂ ವ್ಯತ್ಯಾಸಗಳು, ತಾಪತ್ರಯಗಳು, ಇವುಗಳೆಲ್ಲ ಸರಿ ಯಾದ ವ್ಯಾಸಂಗಕ್ಕೆ ಪ್ರತಿಬಂಧಕಸಾಮಗ್ರಿಗಳಾಗಿ ಪರಿಣಮಿಸುವುವು. ಕೂಡಿದಮಟ್ಟಿಗೂ ಈ ಪ್ರತಿಬಂಧಕಗಳಿಗೆ ಅವಕಾಶವನ್ನು ಕಡಮೆಮಾಡಿ ಕೊಳ್ಳಬೇಕು. ಮನಃಪೂರ್ವಕವಾಗಿ ವ್ಯಾಸಂಗಮಾಡಿದ ಹೊರತು ವ್ಯಾಸಂಗವು ಫಲಕಾರಿಯಾಗುವುದಿಲ್ಲವಾದುದರಿಂದ–ವ್ಯಾಸಂಗಮಾಡ ತಕ್ಕ ಕಾಲದಲ್ಲಿ ಇತರವಾದ ಯಾವ ವಿಷಯಗಳಿಗೂ ಮನಸ್ಸು ಹೋಗ ದಂತೆ ಮಾಡಿಕೊಳ್ಳುವುದಾವಶ್ಯಕವೆಂದು, ವಿದ್ಯುಚ್ಛಕ್ತಿಯನ್ನು ಕಂಡು ಹಿಡಿದ ಬೆಂಜಮಿನ್ ಫ್ರಾಂಕ್ಲಿನ್ ರವರೂ, ಸಿದ್ಧಾಂತಿಗಳಲ್ಲಿ ಅಗ್ರಗಣ್ಯರಾದ ನ್ಯೂಟನ್ ರವರೂ, ನ್ಯಾಯಾಧಿಪತಿಗಳಲ್ಲಿ ಅಗ್ರಗಣ್ಯರಾದ ಬ್ರೂಹಂರವರೂ ಹೇಳಿರುತ್ತಾರೆ.

ಪ್ರೆಸಿಡೆಂಟ್ ಪ್ಲೇಟ್‌ರವರಿಗೆ, ಕಣ್ಣುಗಳೆರಡೂ ಹೋದಮೇಲೆ, ಉದ್ದಿ ಷ್ಟವಾದ ಕೆಲಸಗಳ ಪೂರ್ವಾಪರಗಳನ್ನು ಯೋಚಿಸುವುದರಲ್ಲಿ ಮನಸ್ಸು

ಸ್ಥಿರವಾಗಿ ನಿಲ್ಲುತ್ತ ಬಂದಿತು. ಅನಂತರ ಅವರು ಬಹಳವಾಗಿ ವ್ಯವಸಾಯವನ್ನು ಮಾಡಿದರು. ರೇಖಾಗಣಿತ ಶಾಸ್ತ್ರಕ್ಕೆ ಮೂಲಕರ್ತರಾದ ಪಿಥಾಗರಾಸರವರು, ವಿಷಯಾಂತರಂಗಳಲ್ಲಿ ಮನಸ್ಸು ಪ್ರವರ್ತಿಸುವುದಕ್ಕೆ ಕಣ್ಣೊಂದು ಪ್ರಬಲವಾದ ಕಾರಣವೆಂದು ಭಾವಿಸಿ, ಪ್ರಯತ್ನಪೂರ್ವಕವಾಗಿ ಕುರುಡರಾಗಿ, ರೇಖಾಗಣಿತದಲ್ಲಿ ಅನೇಕ ವಿಷಯಗಳನ್ನು ಐಕಾಗ್ರ್ಯದಿಂದ ಪರ್ಯಾಲೋಚಿಸಿ ಸಿದ್ಧಾಂತಮಾಡಿದರು. ಈಗ ಎಡಿಸನ್‌ರವರು ತಮ್ಮ ತಪೋಮಹಿಮೆಯಿಂದ ಮನಸ್ಸನ್ನು ಉದ್ದಿಷ್ಟವಾದ ಕರ್ಮಗಳ ಪೂರ್ವಾಪರಗಳನ್ನು ಯೋಚಿಸುವುದರಲ್ಲಿ ನಿಲ್ಲಿಸಿ, ಯೋಚಿಸುವುದಕ್ಕೆ ಉಪಕ್ರಮ ಮಾಡಿದಾಗ ಅನೇಕ ಘಂಟೆಗಳವರೆಗೂ-ಕೆಲವು ಸಂದರ್ಭಗಳಲ್ಲಿ ಒಂದೆರಡು ದಿವಸಗಳವರೆಗೂ-ಅಂತರ್ಮುಖಿಗಳಾಗಿರುವರು. ಇವರು, ಕಣ್ಣುಗಳನ್ನು ತೆರೆದುಕೊಂಡಿರುತ್ತಾರೆ; ಎದುರಿಗೆ ಯಾರಿದ್ದರೂ ಇವರಿಗೆ ಕಾಣುವುದಿಲ್ಲ. ಇವರಿಗೆ ಕಿವಿಗಳಿರುತ್ತವೆ; ಆದರೆ ಯಾವ ಶಬ್ದಗಳೂ ಇವರಿಗೆ ಕೇಳುವುದಿಲ್ಲ. ಇವರ ಸಮಸ್ತವಾದ ಇಂದ್ರಿಯಗಳೂ ಕೂಡ, ಹೊರಗಿನ ವ್ಯಾಪಾರಗಳನ್ನು ಬುದ್ಧಿಗೆ ತಿಳಿಯಿಸುವ ಶಕ್ತಿಯನ್ನು ಕಳೆದುಕೊಂಡು ಅಂತರ್ಮುಖಗಳಾಗಿರುತ್ತವೆ. ಅನೇಕ ವರ್ಷಕಾಲ ಕಷ್ಟಪಟ್ಟು ಇವರು ಈ ಶಕ್ತಿಯನ್ನು ಸಂಪಾದಿಸಿರುವರು. ಇಂಥ ಶಕ್ತಿಯನ್ನೂ ವ್ಯಾಸಂಗದಲ್ಲಿ ಶ್ರದ್ಧೆಯನ್ನೂ ಹೊಂದಿರುವವರಿಗೆ, ಯಾವ ವಿದ್ಯೆಯೂ ಕಷ್ಟವಾಗುವುದಿಲ್ಲ; ಎಲ್ಲ ವಿದ್ಯೆಗಳೂ ಸುಲಭವಾಗಿ ಸಾಧ್ಯವಾಗುತ್ತವೆ. ಹೀಗೆ ಅಂತರ್ಮುಖಿಗಳಾಗಿ ಉದ್ದಿಷ್ಟವಾದ ವಿಷಯಗಳನ್ನು ಸಮಗ್ರವಾಗಿ ಪರ್ಯಾಲೋಚಿಸುವ ಶಕ್ತಿಯು, ಸುಲಭವಾಗಿ ಬರುವುದಿಲ್ಲ. ಈ ಶಕ್ತಿಯನ್ನಾರ್ಜಿಸು

ವುದಕ್ಕೆ ಅಸಾಧಾರಣವಾದ ಪ್ರಯತ್ನವಾವಶ್ಯಕವು. ಬೇಜಾರಿಲ್ಲದೆ ಅನೇಕ ವರುಷ ಪ್ರಯತ್ನ ಮಾಡಿದರೆ, ಈ ಶಕ್ತಿ ಬರುವುದು. ಅದನ್ನು ಸಂಪಾದಿಸಿಕೊಂಡವನು, ತನ್ನಲ್ಲಿ ಐಕ್ಯವಾಗಿರತಕ್ಕ ಅಜಯ್ಯವಾದ ಇಂದ್ರಿಯಗಳನ್ನು ಗೆಲ್ಲುತ್ತಾನೆ, ಅವನಿಗೆ ಇನ್ನಾವ ಕೆಲಸವೂ ಕಷ್ಟವಾಗುವುದಿಲ್ಲ. ಸಕಲ ವಿದ್ಯೆಗಳೂ ಅವನಿಗೆ ಸ್ವಾಧೀನವಾಗುವುವು.

ಯಾವ ವಿದ್ಯೆಯಲ್ಲಿ ಪರಿಣತ ಪಾಂಡಿತ್ಯಪಡೆಯಬೇಕಾದರೂ, ಪುನರಾವೃತ್ತಿಮಾಡುವುದರಲ್ಲಿ ಬೇಸರಪಡದಿರತಕ್ಕ ಅಭ್ಯಾಸವನ್ನು ಮಾಡಿಕೊಳ್ಳಬೇಕು. ಅಚ್ಚುಹಾಕುವುದು ಆಚರಣೆಗೆ ಬರುವುದಕ್ಕೆ ಮುಂಚೆ, ಗ್ರಂಥಗಳನ್ನು ಪುನರಾವೃತ್ತಿಯ ಮಹಿಮೆಯಿಂದ ವಿದ್ಯಾರ್ಥಿಗಳೂ ಪಂಡಿತರೂ ಕಂಠಸ್ಥವಾಗಿಟ್ಟುಕೊಳ್ಳುತ್ತಿದ್ದರು. ಈಗಲೂ, ವೇದಗಳನ್ನು ಸ್ವಲ್ಪವೂ ತಪ್ಪದೆ ಹೇಳತಕ್ಕ ಘನಪಾಠಿಗಳು ಬೇಕಾದಹಾಗೆ ಸಿಕ್ಕುತ್ತಾರೆ. ವ್ಯಾಕರಣ ಮೊದಲಾದ ಶಾಸ್ತ್ರಗಳನ್ನು ಒಂದು ತಪ್ಪೂ ಇಲ್ಲದೆ ಮೊದಲಿನಿಂದ ಕೊನೆಯವರೆಗೂ ಒಪ್ಪಿಸುವ ವಿದ್ಯಾರ್ಥಿಗಳು ಇರುತ್ತಾರೆ. ತಾವು ಓದಿದ ಗ್ರಂಥಗಳನ್ನು ಪುಸ್ತಕಸಹಾಯವಿಲ್ಲದೆ ಪಾಠ ಹೇಳತಕ್ಕ ಪಾಠಕರಿರುತ್ತಾರೆ. ಲಾರ್ಡ್ ಮೆಕಾಲೆ ಎಂಬಾತನು, ಯಾವ ಹೊಸ ಗ್ರಂಥವನ್ನು ತಂದು ಓದಿದಾಗ್ಗೂ, ಅದು ಓದಿ ಪೂರಯಿಸಲ್ಪಟ್ಟ ಕೂಡಲೆ 'ಜತು' ತಪ್ಪದೆ ಒಪ್ಪಿಸುತಿದ್ದನೆಂಬುದು ಪ್ರಸಿದ್ಧವಾಗಿರುವುದು. ಹೀಗೆ ಗ್ರಂಥಗಳನ್ನು ಒಂದಾವೃತ್ತಿ ಕೇಳಿದ ಕೂಡಲೆ ತಪ್ಪದೆ ಹೇಳತಕ್ಕ ಶಕ್ತಿಯು ಅದ್ಭುತವಾದುದೆಂಬುದಾಗಿಯೂ, ಇದು ಎಲ್ಲರಿಗೂ ಲಭ್ಯವಾಗುವುದಿಲ್ಲವೆಂಬುದಾಗಿಯೂ, ಈ ಶಕ್ತಿಯ ರಹಸ್ಯವನ್ನು ತಿಳಿಯದವರು ಹೇಳಿಕೊ

ಳ್ಳುವುದುಂಟು. ಈ ಶಕ್ತಿಯು ಅದ್ಭುತವಾದುದಲ್ಲ; ಇದು ಎಲ್ಲರಿಗೂ ಸಾಧ್ಯವು. ಆವೃತ್ತಿಯನ್ನು ಹಾಕುವುದೇ ಈ ಶಕ್ತಿಯ ರಹಸ್ಯ. ಓದುವ ಗ್ರಂಥಗಳನ್ನು ಎರಡು ಮೂರು ತಿಂಗಳವರೆಗೂ ಪ್ರತಿದಿವಸವೂ ಆವೃತ್ತಿ ಮಾಡಬೇಕು. ಮೂರು ತಿಂಗಳಾದಮೇಲೆ, ಚೆನ್ನಾಗಿ ಹೃದ್ಗತವಾದುದನ್ನು ಬಿಡುತ ಹೊಸದಾಗಿ ಓದಿಗುದನ್ನು ಆವೃತ್ತಿಹಾಕುತ ಬರಬೇಕು. ಪ್ರತಿ ದಿವಸವೂ, ಹಳೆಯ ಪಾಠಗಳ ಆವೃತ್ತಿಗಾಗಿ ಕಾಲುಘಂಟೆಯನ್ನಾದರೂ ವಿನಿಯೋಗಿಸಬೇಕು. ರಜಾದ ದಿವಸಗಳಲ್ಲಿ, ಹಳೆಯ ಪಾಠಗಳನ್ನೆಲ್ಲ ಪುನರಾವೃತ್ತಿಮಾಡಬೇಕು. ಈ ರೀತಿಯಲ್ಲಿ ತಪ್ಪದೆ ಪುನರಾವೃತ್ತಿ ಮಾಡುತ್ತ ಬಂದರೆ, ಏಕಸಂಧಿಗ್ರಾಹಿಯಾಗುವುದೇನೂ ಅಸಾಧ್ಯವಲ್ಲ. ಈ ವ್ಯಾಸಂಗದ ಮಹಿಮೆಯಿಂದ, ಮಹಾಕವಿಗಳಾಗಿಯೂ ಅದ್ವಿತೀಯ ಪಂಡಿತರಾಗಿಯೂ ಆಗುವುದು ಕೂಡ ಸಾಧ್ಯವಾದುದು. ಪ್ರಾಯಕವಾಗಿ ರಜಾದ ದಿವಸಗಳಲ್ಲಿ ಹಳೆಯ ಪಾಠಗಳ ವ್ಯಾಸಂಗಕ್ಕೋಸ್ಕರ ಕಾಲವನ್ನು ವಿನಿಯೋಗಿಸುವುದು ಯಾರಿಗೆ ತಿಳಿದಿರುವುದಿಲ್ಲವೋ, ಅವರೇ ಪ್ರಾಯಕವಾಗಿ ಪರೀಕ್ಷೆಗಳಲ್ಲಿ ತೇರ್ಗಡೆಯಾಗದಿರತಕ್ಕವರು. ಈ ರಹಸ್ಯವನ್ನು ತಿಳಿದವರು, ಎಂದಿಗೂ ಹೀನಸ್ಥಿತಿಯಲ್ಲಿರುವುದಿಲ್ಲ; ಇವರೆಲ್ಲರೂ ಪಂಡಿತಶ್ರೇಷ್ಠರಾಗಿ ಪರಿಣಮಿಸುವರು ; ಇವರೆಲ್ಲರೂ ತಮ್ಮ ಇಷ್ಟಾರ್ಥ ಪ್ರಾಪ್ತಿಯನ್ನು ಹೊಂದುವರು.

ಎಲ್ಲಾ ದೇಶಗಳಲ್ಲಿಯೂ ಅನೇಕ ಮಹಾಕವಿಗಳು ಲೋಕೋತ್ತರವಾದ ಗ್ರಂಥಗಳನ್ನು ಬರೆದಿರುವರು. ಅವರ ಯಶಸ್ಸಿನಿಂದಲೇ ಅವರ ಗ್ರಂಥಗಳ ಮಹಿಮೆಯು ದಿಗಂತವಿಶ್ರಾಂತವಾಗಿರುವುದು. ಅವರ ಗ್ರಂಥಗಳು,

ಅಮೂಲ್ಯವಾದ ಗಣಿಗಳನ್ನು ಹೋಲುವುವು. ರತ್ನಗಳನ್ನು ಅಪೇಕ್ಷಿಸ
ತಕ್ಕವರು ಹೇಗೆ ಪಾತಾಳದವರೆಗೂ ಅಗೆದು ಶೋಧಿಸಿ ರತ್ನಗಳನ್ನು
ತೆಗೆದು ಶಿರೋಮಣಿಗಳನ್ನು ಮಾಡಿ ಉಪಯೋಗಿಸಿಕೊಳ್ಳುವರೋ,
ಹಾಗೆಯೇ ಶಬ್ದರೂಪವಾಗಿಯೂ ವಾಕ್ಯರೂಪವಾಗಿಯೂ ಅಭಿಪ್ರಾಯ
ರೂಪವಾಗಿಯೂ ಇರುವ ಮಹಾಕವಿಪ್ರಣೀತವಾದ ರತ್ನಗಳು ಬೇಜಾರಿ
ಲ್ಲದೆ ಮಾಡಲ್ಪಟ್ಟ ವ್ಯಾಸಂಗದಿಂದಲೂ ಶೋಧನೆಯಿಂದಲೂ ನಿರಂತರವಾದ
ಪಾರಾಯಣದಿಂದಲೂ ಸ್ವಾಧೀನವಾಗುವುವು. ಶೋಧನೆಯ ಶಕ್ತಿ
ಕಡಮೆಯಾಗಿದ್ದಾಗ್ಯೂ, ನಿರಂತರವಾಗಿ ಮಹಾಕಾವ್ಯಗಳನ್ನು ಪಾರಾ
ಯಣಮಾಡತಕ್ಕ ಜನಗಳ ವಾಕ್ಕೂ ಕೂಡ ಸಂಸ್ಕರಿಸಲ್ಪಟ್ಟು, ಹಾಗೆ
ವ್ಯಾಸಂಗಮಾಡದಿರತಕ್ಕವರ ವಾಕ್ಕಿಗಿಂತ ಅತಿ ವಿಶೇಷವಾಗಿ ಗಂಭೀರ
ಸ್ಥಿತಿಗೆ ಬರುತ್ತದೆ. ಇದಲ್ಲದೆ ಇನ್ನೊಂದು ಅಸಾಧಾರಣವಾದ ಪ್ರಯೋ
ಜನವು, ಇಂಥ ಗ್ರಂಥಗಳ ಅವಲೋಕನದಿಂದ ಲಭ್ಯವಾಗುವುದು. ಮಹಾ
ಕವಿಗಳಿಂದ ರಚಿಸಲ್ಪಟ್ಟ ಗ್ರಂಥಗಳಲ್ಲಿ, ಪ್ರತಿಯೊಂದು ವಾಕ್ಯವೂ ಧರ್ಮ
ಪ್ರತಿಪಾದಕವಾಗಿರುವುದು. ವಾಲ್ಮೀಕಿಯಿಂದ ಬರೆಯಲ್ಪಟ್ಟ ಶ್ರೀಮದ್ರಾ
ಮಾಯಣವೇ ಇದಕ್ಕೆ ಉದಾಹರಣೆ. ಪ್ರಕ್ಷಿಪ್ತವಾದ ಕೆಲವು ವಿಷಯ
ಗಳನ್ನು ಬಿಟ್ಟರೆ, ಈ ಗ್ರಂಥವು ಮೊದಲಿನಿಂದ ಕೊನೆಯವರೆಗೂ ಧರ್ಮ
ಪುಂಜವಾಗಿರುವುದು. ಶ್ರೀರಾಮನ ಚರಿತ್ರೆಯನ್ನು ಪ್ರತಿನಿತ್ಯವೂ ಪಾರಾ
ಯಣಮಾಡತಕ್ಕವರು, ಮನೋವಾಕ್ಕರ್ಮಗಳಲ್ಲಿ ಪರಿಶುದ್ಧರಾಗುವರು.
ಪ್ರಪಂಚಕ್ಕೆ ಸಂಬಂಧಪಟ್ಟ ಸಕಲ ವ್ಯಾಪಾರಗಳಲ್ಲಿಯೂ–ಸದಿಷ್ಟಾರ್ಥ
ಪ್ರಾಪ್ತಿಗೆ ಸತ್ಸಂಕಲ್ಪಗಳೂ ಸತ್ಯವಾದ ಮಾತೂ ಸತ್ಕರ್ಮಗಳೂ ಮುಖ್ಯ

ಕಾರಣಗಳೆಂಬುದಾಗಿಯೂ, ದುಸ್ಸಂಕಲ್ಪಗಳೂ ಅಸತ್ಯವಾದ ಮಾತೂ ದುಷ್ಕರ್ಮಗಳೂ ಇಹಪರಗಳ ನಾಶಕ್ಕೆ ಮುಖ್ಯಕಾರಣಗಳೆಂಬುದಾಗಿಯೂ, ಧರ್ಮಮಾರ್ಗಾವಲಂಬಿಗಳು ಆದಿಭಾಗದಲ್ಲಿ ಕ್ಲೇಶಕ್ಕೆ ಗುರಿಯಾದಾಗ್ಯೂ ಪರಿಣಾಮದಲ್ಲಿ ತಮ್ಮ ಮನೋವಾಕ್ಕರ್ಮಗಳಿಗೆ ಅನುರೂಪವಾದ ಫಲಗಳನ್ನು ಹೊಂದುವರೆಂಬುದಾಗಿಯೂ, ಶ್ರೀರಾಮನಿಗೆ ಅವನ ಸತ್ಸಂಕಲ್ಪಗಳಿಗೂ ಸಮೀಚೀನವಾದ ಮಾತುಗಳಿಗೂ ಸತ್ಕರ್ಮಗಳಿಗೂ ತಕ್ಕಂತೆ ಸತ್ಫಲಗಳೂ–ದುರ್ಮಾರ್ಗಪ್ರವರ್ತಕನಾದ ರಾವಣನಿಗೆ ಅವನ ದುಸ್ಸಂಕಲ್ಪದಿಂದಲೂ ದುಷ್ಟವಾದ ಮಾತುಗಳಿಂದಲೂ ದುಷ್ಕರ್ಮಗಳಿಂದಲೂ ಅನರ್ಥಗಳೂ ಉಂಟಾದುವೆಂಬುದಾಗಿಯೂ, ಜಗದೀಶ್ವರನು ದುಷ್ಟನಿಗ್ರಹವನ್ನೂ ಶಿಷ್ಟಪರಿಪಾಲನೆಯನ್ನೂ ಮಾಡುವುದರಲ್ಲಿ ಬದ್ಧಕಂಕಣನಾಗಿ ಅಪ್ರಾಜ್ಞನಿಗೋಚರನಾಗಿ ಕೆಲಸಮಾಡುತ್ತಾನೆಂಬುದಾಗಿಯೂ, ಈ ರಾಮಾಯಣದ ದೃಷ್ಟಾಂತದಿಂದ ಸ್ಪಷ್ಟವಾಗಿ ಗೊತ್ತಾಗುತ್ತದೆ. ಸದ್ಗ್ರಂಥಗಳನ್ನು ಅವಕಾಶವಾದಾಗಲೆಲ್ಲ ಶ್ರವಣಮಾಡುವುದರಿಂದಲೂ, ಮನನಮಾಡುವುದರಿಂದಲೂ, ನಿದಿಧ್ಯಾಸನಮಾಡುವುದರಿಂದಲೂ, ಮನುಷ್ಯರೂ ಕೂಡ ದೇವತೆಗಳಾಗಿ ಪರಿಣಮಿಸುವರು. ಮಹಾಕಾವ್ಯಗಳ ಪಾರಾಯಣದಿಂದ, ಇಂಥ ಅತ್ಯುತ್ತಮವಾದ ಲಾಭವು ಲಭ್ಯವಾಗುವುದು ಆದರಿಂದಲೇ, ವ್ಯಾಸಂಗದ ರಹಸ್ಯವನ್ನು ತಿಳಿದವರು, ಅತ್ಯುತ್ತಮವಾದ ಗ್ರಂಥಗಳನ್ನು ಕಂಠಸ್ಥವಾಗುವವರೆಗೂ ವ್ಯಾಸಂಗಮಾಡುತ್ತ ಅದರ ರಹಸ್ಯಗಳನ್ನು ಶೋಧಿಸುತ್ತ ಬರಬೇಕೆಂದು ಉಪದೇಶಮಾಡುವರು. ಈ ವುಪದೇಶವು ಸರ್ವರಿಗೂ ಆದರಣೀಯವಾದುದು.

ವಿದ್ಯಾರ್ಥಿಗಳು, ಆಹಾರ ವಿಹಾರಗಳಲ್ಲಿ ಬಹಳ ಕ್ಲೃಪ್ತವಾಗಿರ ಬೇಕು. ಮಿತಿಮೀರಿ ಭೋಜನಮಾಡುವುದರಿಂದಲೂ, ಅಭಕ್ಷ್ಯಭೋಜನ ಗಳಿಂದಲೂ, ಅಪೇಯಪಾನಗಳಿಂದಲೂ, ಅಗಮ್ಯಾಗಮನಗಳಿಂದಲೂ, ದಿನಕ್ಕೆ ಏಳೆಂಟು ಘಂಟೆ ನಿದ್ರೆಗೆ ಅವಕಾಶ ಸಿಕ್ಕದಂತೆ ನಾಟಕ ಮೊದ ಲಾದ ಆಟಗಳಿಗೆ ಅವಕಾಶ ಕೊಡುವುದರಿಂದಲೂ, ತಮ್ಮ ಅಭ್ಯಾಸದ ಪಾಠಗಳಿಗೂ ಅನರ್ಘ್ಯವಾದ ಚಿಂತನೆಗೂ ಅವಕಾಶವನ್ನು ತಪ್ಪಿಸಿಕೊಂಡು, ತಮ್ಮ ಶ್ರೇಯಸ್ಸಿಗೆ ವಿಘ್ನ ಬರುವಂತೆ ಮಾಡಿಕೊಳ್ಳುತ್ತಾರೆ. ನಿರ್ವಿಘ್ನ ವಾಗಿ ನಡೆಯತಕ್ಕ ಕೆಲಸವು ಸಮರ್ಪಕವಾಗಿ ನಡೆಯುವುದು. ಒಂದು ದಿವಸ ವಿಘ್ನಕ್ಕೆ ಅವಕಾಶವನ್ನು ಕೊಟ್ಟರೆ, ಅದು ಪುನಃ ಕ್ರಮವಾದ ಸ್ಥಿತಿಗೆ ಬರುವುದಕ್ಕೆ ಕನಿಷ್ಠಪಕ್ಷ ನಾಲ್ಕು ದಿವಸಗಳು ಹಿಡಿಯುವುವು ಯಾವ ವಿದ್ಯಾರ್ಥಿಗಳು ವಿಘ್ನಕ್ಕೆ ಒಂದು ನಿಮಿಷವೂ ಅವಕಾಶಕೊಡದೆ ತಮ್ಮ ವ್ಯಾಸಂಗಗಳನ್ನು ಸರಿಯಾಗಿ ಮಾಡುವರೋ, ಅವರು ಹದಿನೆಂಟು ಇಪ್ಪತ್ತು ವಯಸ್ಸಾಗುವುದರೊಳಗಾಗಿ ವ್ಯಾಸಂಗದ ಪರಾಕಾಷ್ಠ ದಶೆ ಯನ್ನು ಹೊಂದಿ, ಪರಿಣತ ಪಂಡಿತರಾಗಿ, ಗೃಹಸ್ಥಾಶ್ರಮವನ್ನು ವಹಿಸಿ, ಸಂಸಾರಿಗಳಾಗಿದ್ದುಗೊಂಡು, ತಾವು ಆರ್ಜಿಸಿದ ಪಾಂಡಿತ್ಯದ ಫಲವನ್ನನು ಭವಿಸುವುದಕ್ಕೆ ಸಮರ್ಥರಾಗುತ್ತಾರೆ. ನಿರ್ವಿಘ್ನವಾಗಿ ವ್ಯಾಸಂಗಮಾಡು ವುದಕ್ಕೆ ಆವಶ್ಯಕವಾದ ಮನಸ್ಸ್ಥೈರ್ಯವನ್ನು ಸಂಪಾದಿಸಿಕೊಳ್ಳುವುದಕ್ಕೆ ಅನರ್ಹರಾದವರು, ಇಪ್ಪತ್ತು ಮೂವತ್ತು ವಯಸ್ಸಾದಾಗ್ಯೂ ಪರೀಕ್ಷೆ ಗಳಲ್ಲಿ ಸರಿಯಾಗಿ ತೇರ್ಗಡೆಯಾಗದೆ ಭಗ್ನಮನೋರಥರಾಗಿ, ಸುಖವಾಗಿ ಕುಟುಂಬಭರಣವನ್ನು ಮಾಡುವುದಕ್ಕೆ ಶಕ್ತಿಯಿಲ್ಲದೆ, ಬಹಳ ಕ್ಲೇಶಕ್ಕೆ

ಗುರಿಯಾಗುವರು. ಕೆಟ್ಟಮೇಲೆ, ಇದು ಸ್ವಯಂಕೃತಾಪರಾಧನೆಂದು ತಿಳಿದುಕೊಂಡು ವ್ಯಸನಪಡುವರು. ಕೆಟ್ಟಮೇಲೆ ಬಂದ ಬುದ್ಧಿಯು ಪ್ರಯೋಜನಕಾರಿಯಾಗುವುದು ಬಹಳ ಅಪೂರ್ವ. ವಿಘ್ನಗಳಿಗೆ ಅಧೀನ ರಾಗಿ, ವ್ಯಾಸಂಗವನ್ನು ಕೆಡಿಸಿಕೊಂಡು, ಪರೀಕ್ಷೆಗಳಲ್ಲಿ ತೇರ್ಗಡೆಯಾಗದೆ, ಉದರಪೋಷಣೆಗೆ ಸಾಧ್ಯವಾದ ಯಾವ ವಿದ್ಯೆಗಳಲ್ಲಿಯೂ ಕಲೆಗಳಲ್ಲಿಯೂ ಸರಿಯಾದ ಯೋಗ್ಯತೆಯನ್ನು ಸಂಪಾದಿಸದೆ ವಿವಾಹವನ್ನು ಮಾಡಿ ಕೊಂಡು, ಸಂಸಾರಿಗಳಾಗಿ, ಕುಟುಂಬಭರಣವನ್ನು ಮಾಡುವುದಕ್ಕೆ ಶಕ್ತಿ ಯಿಲ್ಲದೆ, ಪರಾಧೀನರಾಗಿ ಕ್ಲೇಶಪಡತಕ್ಕವರು, ನೂರಕ್ಕೆ ಎಪ್ಪತ್ತೆಯ್ದು ಜನಗಳಿಗೆ ಕಡಿಮೆಯಿಲ್ಲದೆ ಇರುತ್ತಾರೆ. ತಮ್ಮ ವ್ಯಾಸಂಗದಲ್ಲಿ ನಿರತ ರಾಗಿ ವ್ಯಾಸಂಗಕ್ಕೆ ಉಂಟಾದ ಪ್ರತಿಬಂಧಕಗಳಿಗೆ ಒಳಗಾಗದೆ ಸ್ಥಿರಸಂಕ ಲ್ಪದಿಂದ ವ್ಯಾಸಂಗಮಾಡಿದ್ದರೆ, ಅವರಿಗೆ ಇಂಥ ಅನರ್ಥಕ್ಕೆ ಅವಕಾಶವಾ ಗುತ್ತಿರಲಿಲ್ಲ. ಅಪ್ರತಿಹತವಾದ ವಿಘ್ನಗಳು ಬರುವುದು ಅಪೂರ್ವ; ಸ್ಥೈರ್ಯವುಳ್ಳವರು ಗೆಲ್ಲಬಹುದಾದ ವಿಘ್ನಗಳೇ ವಿಶೇಷವಾಗಿ ಬರುತ್ತವೆ. ಅಂಥವುಗಳನ್ನು ಗೆಲ್ಲದವರು, ಪ್ರಪಂಚದಲ್ಲಿ ಲಾಭಕರವಾದ ಯಾವ ಕೆಲಸ ವನ್ನೂ ಮಾಡಲಾರರು. ಅವರಿಗೆ ದಾರಿದ್ರ್ಯವೆಂದಿಗೂ ತಪ್ಪುವುದಿಲ್ಲ. ವಿಷಯಾಂತರಗಳಿಗೆ ಮನಸ್ಸನ್ನು ಕೊಡದೆ, ಲಾಭಕರವಾದ ವ್ಯಾಸಂಗಕ್ಕೆ ದಿನಕ್ಕೆ ಎಂಟು ಘಂಟೆಗಳಾದರೂ ಕೊಡಬೇಕು. ಹಾಗೆ ಕೊಡತಕ್ಕವರು, ಸಕಲವಾದ ಇಷ್ಟಾರ್ಥಗಳನ್ನೂ ಪಡೆಯುವರು. ಅಂಥ ವ್ಯಾಸಂಗಕ್ಕೆ ಉಂಟಾಗತಕ್ಕ ವಿಘ್ನಗಳಿಗೆ ಅಧೀನರಾಗತಕ್ಕವರು, ಎಂದಿಗೂ ದಾರಿದ್ರ್ಯ ದಿಂದ ವಿಮೋಚನೆಯನ್ನು ಹೊಂದುವುದಿಲ್ಲ. ವ್ಯಾಸಂಗ ಮೊದಲಾಗುವ

ಗಳಿಗೆ ಕಾಲವನ್ನು ಕ್ಲೃಪ್ತಮಾಡಿ, ಹಾಗೆ ಕ್ಲೃಪ್ತವಾದ ಕಾಲಗಳಿಗೆ ಯಾವ ವಿಘ್ನ ಬಂದಾಗ್ಯೂ ಅದನ್ನು ಜಯಿಸಿ ಕೆಲಸಮಾಡತಕ್ಕವರಿಗೇ ಇಷ್ಟಾರ್ಥಪ್ರಾಪ್ತಿಯಾಗುವುದು ; ಉಳಿದವರ ಇಷ್ಟಾರ್ಥವೆಂದಿಗೂ ಕೈಗೂಡುವುದಿಲ್ಲ.

ಅನೇಕ ಜನಗಳಿಗೆ, ವಿಶ್ರಾಂತಿಯನ್ನು ಹೊಂದುವ ವಿಧಾನಗಳೇ ಗೊತ್ತಿಲ್ಲ ; ಎರಡು ಮೂರು ಗಂಟೆಗಳು ವ್ಯಾಸಂಗಮಾಡಿ ಬೇಸರಿಕೆಯನ್ನು ಹೊಂದುವರು. ಆ ಕ್ಷಣದಲ್ಲಿಯೇ ಪುಸ್ತಕವನ್ನು ಬಿಸುಟು, ಸಿರುದ್ಯೋಗಿಗಳಾಗಿ ಸೋಮಾರಿತನದಿಂದ ಕಾಲಹರಣಮಾಡುವರು. ಬುದ್ಧಿಶಾಲಿಗಳಾದವರು, ಒಂದು ಕೆಲಸದಲ್ಲಿ ಬೇಜಾರಾದ ಕೂಡಲೆ ಮತ್ತೊಂದು ಕೆಲಸಕ್ಕೆ ಉಪಕ್ರಮಮಾಡುವರು. ಅದೇ, ಅವರಿಗೆ ವಿಶ್ರಾಂತಿಯಾಗಿ ಪರಿಣಮಿಸುವುದು. ಗಣಿತಶಾಸ್ತ್ರವನ್ನು ವ್ಯಾಸಂಗಮಾಡಿ ಬೇಜಾರಾದರೆ, ಭೌತಿಕಶಾಸ್ತ್ರವನ್ನು ವ್ಯಾಸಂಗಮಾಡುವರು ; ಅದರಲ್ಲಿ ಬೇಜಾರಾದರೆ, ರಸಾಯನಶಾಸ್ತ್ರಕ್ಕೆ ಮನಸ್ಸನ್ನು ಕೊಡುವರು ; ಅದರಲ್ಲಿ ಬೇಜಾರಾದರೆ, ವೇದಾಂತವನ್ನು ವ್ಯಾಸಂಗಮಾಡುವರು ; ಅದರಲ್ಲಿ ಬೇಜಾರಾದಮೇಲೆ, ಕಾವ್ಯ ನಾಟಕ ಆಖ್ಯಾನ ಆಖ್ಯೇಯ ಮೊದಲಾದ ಗ್ರಂಥಗಳ ಅವಲೋಕನದಿಂದ ಮನಸ್ಸನ್ನು ವಿನೋದಗೊಳಿಸುವರು ; ತರುವಾಯ, ಚರಿತ್ರೆ ಭೂಗೋಳ ಖಗೋಳ ಶಾರೀರಕಶಾಸ್ತ್ರ ವೈದ್ಯಶಾಸ್ತ್ರ ಮೊದಲಾದ ವ್ಯಾಸಂಗಗಳನ್ನು ಮಾಡುವರು. ಆಮೇಲೆ, ವ್ಯಾಯಾಮರೂಪವಾದ ಕೆಲಸಗಳನ್ನು ಮಾಡುವರು. ತೋಟವನ್ನು ಮಾಡುವುದು, ಪುಷ್ಪಗಳನ್ನು ಬೆಳೆಯುವುದು, ತರಕಾರಿಗಿಡಗಳನ್ನು ಹಾಕುವುದು, ಗಾಳಿಸವಾರಿ

ಹೋಗುವುದು, ಸೌದೆಯೊಡೆಯುವುದು, ಇತರ ಕೆಲಸಗಳನ್ನು ಮಾಡು ವುದು, ಚಿತ್ರಬರೆಯುವುದು, ಉಪನ್ಯಾಸಗಳನ್ನು ಬರೆಯುವುದು, ಉಪ ನ್ಯಾಸಗಳನ್ನು ಮಾಡುವುದು, ಈ ಕೆಲಸಗಳಲ್ಲಿ ಯಾವಾಗ ಯಾವುದು ಅನುಕೂಲವೋ ಅದನ್ನು ಅವರು ಮಾಡುವರು. ಮನಸ್ಸು, ಒಂದೇ ಕೆಲಸ ದಲ್ಲಿ ಬಹಳಹೊತ್ತು ವಿನಿಯೋಗಿಸಲ್ಪಟ್ಟರೆ–ಬೇಜಾರನ್ನು ಹೊಂದುವುದು. ಬೇಜಾರಾದಕೂಡಲೆ ಆ ಕೆಲಸವನ್ನು ಬಿಟ್ಟು ಬೇರೆ ಕೆಲಸದಲ್ಲಿ ಅದಕ್ಕೆ ಉದ್ಯೋಗವನ್ನು ಕೊಟ್ಟರೆ, ಆ ವುದ್ಯೋಗವೇ ವಿಶ್ರಾಂತಿಯಾಗಿ ಪರಿಣ ಮಿಸುವುದು.

ಕೆಲವುಸಂದರ್ಭಗಳಲ್ಲಿ ನಿದ್ರೆಯೂ ಕೂಡ ಅತ್ಯಂತ ಆವಶ್ಯಕವಾಗಿರು ವುದು. ವ್ಯಾಸಂಗದ ಕ್ಲೇಶದಿಂದ ತಲೆನೋವು ಬಂದು ಬಹಳ ಬೇಜಾರಾ ಗುವುದುಂಟು. ಕೂಡಲೆ ಮಲಗಿಕೊಂಡು ಕಾಲುಗಂಟೆ–ಅಥವಾ ಅರ್ಧ ಗಂಟೆ ನಿದ್ದೆಮಾಡಿದಾಗ್ಯೂ, ನಿದ್ದೆ ಬಾರದಿದ್ದರೆ ಕಣ್ಣುಮುಚ್ಚಿಕೊಂಡು ಮಲಗಿದ್ದಾಗ್ಯೂ ವಿಶ್ರಾಂತಿಯು ಬಹಳವಾಗಿ ಉಂಟಾಗುವುದು. ಮೆ|| ಗ್ಲಾಡ್‌ಸ್ಟನ್ ಸಾಹೇಬರಿಗೆ, ಕೆಲವುಕಾಲಗಳಲ್ಲಿ ಹಗಲೂ ರಾತ್ರಿಯೂ ಕೆಲಸಬೀಳುತಿದ್ದಿತು ; ನಿದ್ದೆಗೆ ಅವಕಾಶವೇ ಆಗುತಿರಲಿಲ್ಲ ; ರಾತ್ರಿಯ ಹೊತ್ತು ಪಾರ್ಲಿಮೆಂಟ್ ಮೀಟಿಂಗು ಆಗುತಿದ್ದಿತು. ಅಂಥ ಕಾಲ ದಲ್ಲಿಯೂ ಕೂಡ, ಇವರು ಮಧ್ಯೇಮಧ್ಯೇ ವಿಶ್ರಾಂತಿಯನ್ನು ತೆಗೆದು ಕೊಳ್ಳುತ ತಮ್ಮ ಕೆಲಸವನ್ನು ಬಹಳಚೆನ್ನಾಗಿ ಮಾಡುತಿದ್ದರು. ಪಾರ್ಲಿ ಮೆಂಟಿನಲ್ಲಿ ಒಂದೊಂದುವೇಳೆ ಐದಾರುಗಂಟೆಗಳು ಅವಿಚ್ಛಿನ್ನವಾಗಿ ಮಾತ ನಾಡಬೇಕಾದ ಸಂದರ್ಭವೂ ಬರುತಿದ್ದಿತು. ಅಂಥ ಸಂದರ್ಭಗಳಲ್ಲಿ ಬೇಜಾ

ರಾದಾಗ, ಬಹಳ ಮನೋಹರವಾಗಿ ಒಂದೆರಡು ವಾಕ್ಯಗಳನ್ನು ಹೇಳಿ ಜನಗಳು ಚಪ್ಪಾಳೆತಟ್ಟುತಿರುವಾಗ ಯಾರನ್ನಾದರೂ ಮರೆಮಾಡಿಕೊಂಡು ಗೊರಕೆಯನ್ನು ಹೊಡೆಯುತಿದ್ದು, ಚಪ್ಪಾಳೆಗಳ ಧ್ವನಿಯು ನಿಂತಕೂಡಲೆ ಪುನಃ ಮಾತನಾಡುವುದಕ್ಕುಪಕ್ರಮಿಸುತಿದ್ದರು. ಡಾಕ್ಟರ್ ಗುಡ್ ಎಂಬಾತನು, ಚಿಕಿತ್ಸಕರಲ್ಲಿ ಅದ್ವಿತೀಯನಾಗಿದ್ದನು. ನಾಲ್ವತ್ತುವರುಷ ಕಾಲ ಈತನು ಊಟಕ್ಕೂ, ನಿದ್ದೆಗೂ ವಿರಾಮವಿಲ್ಲದೆ ಕೆಲಸಮಾಡಿದನು. ಇಷ್ಟು ಕೆಲಸಗಳಲ್ಲಿಯೂ, ಮಧ್ಯೇ ವಿರಾಮವನ್ನು ಮಾಡಿಕೊಂಡು ಹನ್ನೊಂದು ಭಾಷೆಗಳನ್ನು ಅಭ್ಯಾಸಮಾಡಿ, ಅವುಗಳಲ್ಲಿ ಅನೇಕ ಗ್ರಂಥಗ ಳನ್ನು ಬರೆದಿರುತ್ತಾನೆ. ಆತನು ಬರೆದಿರುವ 'ಬುಕ್ ಆಫ್ ನೇಚರ್' ಎಂಬ ಪುಸ್ತಕವನ್ನು ಅವಲೋಕಿಸಿದರೆ, ಅವನ ಪಾಂಡಿತ್ಯವು ಎಷ್ಟು ಅದ್ಭು ತವಾಗಿದ್ದಿತೋ ಅದು ಗೊತ್ತಾಗುವುದು. ಅಪಾರವಾದ ಕೆಲಸಗಳಿ ದ್ದಾಗ್ಯೂ, ಸಾವಧಾನವಾಗಿ ಎಲ್ಲಾ ಕೆಲಸಗಳನ್ನೂ ಮಾಡಿ, ಆ ಕೆಲಸ ಗಳೇ ಒಂದಾಗುತ್ತಲೂ ಒಂದು ವಿಶ್ರಾಂತಿಯಾಗಿ ಪರಿಣಮಿಸುವಂತೆ ಮಾಡಿಕೊಂಡಿದ್ದನು. ನಮ್ಮ ಒಂದನೆಯ ಕೌನ್ಸಿಲರಾದ ಮ|| ಎಚ್. ವಿ. ನಂಜುಂಡಯ್ಯನವರು, ಹೀಗೆ ಶತಾವಧಾನ ಮಾಡುವುದನ್ನು ಅಭ್ಯಾಸ ಮಾಡಿರುತ್ತಾರೆ. ಈ ಸಂಸ್ಥಾನದ ಅಧಿಕಾರಿಗಳಲ್ಲಿ, ಪ್ರಾಯಕವಾಗಿ ಎಲ್ಲ ಇಲಾಖೆಗಳ ಕೆಲಸಗಳನ್ನೂ ಸಾವಧಾನವಾಗಿ ಮಾಡುವ ಶಕ್ತಿಯು, ಇವರಿಗಿರುವಷ್ಟು ಇನ್ನಾರಿಗೂ ಇರುವುದಿಲ್ಲ. ಕೆಲಸಮಾಡುವಾಗ ಯಾರು ಬಂದಾಗ್ಯೂ ವಿರಾಮವಿಲ್ಲವೆಂದು ಸಿಡುಗುಟ್ಟದೆ, ಬಂದವರೊ ಡನೆ ವಿರಾಮವಾಗಿ ಮಾತನಾಡಿಕಳುಹಿಸುತ, ತಮ್ಮ ಕೆಲಸಗಳಿಗೆ ನ್ಯೂನತೆ

ಜಾರದಂತೆ, ನಸುಕಿನಿಂದ ಬೆಳಗ್ಗೆ ಏಳುಗಂಟೆಯಿಂದ ರಾತ್ರಿ ಹನ್ನೆರಡುಗಂಟೆ ಯವರೆಗೂ ಇವರ ಹಾಗೆ ಕೆಲಸಮಾಡತಕ್ಕವರು ಅಪೂರ್ವವಾಗಿರುವರು. ಈ ಕೆಲಸಗಳ ಮಧ್ಯದಲ್ಲಿ, ಒಂದು ಹೊಸ ಪುಸ್ತಕವನ್ನಾದರೂ ಇವರು ಓದದಿರತಕ್ಕ ದಿವಸವೇ ಇರುವುದಿಲ್ಲ. ಓದಿದ ಗ್ರಂಥಗಳಿಂದ ಸ್ವಾರಸ್ಯ ಯುಕ್ತವಾದ ಅಂಶಗಳನ್ನು ಸಂಗ್ರಹಿಸಿ ಬರೆದಿಡದಿರುವುದೂ ಅಪೂರ್ವ. ಎಷ್ಟು ಕೆಲಸವಿದ್ದಾಗ್ಯೂ ಬೇಜಾರನ್ನು ಹೊಂದದೆ, ಸದಾ ಸಂತೋಷಚಿತ್ತರಾಗಿ, ಯಾವುದರಲ್ಲಿಯೂ ಸ್ವತ್ವವನ್ನಿಟ್ಟುಕೊಳ್ಳದೆ ಇವರಂತೆ ಕೆಲಸಮಾಡತಕ್ಕ ವರು ದುರ್ಲಭರು. ಒಂದು ಕೆಲಸದಲ್ಲಿ ಬೇಜಾರಾದರೆ ಮತ್ತೊಂದು ಕೆಲಸದಲ್ಲಿ ವಿಶ್ರಾಂತಿಹೊಂದುವ ಅಭ್ಯಾಸವನ್ನು ಮಾಡಿಕೊಂಡಿರುವುದೇ, ಎಷ್ಟು ಕೆಲಸಗಳು ಬಂದಾಗ್ಯೂ ಅದನ್ನು ರೀತಿಯಿಂದ ಮಾಡತಕ್ಕ ಶಕ್ತಿ ಯನ್ನು ಎಲ್ಲರಿಗೂ ಉಂಟುಮಾಡುವುದು. ಆದರೆ, ಇಂಥ ಶಕ್ತಿಯನ್ನು ಅಪೇಕ್ಷಿಸತಕ್ಕವರು, ಆಹಾರ ವಿಹಾರಗಳಲ್ಲಿ ಕ್ಲುಪ್ತವಾಗಿದ್ದುಕೊಂಡು, ಜಿತೇಂದ್ರಿಯರಾಗಿ, ಕೂಡಿದಮಟ್ಟಿಗೂ ಅರಿಷಡ್ವರ್ಗಗಳನ್ನು ಗೆದ್ದು, ಧರ್ಮಮಾರ್ಗದಲ್ಲಿ ಪರಾಯಣರಾಗಿರಬೇಕು. ಹಾಗಿಲ್ಲದಿದ್ದರೆ, ಈ ರೀತಿಯಲ್ಲಿ ಕೆಲಸಮಾಡುವುದಕ್ಕೆ ಬೇಕಾದ ಶಾಂತಿಯು ಲಭ್ಯವಾಗು ವುದಿಲ್ಲ.



## ಪರಿಚ್ಛೇದ ೪.

ಮಹಾಕವಿಗಳ ಶಕ್ತಿಯು ಅದ್ಭುತವಾದುದು. ವಾಲ್ಮೀಕಿಯು ರಾಮಾಯಣವನ್ನು ಬರೆಯದೆ ಇದ್ದಿದ್ದರೆ, ಮನೋವಾಕ್ಕರ್ಮಗಳಲ್ಲಿಯೂ ಧರ್ಮಿಷ್ಠನಾಗಿದ್ದ ಶ್ರೀರಾಮನು, ಅವತಾರಪುರುಷನೆಂದು ಆಚಂದ್ರಾರ್ಕವಾಗಿ ಸ್ಮರಿಸಲ್ಪಡುತಿದ್ದನೇ? ಇವನ ಚರಿತ್ರೆಯನ್ನು ಲಕ್ಷಾಂತರಜನಗಳು ಓದಿ ಆನಂದಭರಿತರಾಗುತಿದ್ದರೇ? ಎಂಥ ಕಷ್ಟಕಾಲ ಬಂದಾಗ್ಯೂ ಶ್ರೀರಾಮನೇ ಜಗದೀಶ್ವರಸ್ವರೂಪನಾಗಿದ್ದರೆ ಹೇಗೋ-ಹಾಗೆ ಅವನು ಸ್ಮರಿಸಲ್ಪಡುತಿದ್ದನೇ? ಪುರಾಣಪುರುಷರೆಲ್ಲ ಪುಣ್ಯಶ್ಲೋಕರಾಗಿ ಗಣಿಸಲ್ಪಡುವುದಕ್ಕೆ, ವಾಲ್ಮೀಕಿ ವ್ಯಾಸ ಮೊದಲಾದ ಮಹಾನುಭಾವರುಗಳೇ ಮುಖ್ಯಕಾರಣಭೂತರು. ಷೇಕ್ಸ್ಪಿಯರ್ ಮಹಾಕವಿಯು, ಬ್ರೂಟಸ್ಸನ ಹೆಸರು ಸೂರ್ಯನಂತೆ ಬೆಳಗುವಹಾಗೆ ಮಾಡಿದನು ಫಾರ್ಸೇಲಿಯಾ ಎಂಬ ಯುದ್ಧವು ಪ್ರಪಂಚದ ಹಣೆಯಬರಹವನ್ನು ನಿಷ್ಕರ್ಷಿಸತಕ್ಕುದಾಗಿದ್ದಿತು. ಈ ಯುದ್ಧಸನ್ನಿಹಿತವಾಗಿರುವಾಗಲೂ ಕೂಡ, ಬ್ರೂಟಸ್ಸನು ಒಂದು ಕಾವ್ಯವನ್ನು ಓದುತ್ತ ಅದರ ಸಾರಾಂಶವನ್ನು ಬರೆಯುತಿದ್ದನು. ಪ್ಲಿನೀ ಎಂಬ ಮಹಾಕವಿಯು, ಭೋಜನಮಾಡುವಾಗಲೂ ಕೂಡ ಮಹಾಕಾವ್ಯಗಳಲ್ಲಿ ಯಾವುದಾದರೊಂದನ್ನು ಓದಿಸಿ ಕೇಳುತ ಭೋಜನಮಾಡುತಿದ್ದನು. ಹಾಗಿಲ್ಲದಿದ್ದರೆ ಇವನಿಗೆ ಅನ್ನವೇ ರುಚಿಸುತಿರಲಿಲ್ಲ. ಯಾವಾಗಲೂ ಪುಸ್ತಕಗಳಿಲ್ಲದೆ ಇವನು ಇರುತಿರಲಿಲ್ಲ. ಬಹಿರ್ಭೂಮಿಗೆ ಹೋಗುವಾಗಲೂ ಕೂಡ ಯಾವುದಾದರೂ ಗ್ರಂಥವನ್ನು ಅವಲೋಕಿಸುತ್ತ ಅಥವಾ ಚಿಂತಿಸುತ್ತ

ಇರುತಿದ್ದನು. ಪೆಟ್ರಾ ಎಂಬ ಮಹಾಕವಿಯು, ಒಂದು ನಿಮಿಷವಾದರೂ ಉದ್ಗ್ರಂಥಗಳ ವ್ಯಾಸಂಗವಿಲ್ಲದೆ ಇರುತಿರಲಿಲ್ಲ. ಇವನು ಸದಾ ವ್ಯಾಸಂಗ ಮಾಡುತಿರುವುದನ್ನು ನೋಡಿ, ಇವನಿಗೆ ಎಂಟು ಹತ್ತು ದಿನ ವಿಶ್ರಾಂತಿಯನ್ನು ಕೊಡಬೇಕೆಂದು, ಇವನ ಪರಮಾಪ್ತನಾದ ಕಾರ್ಡಿನಲ್ ಕಲೋನಾ ಎಂಬವನು, ಇವನ ಪುಸ್ತಕಭಂಡಾರದ ಬೀಗದಕೈಯನ್ನು ಕೇಳಿದನು. ಅವನ ಅಭಿಪ್ರಾಯವನ್ನು ತಿಳಿದುಕೊಳ್ಳದೆ, ಇವನು ಬೀಗದಕೈಯನ್ನು ಕೊಟ್ಟನು. ಪುಸ್ತಕಭಂಡಾರಕ್ಕೆ ಬೀಗವನ್ನು ಹಾಕಿ 'ಇನ್ನು ಹತ್ತುದಿನ ವಿಶ್ರಾಂತಿತೆಗೆದುಕೊಳ್ಳಬೇಕು ; ಯಾವ ಗ್ರಂಥವನ್ನೂ ಓದಕೂಡದು.' ಎಂದು ಅವನು ಆಜ್ಞಾಪಿಸಿದನು. ಇವನು ಅತ್ಯಂತ ಅಸಮಾಧಾನದಿಂದ ಆ ಆಜ್ಞೆಗೆ ಒಳಪಟ್ಟನು. ಮೊದಲನೆಯ ದಿವಸವೇ ಇವನಿಗೆ ಒಂದು ಯುಗವಾಗಿ ಪರಿಣಮಿಸಿತು. ಎರಡನೆಯ ದಿವಸ ತಲೆನೋವೂ ಜ್ವರವೂ ಉಂಟಾದುವು. ಈ ಅವಸ್ಥೆಯನ್ನು ನೋಡಿ, ಅವನ ಸ್ನೇಹಿತನು ಬೀಗದ ಕೈಯನ್ನು ಕೊಟ್ಟನು. ಎರಡುಮೂರು ಗಂಟೆಗಳೊಳಗಾಗಿ ಅವನಿಗೆ ತಲೆನೋವೂ ಜ್ವರವೂ ಹೋದುವು ; ಆರೋಗ್ಯವೂ ಉಂಟಾಯಿತು.

ಓದುವುದರಿಂದ ಮನುಷ್ಯನು ತುಂಬಿದ ಕೊಡದಂತಾಗುವನೆಂದು, ಲೋಕವ್ಯವಹಾರಜ್ಞರಲ್ಲಿ ಅಗ್ರಗಣ್ಯನಾದ ಲಾರ್ಡ್ ಬೇಕನ್ನಿನಿಂದ ಹೇಳಲ್ಪಟ್ಟಿರುವುದು. ಇದು ನಿಜವಾದ ಮಾತು. ಪ್ರಪಂಚ ಸೃಷ್ಟಿಯಾದುದು ಮೊದಲು ಇದುವರೆಗೂ, ಯಾವಜ್ಜೀವವೂ ಕಷ್ಟಪಟ್ಟು ವ್ಯಾಸಂಗಮಾಡಿ, ವ್ಯಾಸಂಗರೂಪವಾದ ತಪಃಪ್ರಭಾವದಿಂದ ಸಕಲಶಾಸ್ತ್ರವಿಶಾರದರಾಗಿ, ಅನೇಕರು ಅನೇಕ ಗ್ರಂಥಗಳನ್ನು ಬರೆದಿಟ್ಟಿರುವರು. ಈ ಗ್ರಂಥಗಳು

ರತ್ನಾಕರಗಳಂತೆ ಪರಿಣಮಿಸಿರುವುವು. ಸಾವಧಾನವಾಗಿ ವ್ಯಾಸಂಗಮಾಡ ತಕ್ಕವರಿಗೆ ಅವುಗಳು ಹಸ್ತಗತವಾಗುವುವು. ಅಂಥ ಗ್ರಂಥಗಳನ್ನು ವ್ಯಾಸಂಗಮಾಡಿ ತನ್ಮೂಲಕವಾಗಿ ಜ್ಞಾನರೂಪವಾದ ನಿಧಿಯನ್ನು ಯಾರು ತಮ್ಮ ಮನಸ್ಸಿನಲ್ಲಿ ತುಂಬಿಟ್ಟುಕೊಳ್ಳುವರೋ, ಅವರು ತುಂಬಿದವ ರಾಗುವರು. ಇಂಥ ವಿದ್ಯಾಧನವುಳ್ಳವರೇ ನಿಜವಾದ ಧನಿಕರು. ಮಿಕ್ಕವರ ಧನಗಳೆಲ್ಲವೂ ನಶ್ವರವಾದುವುಗಳು ; ಜಡವಾದುವುಗಳು ; ಜ್ಞಾನ ಸಾಧಕವಾದ ಶಾಸ್ತ್ರಗಳಂತೆ ಅಮೂಲ್ಯವಾದುವುಗಳಲ್ಲ. ಮನುಷ್ಯನನ್ನು ದೇವರಿಗೆ ಸಮಾನವಾಗಿ ಮಾಡತಕ್ಕುದು ಜ್ಞಾನವು. ಇಂಥ ಜ್ಞಾನಕ್ಕೆ ಸಾಧಕವಾದುವುಗಳು, ವಸ್ತುತತ್ವಜ್ಞಾನವನ್ನುಂಟುಮಾಡತಕ್ಕ ಗ್ರಂಥ ಗಳು. ಈ ಗ್ರಂಥಗಳ ವ್ಯಾಸಂಗದಿಂದ ಮನುಷ್ಯನು ಪರಿಪೂರ್ಣನಾಗುವ ನೆಂದು–ಲಾರ್ಡ್ ಬೇಕನ್ನನು ಹೇಳಿರುವುದು, ತುಂಬ ಯುಕ್ತಿಯುಕ್ತವಾ ಗಿದೆ. ಭಾಷಣವು ಮನುಷ್ಯನನ್ನು ಬೇಕಾದ ಕೆಲಸಗಳಲ್ಲೆಲ್ಲ ಸಿದ್ಧನನ್ನಾಗಿ ಮಾಡುವುದೆಂಬುದಾಗಿಯೂ, ಲೇಖನವು ತಪ್ಪಿಲ್ಲದವನನ್ನಾಗಿ ಮಾಡುವು ದೆಂಬುದಾಗಿಯೂ, ಲಾರ್ಡ್ ಬೇಕನ್ನನು ಹೇಳಿರುವನು. ಇದೂ ಸಹಜ ವಾದುದು. ಸಮಯೋಚಿತವಾಗಿ ಧರ್ಮವನ್ನು ಬಿಡದೆ ಮಾತನಾಡುವ ಶಕ್ತಿಯನ್ನು ಪಡೆದಿರತಕ್ಕವನು, ಎಲ್ಲ ಕೆಲಸಗಳಿಗೂ ಸಿದ್ಧನಾಗಿರುವನು. ಆದರಿಂದ, ಎಲ್ಲ ಕೆಲಸಗಳಲ್ಲಿಯೂ ಇವನಿಗೆ ಸಿದ್ಧಿಯುಂಟಾಗುವುದು. ಸರಿಯಾಗಿ ಬರೆಯತಕ್ಕ ಶಕ್ತಿಯುಳ್ಳವನು, ಎಂದಿಗೂ ನ್ಯೂನಾತಿರಿಕ್ತ ಗಳಿಗೆ ಗುರಿಯಾಗುವುದಿಲ್ಲ. ಓದುವುದು, ಮಾತನಾಡುವುದು, ಬರೆಯು ವುದು, ಈ ಮೂರೂ ಲೋಕವ್ಯವಹಾರಕ್ಕೆ ಅತ್ಯಂತಸಾಧಕವಾದುವುಗಳು.

ಇದರ ಜತೆಗೆ ಸಾವಧಾನವಾಗಿ ಪರ್ಯಾಲೋಚಿಸಿ ಕೆಲಸಮಾಡುವುದೂ ತಿಳಿದುಕೊಳ್ಳಲ್ಪಟ್ಟರೆ, ಈ ಮೇಲೆಹೇಳಿದ ಗುಣಾತಿಶಯಗಳೆಲ್ಲ ಸಾರ್ಥಕ ವಾಗುವುವು. ಓದುವುದನ್ನು ಅಭ್ಯಾಸಮಾಡತಕ್ಕವರು, ನಿಧಾನವಾಗಿ ಓದಿ ಅರ್ಥವನ್ನು ಗ್ರಹಿಸಿಕೊಳ್ಳಬೇಕು. ಓದಿದ ವಿಷಯಗಳನ್ನು ಚೆನ್ನಾಗಿ ಪರ್ಯಾಲೋಚಿಸಿ, ಯುಕ್ತಿಯುಕ್ತವಾಗಿ ಸಂಭಾಷಣಮಾಡುವುದನ್ನು ತಿಳಿದುಕೊಳ್ಳಬೇಕು. ಹಾಗೆ ತಿಳಿದುಕೊಂಡುದುದನ್ನು, ಸಂದೇಹಕ್ಕೆ ಆಸ್ಪದ ಬಾರದಂತೆ ಇತರರಿಗೆ ತಿಳಿಯಿಸುವುದಕ್ಕೋಸ್ಕರ, ಬರೆಯುವುದನ್ನೂ ಅಭ್ಯಾಸಮಾಡಿಕೊಳ್ಳಬೇಕು. ಈ ಮೂರು ಅಭ್ಯಾಸಗಳನ್ನೂ ಚೆನ್ನಾಗಿ ಮಾಡಿದವರು, ನಿಜವಾಗಿ ಪರಿಪೂರ್ಣರು. ಅವರು ಪ್ರಾಯಕವಾಗಿ ಲೋಕವ್ಯವಹಾರಜ್ಞರಲ್ಲಿ ಅಗ್ರಗಣ್ಯರಾಗುವರು.

ಅಚ್ಚಿನ ಕಾರ್ಖಾನೆಗಳು ಸ್ಥಾಪಿಸಲ್ಪಡುವುದಕ್ಕೆ ಮುಂಚೆ, ಪುಸ್ತಕ ಗಳು ಬಹಳ ಕೊಂಚವಾಗಿದ್ದುವು. ಅವುಗಳೆಲ್ಲ ಕೈಯಲ್ಲಿ ಬರೆಯಲ್ಪಟ್ಟು ವುಗಳಾಗಿದ್ದುವು. ಸ್ವಯಂ ಬರೆಯುವುದಕ್ಕೆ ಯಾರಿಗೆ ಶಕ್ತಿಯಿರುತಿ ದ್ದಿತೋ, ಅವರಲ್ಲಿ ಒಳ್ಳೆಯ ಪುಸ್ತಕಗಳಿರುತಿದ್ದುವು. ಸಿಸಿರೊ ಮತ್ತು ಕ್ವಿಂಟಲಿಯರ್ನ ಎಂಬವರ ಗ್ರಂಥಗಳ ಒಂದು ಪ್ರತಿಯನ್ನು ಬರೆದುಕೊಂಡು ಬರುವುದಕ್ಕೋಸ್ಕರ, ಫ್ರೆಂಚ್ ಗವರ್ನಮೆಂಟಿನವರು, ಲೇಖಕರನ್ನು ತಯಾರುಮಾಡಿ, ರಾಯಭಾರಿಗಳ ಜತೆಯಲ್ಲಿ ರೋಮ್ ಪಟ್ಟಣಕ್ಕೆ ಕಳುಹಿಸಿದರು. ಜಂಬ್ಲರ್ ಸಂಸ್ಥಾನದ ಮಠಾಧಿಪತಿಯಾದ ಆಲ್ಬರ್ಟಿನ ಭಂಡಾರದಲ್ಲಿ, ಕೈ ಬರಹದ ಪುಸ್ತಕಗಳು ನೂರೈವತ್ತರವರೆಗೆ ಇದ್ದುವು. ಯೂರೋಪ್ ಖಂಡದಲ್ಲಿ ಇದು ಅತ್ಯಂತ ದೊಡ್ಡ ಭಂಡಾರವೆಂದು ಗಣಿಸ

ಲ್ಪಟ್ಟಿದ್ದಿತು. ವಿಲಾಯತಿಯ ವಿಂಚಸ್ಟರ್ ಮಠಾಧಿಪತಿಯ ಭಂಡಾರದಲ್ಲಿ ಹದಿನೇಳು ಪುಸ್ತುಕಗಳಿದ್ದುವು. ಸೇಂಟ್‌ಸ್ವಿಥಿನ್ ಮಠದಿಂದ ಬೈಬಲ್ ಎಂಬ ಕ್ರೈಸ್ತವೇದವನ್ನು ಕೆಲವು ದಿವಸಗಳವರೆಗೂ ಸಾಲವಾಗಿ ತೆಗೆದು ಕೊಳ್ಳುವುದಕ್ಕೆ, ಅವನು ಮಠದ ಆಸ್ತಿಯನ್ನೆಲ್ಲ ಆಧಾರಮಾಡಿದನು. ಯಾವುದಾದರೂ ಮಠಕ್ಕೆ ಒಂದು ಪುಸ್ತುಕವನ್ನು ಕೊಟ್ಟರೆ, ಹಾಗೆ ಪುಸ್ತುಕವನ್ನು ಕೊಟ್ಟವನು ಜಹಗೀರುಗಳನ್ನು ಕೊಟ್ಟವನಿಗಿಂತಲೂ ಹೆಚ್ಚಾಗಿ ಗಣಿಸಲ್ಪಡುತಿದ್ದನು. ರಾಚಸ್ಟರ್ ಮಠಾಧಿಪತಿಯು, ಅರಿಸ್ಟೋಟಲಿನ ಗ್ರಂಥವನ್ನು ಕದ್ದವನಿಗೂ, ಆ ಗ್ರಂಥವನ್ನು ಬಚ್ಚಿಟ್ಟವನಿಗೂ, ಭಯಂಕರವಾದ ಶಿಕ್ಷೆಯನ್ನು ಮಾಡಿದನು. ಒಂದೆರಡು ಪುಸ್ತುಕಗಳು ಇದ್ದಾಗ್ಯೂ, ಅಂಥ ಪುಸ್ತಕಭಂಡಾರಗಳಿಗೆ ಬಲವಾದ ಕೊಟ್ಟಡಿಗಳನ್ನು ಮಾಡಿ, ಸರಕಾರದ ಖಜಾನೆಗೆ ಹಾಕತಕ್ಕ ಬೀಗಗಳನ್ನು ಹಾಕುತಿದ್ದರು. ಲಿಕರ್ಗಸ್ ಮತ್ತು ಪಿಥಾಗೊರಾಸ್ ಎಂಬಿಬ್ಬರು, ಜನ್ಮಾಂತರ ವಿಷಯವನ್ನು ತಿಳಿದುಕೊಳ್ಳುವುದಕ್ಕೆ ಈಜಿಪ್ಟ ಪರ್ಷ್ಯಾ ಇಂಡಿಯಾ ದೇಶಗಳಲ್ಲಿ ಯಾತ್ರೆಯನ್ನು ಮಾಡಿದರು. ಸೋಲನ್ ಮತ್ತು ಪ್ಲೇಟೋ ಎಂಬವರು, ಈಜಿಪ್ಟದೇಶಕ್ಕೆ ಹೋಗಿ, ಒಳ್ಳೆಯ ಪಾಂಡಿತ್ಯವನ್ನು ಸಂಪಾದಿಸಿಕೊಂಡು ಬಂದರು. ಹೆರಡೋಟಿನ್ ಮತ್ತು ಸ್ಟ್ರೇಬೋ ಎಂಬವರು, ದೇಶಾಟನವನ್ನು ಮಾಡಿ, ಚರಿತ್ರೆಯನ್ನೂ ಭೂಗೋಳವನ್ನೂ ತಿಳಿದುಕೊಂಡರು. ಪೂರ್ವಕಾಲದಲ್ಲಿ, ಹತ್ತು ಹನ್ನೆರಡು ಪುಸ್ತುಕಗಳುಳ್ಳವನು, ಚಕ್ರವರ್ತಿಗಿಂತಲೂ ದೊಡ್ಡವನೆಂದು ಗಣಿಸಲ್ಪಡುತಿದ್ದನು. ಆ ಕಾಲದಲ್ಲಿ ಪುಸ್ತುಕಗಳಿಗೆ ಇಷ್ಟು ಅಭಾವವಿದ್ದಾಗ್ಯೂ, ಜನಗಳು ನಮಗಿಂತಲೂ ಬುದ್ಧಿಶಾಲಿ

ಗಳಾಗಿದ್ದರು. ಈಗ ಸಾವಿರಾರು ಪುಸ್ತಕಗಳುಳ್ಳ ಭಂಡಾರಗಳು ಎಷ್ಟೋ ಜನಗಳ ವಶದಲ್ಲಿರುತ್ತವೆ. ಹೋಮರಿನ ಹಾಗೆ ಕವಿತ್ವವನ್ನು ಮಾಡತಕ್ಕವನೂ, ಥ್ಯೂಸಿಡೈಡೀಸ್ ಎಂಬವನ ಹಾಗೆ ಚರಿತ್ರೆಯನ್ನು ಬರೆಯತಕ್ಕವನೂ, ನಮ್ಮಲ್ಲಿ ಒಬ್ಬನೂ ಸಿಕ್ಕುವುದಿಲ್ಲ. ಅರಿಸ್ಟೋಟಲ್ ಮತ್ತು ಪ್ಲೇಟೋ ಎಂಬವರ ಲೇಖನಿಯ ಶಕ್ತಿಯುಳ್ಳವರಾಗಲಿ, ಡಿಮಾಸ್ತನೀಸನ ವಾಚಾಲತ್ವವುಳ್ಳವರಾಗಲಿ, ಎಲ್ಲಾದರೂ ದೊರೆಯುವರೇ? ಚಿತ್ರ ಶಿಲ್ಪ ಮೊದಲಾದ ವಿದ್ಯೆಗಳಲ್ಲಿಯೂ ಕೂಡ, ಪೂರ್ವದವರು ನಮಗಿಂತಲೂ ಹೆಚ್ಚಾದ ಶಕ್ತಿಯುಳ್ಳವರಾಗಿದ್ದರು. ಹೀಗಿರುವುದು, ಪಾಶ್ಚಾತ್ಯರಲ್ಲಿ ಮಾತ್ರವೇ ಅಲ್ಲ; ಆದಿಕವಿಯಾದ ವಾಲ್ಮೀಕಿಯಂತೆ ನವರಸಭರಿತವಾದ ಗ್ರಂಥವನ್ನು ಬರೆದಿರತಕ್ಕವರು, ನಮ್ಮ ಆಧುನಿಕ ಕವಿಗಳಲ್ಲಿ ಯಾರಿರುತ್ತಾರೆ? ಶ್ರೀಮಹಾವಿಷ್ಣುವಿಗೆ ಸಮಾನನೆಂದು ಗಣಿಸಲ್ಪಟ್ಟ ವ್ಯಾಸನಂತೆ, ಅದ್ಭುತವಾದ ಗ್ರಂಥಗಳನ್ನು ಯಾರು ಬರೆದಿರುತ್ತಾರೆ? ಕಾಳಿದಾಸ ಭವಭೂತಿ ದಂಡಿ ಮೊದಲಾದವರಂತೆ, ಲೋಕೋತ್ತರವಾದ ಗ್ರಂಥಗಳನ್ನು ಬರೆದಿರತಕ್ಕವರು ಈಗಣ ಕವಿಗಳಲ್ಲಿ ಅಪೂರ್ವವಲ್ಲವೆ? ಪಾಣಿನಿ ಗದಾಧರ ಪತಂಜಲಿ ನಾಗೋಜಿದೀಕ್ಷಿತ ಮೊದಲಾದವರಂತೆ, ಮೂಲಗ್ರಂಥಗಳನ್ನೂ ಭಾಷ್ಯಗಳನ್ನೂ ಬರೆಯತಕ್ಕವರು ನಮ್ಮಲ್ಲಿರುತ್ತಾರೆಯೆ? ವೇದಗಳನ್ನೂ ವೇದಾಂತಗಳನ್ನೂ ದರ್ಶನಗಳನ್ನೂ ಸ್ಮೃತಿಗಳನ್ನೂ ಪುರಾಣಗಳನ್ನೂ ಇತಿಹಾಸಗಳನ್ನೂ ಬರೆದು ಅದ್ವಿತೀಯ ಪಾಂಡಿತ್ಯವನ್ನು ತೋರಿಸಿರತಕ್ಕ ಪಂಡಿತೋತ್ತಮರು, ನಮ್ಮ ಪೌರ್ವಿಕರಲ್ಲಿ ವಿಶೇಷವಾಗಿರುತಿದ್ದರು. ಈಗ ಹಾಗೆ ಕೆಲಸಮಾಡತಕ್ಕವರು ಅತ್ಯಂತವಿರಳರಾಗಿರುತ್ತಾರೆ. ಶ್ರೀಶಂಕರಾ

ಚಾರ್ಯರು, ಶ್ರೀರಾಮಾನುಜಾಚಾರ್ಯರು, ಶ್ರೀಮಧ್ವಾಚಾರ್ಯರು, ಮತ್ತು ಈ ತ್ರಿಮತಗಳಲ್ಲಿ ಪ್ರಸಿದ್ಧರಾದ ವಿದ್ಯಾರಣ್ಯರು, ವೇದಾಂತದೇಶಿಕರು, ಟೀಕಾಚಾರ್ಯರು, ಇವರೇ ಮೊದಲಾದ ಅನೇಕ ಆಚಾರ್ಯರಂತೆ, ಮತ ಗ್ರಂಥಗಳನ್ನು ಬರೆಯುವುದರಲ್ಲಿ ಸಮರ್ಥರಾದವರೂ ಕೂಡ ಆಧುನಿಕರಲ್ಲಿ ವಿರಳರಾಗುತಲಿದ್ದಾರೆ. ಇದಕ್ಕೆ ಕಾರಣವೇನು ? ಪೂರ್ವಕಾಲದಲ್ಲಿ ಪುಸ್ತಕಗಳು ವಿಶೇಷವಾಗಿರುತಿರಲಿಲ್ಲ. ಇದ್ದ ಪುಸ್ತಕಗಳನ್ನು ಶ್ರದ್ಧೆಯಿಂದ ಓದುತ್ತಿದ್ದರು. ಪ್ರತಿಯೊಂದು ಪುಸ್ತಕವೂ ನೂರಾರುಸಲ ಓದಲ್ಪಟ್ಟು, ಅದರಲ್ಲಿರತಕ್ಕ ಪ್ರತಿಯೊಂದು ವಿಷಯವೂ ಚಿಂತಿಸಲ್ಪಡುತ್ತಿದ್ದಿತು. ಓದಿದುದು ಸ್ವಾಧೀನಪಡಿಸಿಕೊಳ್ಳಲ್ಪಟ್ಟ ಮೇಲೆ, ಅದಕ್ಕಿಂತಲೂ ಉತ್ತಮವಾದ ಗ್ರಂಥವು ಬರೆಯಲ್ಪಡುತ್ತಿದ್ದಿತು. ಸುಬಂಧುವಿನಿಂದ ಬರೆಯಲ್ಪಟ್ಟ ವಾಸವದತ್ತೆಯನ್ನೂ, ಬಾಣನಿಂದ ಬರೆಯಲ್ಪಟ್ಟ ಪೂರ್ವ ಕಾದಂಬರಿಯನ್ನೂ ನೋಡಿದರೆ, ಈ ವ್ಯಾಸಂಗದ ಮಹಿಮೆ ಗೊತ್ತಾಗುವುದು. ಬಾಣನು ಮಾಡಿದಷ್ಟು ವ್ಯವಸಾಯವನ್ನು ಈಗಣ ವಿದ್ಯಾರ್ಥಿಗಳು ಮಾಡಿದರೆ, ಅವನಂತೆಯೇ ಇವರೂ ಆಗುವುದರಲ್ಲಿ ಸಂದೇಹವಿಲ್ಲ. ಆದರೆ, ನಮ್ಮ ಪೌರ್ವಿಕರಲ್ಲಿ ಕೆಲವರಿಗಿದ್ದ ಕಾರ್ಯಸಾಧನ ಪ್ರಯತ್ನವು ಈಗಣ ವಿದ್ಯಾರ್ಥಿಗಳಲ್ಲಿ ಅಪೂರ್ವವಾಗಿದೆ. ಇದು ಬಹಳ ಶೋಚನೀಯವಾದುದು.

ಪುಸ್ತಕಗಳಲ್ಲಿ, ಶ್ರೇಯೋಭಿವೃದ್ಧಿಗೆ ಸಾಧಕಗಳಾದ ಪುಸ್ತಕಗಳು ಹೇಗೋ-ಹಾಗೆ ಅಶ್ರೇಯಸ್ಸಿಗೆ ಸಾಧಕಗಳಾದ ಪುಸ್ತಕಗಳೂ ಇರುವುವು. ಜಗದೀಶ್ವರನ ಸೃಷ್ಟಿಯಲ್ಲಿ, ಒಳ್ಳೆಯದೂ ಕೆಟ್ಟುದೂ ಎರಡೂ ನಿರ್ಮಾಣಮಾಡಲ್ಪಟ್ಟಿವೆ. ಅಮೃತ – ವಿಷ, ಪುಣ್ಯ – ಪಾಪ, ದೇವರು –

ಪಿಶಾಚ, ಮೇಧ್ಯ – ಅಮೇಧ್ಯ, ಸತ್ಕಾವ್ಯ – ಅಸತ್ಕಾವ್ಯ, ಸತ್ಯ – ಮಿಥ್ಯಾ, ಜಿತೇಂದ್ರಿಯತ್ವ – ಅಜಿತೇಂದ್ರಿಯತ್ವ, ಸ್ವರ್ಗ – ನರಕ, – ಈಪ್ರಕಾರವಾಗಿ ದ್ವಂದ್ವಸೃಷ್ಟಿಯು, ಎಲ್ಲಿ ತಿರುಗಿದಾಗ್ಯೂ ನಮ್ಮ ದೃಷ್ಟಿಪಥಕ್ಕೆ ಬೀಳು ವುದು. ವಿಚಾರಪರರಾದವರು, ಸದ್ಗ್ರಂಥಾವಲೋಕನವನ್ನು ಮಾಡಿ ಸದಿಷ್ಟಾರ್ಥಸಿದ್ಧಿಯನ್ನು ಹೊಂದುವರು; ವಿಚಾರಹೀನರಾದವರು, ಅಸತ್ಕಾವ್ಯಾಲಾಪಗಳನ್ನು ಮಾಡಿ, ಮಿಥ್ಯಾಪ್ರಪಂಚವಾಸಿಗಳಾಗಿ, ವಿಷವನ್ನು ಅಮೃತವೆಂದು ತಿಳಿದುಕೊಂಡು ಸೇವಿಸಿ, ಅನೇಕ ಅನರ್ಥಗಳಿಗೆ ಗುರಿಯಾಗುತ್ತಾರೆ. ಗ್ರಂಥಗಳಲ್ಲಿ, ಅಮೃತಪ್ರಾಯವಾಗಿಯೂ ಸಿದ್ಧೌಷಧಪ್ರಾಯವಾಗಿಯೂ ಸದಿಷ್ಟಾರ್ಥಸಿದ್ಧಿಗೆ ಸಾಧಕವಾಗಿಯೂ ಸದ್ಗತಿಗೆ ಮಾರ್ಗದರ್ಶಕವಾಗಿಯೂ ಇರತಕ್ಕುವುಗಳು, ಅಸಂಖ್ಯಾಕವಾಗಿರುತ್ತವೆ. ಅವುಗಳನ್ನು ವ್ಯಾಸಂಗಮಾಡಿ ಭ್ರಮರಗಳಂತೆ ಮಕರಂದವನ್ನು ಪರಿಗ್ರಹಿಸತಕ್ಕವರು, ಇಹಪರಗಳನ್ನು ಸಾಧಿಸುವರು. ಆದರೆ, ಜಗದೀಶ್ವರನ ಅಂಶಭೂತರಾದವರು ಸದ್ಗ್ರಂಥಗಳನ್ನು ಬರೆದು ಸ್ವರ್ಗಕ್ಕೆ ಸೋಪಾನಗಳನ್ನು ಕಟ್ಟುತಬಂದರೆ, ಪಿಶಾಚನ ಅಂಶದಿಂದ ಅವತರಿಸಿದ ಅನೇಕ ಗ್ರಂಥಕರ್ತರುಗಳು, ಪ್ಲೇಗ್ ಕಾಲರಾ ಮೊದಲಾದುವುಗಳಿಗಿಂತಲೂ ಹೆಚ್ಚಾದ ತೀಕ್ಷ್ಣತೆಯುಳ್ಳವುಗಳಾಗಿಯೂ ಅನರ್ಥಕಾರಿಯಾಗಿಯೂ ಇರುವ ಅಸತ್ಕಾವ್ಯಗಳನ್ನು ಬರೆದು, ಅವುಗಳ ಮೂಲಕ ಸಕಲೇಂದ್ರಿಯಗಳೂ ಜಘನ್ಯವಾದ ವಿಷಯಗಳಲ್ಲಿ ಪ್ರವರ್ತಿಸುವಂತೆ ಮಾಡಿ, ಸ್ತ್ರೀಪುರುಷರು ಈ ಅಸತ್ಕಾವ್ಯಾಲಾಪದಿಂದ ದುರ್ಮಾರ್ಗಪ್ರವರ್ತಕರಾಗುವಂತೆಯೂ ಅದರಿಂದ ಅರ್ಥಹಾನಿ ಮಾನಹಾನಿ ಪ್ರಾಣಹಾನಿಗಳಾಗುವಂತೆಯೂ ಮಾಡುವರು.

ಇವರ ಗ್ರಂಥಗಳಿಂದ ಕೆಡತಕ್ಕವರ ಸಂಖ್ಯೆಯು, ನೂರರಲ್ಲಿ ತೊಂಭತ್ತಕ್ಕೆ ಕಡಮೆಯಾಗುವುದಿಲ್ಲ. ಅಭಕ್ಷ್ಯಭೋಜನ, ಅಪೇಯಪಾನ, ಅಗಮ್ಯಾಗಮನ, ಅನುಪಾದೇಯಪರಿಗ್ರಹ, ಇವುಗಳಿಗೆಲ್ಲ ಅಸತ್ಕಾವ್ಯಗಳೇ ಮುಖ್ಯಕಾರಣಗಳು. ಪಾಶ್ಚಾತ್ಯರಲ್ಲಿ ಆಚರಣೆಯಲ್ಲಿರತಕ್ಕ ನಾಟಕಗಳೂ, ಆಖ್ಯಾನಗಳೂ, ಆಖ್ಯೇಯಗಳೂ, ಈ ಭಾಗದಲ್ಲಿ ಅಪ್ರತಿಹತವಾದ ಅನರ್ಥಕ್ಕೆ ಕಾರಣವಾಗಿರುವುವು. ಮಿಥ್ಯಾಪ್ರಪಂಚಗಳನ್ನು ನಿರ್ಮಾಣಮಾಡಿ, ಈ ಗ್ರಂಥಕರ್ತರು, ತಮ್ಮ ಗ್ರಂಥಗಳನ್ನೋದತಕ್ಕವರಿಗೆ ಸಾರಾಸಾರವಿಚಾರವನ್ನು ತಪ್ಪಿಸಿ, ಅವರು ಉನ್ಮತ್ತಪ್ರಪಂಚಕ್ಕೆ ಅರ್ಹರಾಗುವಂತೆ ಮಾಡುತ್ತಾರೆ. ಪೂರ್ವಾಪರಜ್ಞಾನವಿಲ್ಲದ ಬಹುಜನ ಸ್ತ್ರೀಪುರುಷರು, ಅಸತ್ಕಾವ್ಯರೂಪವಾದ ಈ ವಿಷದ್ರವ್ಯದ ಸೇವನೆಯಿಂದ ಉನ್ಮತ್ತರಾಗಿ, ಪ್ರಥಮತಃ ಹುಚ್ಚರ ಆಸ್ಪತ್ರೆಗೂ-ಅನಂತರ ಅಕಾಲಮರಣಕ್ಕೂ ಪಾತ್ರರಾಗುವರು. ಇಂಥ ಗ್ರಂಥಗಳು ಪಾಶ್ಚಾತ್ಯರಲ್ಲಿ ಅನೇಕ ಭಾಷೆಗಳಲ್ಲಿ ವಿಶೇಷವಾಗಿರುತ್ತವೆ; ಇಂಗ್ಲೀಷು ಭಾಷೆಗೆ ಇವುಗಳು ವಿಶೇಷವಾಗಿ ತರ್ಜುಮೆ ಮಾಡಲ್ಪಡುತ್ತಲಿವೆ. ವಿದ್ಯಾರ್ಥಿಗಳು ಅವುಗಳನ್ನು ಪಠಿಸಿ ಅದರಿಂದುಂಟಾಗತಕ್ಕ ಅನರ್ಥಕ್ಕೆ ಗುರಿಯಾಗದಿರುವುದುತ್ತಮ. ಇಂಥ ದುಷ್ಟವಾದ ಗ್ರಂಥಗಳು ನಮ್ಮಲ್ಲಿಯೂ ಇರುತ್ತವೆ. ಅವುಗಳನ್ನು ಪರಿತ್ಯಾಗಮಾಡುವುದರಲ್ಲಿಯೂ ವಿದ್ಯಾರ್ಥಿಗಳು ಜಾಗರೂಕರಾಗಿರಬೇಕು. ಬೈರನ್ನನ ಗ್ರಂಥಗಳು ಇಂಗ್ಲಿಷ್ ಭಾಷೆಯಲ್ಲಿ ಬಹಳ ರಸಭರಿತವಾದುವುಗಳೆಂದು ಎಣಿಸಲ್ಪಟ್ಟಿವೆಯೆಂಬುದಾಗಿಯೂ, ಆದಾಗ್ಗೂ ಅವನ ಗ್ರಂಥಗಳು ಅನೇಕ ಭಾಗಗಳಲ್ಲಿ ಅನರ್ಥಕ್ಕೆ ಹೇತುಗಳೆಂಬುದಾಗಿಯೂ, ಶಬ್ದಕ್ಕೂ ರಸಪುಷ್ಟಿಗೂ

ಮನೋವಿಕಾಸಕ್ಕೂ, ಅವನ ಗ್ರಂಥಗಳಿಗಿಂತ ಬರ್ಕಿನ ಗ್ರಂಥಗಳು ಸರ್ವೋತ್ಕೃಷ್ಟವಾದುವುಗಳೆಂಬುದಾಗಿಯೂ, ಆಂಗ್ಲೇಯ ಪಂಡಿತರು ಹೇಳುತ್ತಾರೆ. ಬೈರನ್ನಿನ ಗ್ರಂಥಗಳಲ್ಲಿ, ಅಯಿಲ್ಸ್ ಆಫ್ ಗ್ರೀಸ್ ಎಂಬುದೇ ಮೊದಲಾದ ಕೆಲವು ಗ್ರಂಥಗಳು, ಸತ್ಕಾವ್ಯಗಳಲ್ಲಿ ಸೇರಿಸಲ್ಪಡುವುದಕ್ಕೆ ಅರ್ಹವಾಗಿರುತ್ತವೆ ಅಂಥವುಗಳನ್ನು ವ್ಯಾಸಂಗಮಾಡುವುದರಿಂದ ಯಾವ ಹಾನಿಯೂ ಉಂಟಾಗುವುದಿಲ್ಲ. ವಿದ್ಯಾರ್ಥಿಗಳು, ಪಂಡಿತೋತ್ತಮರಿಂದಲೂ ಗುರುಗಳಿಂದಲೂ ಗ್ರಂಥಗಳ ಗುಣದೋಷಗಳನ್ನು ತಿಳಿದುಕೊಂಡು ಸದ್ಗ್ರಂಥಗಳನ್ನು ಮಾತ್ರ ಅವಲೋಕಿಸುತ್ತ ಬಂದರೆ, ಅಸತ್ಕಾವ್ಯಾಲಾಪಗಳಿಂದುಂಟಾಗತಕ್ಕ ಅನರ್ಥಗಳನ್ನು ತಪ್ಪಿಸಿಕೊಳ್ಳಬಹುದು. ಪ್ಲೇಗ್ ಮೊದಲಾದ ಸಾಂಕ್ರಾಮಿಕ ರೋಗಗಳ ಸೋಂಕಿರತಕ್ಕ ಸ್ಥಳಗಳಿಗೆ ಹೋಗಬಾರದೆಂದು, ಸಾಂಕ್ರಾಮಿಕ ರೋಗಗಳ ನಿದಾನವನ್ನು ಬಲ್ಲವರು ಹೇಳುವರು. ದೇಹಕ್ಕೆ ಬಾಧೆಯನ್ನುಂಟುಮಾಡತಕ್ಕ ಸಾಂಕ್ರಾಮಿಕ ರೋಗಗಳಂತೆಯೇ, ಬುದ್ಧಿಗೆ ರೋಗವನ್ನುಂಟುಮಾಡಿ ಇಹಪರಗಳನ್ನು ಕೆಡಿಸತಕ್ಕ ಸಾಂಕ್ರಾಮಿಕರೋಗಗಳ ಕ್ರಿಮಿಗಳು, ಅಸತ್ಕಾವ್ಯಗಳಲ್ಲಿ ಅಸಂಖ್ಯಾಕವಾಗಿರುವುವು. ಅಂಥ ಸಾಂಕ್ರಾಮಿಕರೋಗಗಳಿಗೆ ಮಾತೃಸ್ಥಾನವಾದ ಅಸತ್ಕಾವ್ಯರೂಪವಾದ ಗ್ರಂಥಗಳನ್ನು, ಖಂಡಿತವಾಗಿ ವರ್ಜಿಸಿಬಿಡಬೇಕು. ಹಾಗೆ ಮಾಡುವುದಕ್ಕೆ ಶಕ್ತಿಯಿಲ್ಲದವರು, ದೇಹಕ್ಕೂ ಬುದ್ಧಿಗೂ ಆತ್ಮಕ್ಕೂ ಇಷ್ಟಾರ್ಥಸಿದ್ಧಿಗೂ ಅಪಾಯವನ್ನುಂಟುಮಾಡಿಕೊಳ್ಳುವರು.

ಅಚ್ಚಿನ ಕಾರ್ಖಾನೆಗಳು ಎಲ್ಲೆಲ್ಲಿಯೂ ಹೆಚ್ಚುತ್ತಲಿವೆ. ಸಾಮಾನ್ಯರಾದ ಜನಗಳೂ ಕೂಡ ಗ್ರಂಥಗಳನ್ನು ಗೊತ್ತಿಲ್ಲದಹಾಗೆ ಬರೆಯುವುದಕ್ಕುಪ

ಕ್ರಮಿಸಿದ್ದಾರೆ. ಆದರೆ ಉತ್ತಮಗ್ರಂಥಗಳು ಬಹಳವಿರಳವಾಗಿವೆ. ಮಧ್ಯಮವಾಗಿಯೂ ಅಧಮವಾಗಿಯೂ ಇರತಕ್ಕ ಗ್ರಂಥಗಳು, ಅಸಂಖ್ಯಾಕವಾಗಿ ಮುದ್ರಿಸಲ್ಪಡುತ್ತಲಿವೆ. ಯಾವ ಪುಸ್ತಕವನ್ನು ಓದಬೇಕೋ, ಯಾವುದನ್ನು ಬಿಡಬೇಕೋ, ಅದನ್ನು ಗೊತ್ತುಮಾಡುವುದೇ ಕಷ್ಟವಾಗಿದೆ. ಆದಾಗ್ಯೂ, ಸದ್ಗ್ರಂಥವ್ಯಾಸಂಗಮಾಡಬೇಕೆಂಬ ಅಪೇಕ್ಷೆಯುಳ್ಳವರು, ಯಾವುದು ಅವಲೋಕನಕ್ಕರ್ಹವೋ–ಯಾವುದು ಅಲ್ಲವೋ–ಅದನ್ನು ಗೊತ್ತುಮಾಡಿಕೊಳ್ಳಬೇಕು. ಹಾಗೆ ಗೊತ್ತುಮಾಡಿಕೊಳ್ಳುವುದಕ್ಕೆ ಉಪಾಯಗಳುಂಟು. ಅವುಗಳನ್ನುಪಯೋಗಿಸಿದವರು, ಅವುಗಳ ವಿಷಯವನ್ನು ಹೇಳುವುದುಂಟು. ಹಾಗೆ ಹೇಳತಕ್ಕವರು ಗುಣದೋಷಗಳನ್ನು ತಿಳಿದುಕೊಳ್ಳುವುದಕ್ಕೆ ಸಮರ್ಥರಾಗಿದ್ದರೆ, ಅವರ ಅಭಿಪ್ರಾಯದಂತೆ ನಡೆಯಬಹುದು ; ಹಾಗಿಲ್ಲದಿದ್ದರೆ, ಪುಸ್ತಕದ ವಿಷಯಸೂಚಿಕೆಯನ್ನು ನೋಡಿ ಯಾವುದಾದರೊಂದೆರಡು ಭಾಗವನ್ನು ಪರೀಕ್ಷಿಸಿ, ಅದರಿಂದ ಪುಸ್ತಕದ ಯೋಗ್ಯತೆಯನ್ನು ಗೊತ್ತುಮಾಡಬಹುದು. ಸ್ಥಾಲೀಪುಲಾಕನ್ಯಾಯದಂತೆ, ಇಂಥ ಪರೀಕ್ಷೆಯು ಪ್ರಾಯಕವಾಗಿ ಸಾಧುವಾಗಿರುವುದು. ಭಕ್ಷ್ಯಭೋಜ್ಯಗಳನ್ನು ಬೇಕಾದಹಾಗೆ ಮಾಡಿರುತ್ತಾರೆ ;— ಅವುಗಳು ಚೆನ್ನಾಗಿ ಮಾಡಲ್ಪಟ್ಟಿವೆಯೋ ಇಲ್ಲವೇ ಎಂಬುದನ್ನು ಪರೀಕ್ಷಿಸುವುದಕ್ಕೆ, ಹೊಟ್ಟೆತುಂಬುವವರೆಗೂ ಭೋಜನಮಾಡತಕ್ಕ ಆವಶ್ಯಕವಿಲ್ಲ. ರುಚಿನೋಡುವುದರಿಂದ, ಪಾಕ ಸರಿಯಾಗಿ ಆಗಿರುವುದೋ ಇಲ್ಲವೋ ಎಂಬುದನ್ನು ಗೊತ್ತುಮಾಡಬಹುದು. ಹೀಗೆ ಗ್ರಂಥಗಳ ಗುಣದೋಷಗಳನ್ನೂ ಕೂಡ ಸುಲಭವಾಗಿ ಗೊತ್ತುಮಾಡಬಹುದು. ಸಿಬಿಲರೋಗಹರ

ಗಳೆಂದು, ಕೆಲವು ಔಷಧಗಳನ್ನು ಕೆಲವುಜನ ವೈದ್ಯರು ಪ್ರಕಟಿಸುತ್ತಾರೆ. ಅವರ ಪ್ರಕಟನೆ ನಿಜವೇ ಸುಳ್ಳೇ ಎಂಬುದನ್ನು ಗೊತ್ತುಮಾಡುವುದಕ್ಕೂ ಉಪಾಯಗಳಿರುತ್ತವೆ. ಅಂಥ ಔಷಧಗಳನ್ನು ತೆಗೆದುಕೊಂಡವರು ಅವು ಗಳಿಂದ ಜನಗಳು ಪ್ರಯೋಜನ ಹೊಂದಿರುವರೇ ಇಲ್ಲವೇ ಎಂಬುದನ್ನು ತಿಳಿದುಕೊಳ್ಳುವುದು ಸಾಧ್ಯವು. ಈರೀತಿಯಾದ ಅನುಭವವುಂಟಾದ ಹೊರತು, ಆ ಔಷಧವನ್ನು ಬುದ್ಧಿಶಾಲಿಗಳು ಉಪಯೋಗಿಸುವುದಿಲ್ಲ. ಅನೇಕ ಔಷಧಗಳು, ಅನೇಕ ಹೊಸ ರೋಗಗಳನ್ನು ಹುಟ್ಟಿಸುವುವು; ರೋಗಗಳನ್ನು ಪರಿಹರಿಸುವುದಕ್ಕೆ ಬದುಲಾಗಿ ಪ್ರಾಣವನ್ನೂ ಅಪಹರಿಸು ವುವು. ಆದುದರಿಂದ, ಉದ್ದಿಷ್ಟವಾದ ಔಷಧವು ರೋಗಪರಿಹಾರಮಾಡ ದಿದ್ದಾಗ್ಗೂ ಹೊಸ ರೋಗಗಳನ್ನು ಹುಟ್ಟಿಸುವುದಿಲ್ಲವೆಂದು ತಿಳಿದಹೊರತು, ವಿಚಾರಪರರಾದವರು ಆ ಔಷಧವನ್ನು ತೆಗೆದುಕೊಳ್ಳುವುದಿಲ್ಲ. ರಸ ಗಂಧಕ ಪಾಷಾಣ ಮಿಶ್ರವಾದ ಔಷಧವನ್ನು ಸೇವಿಸುವುದರಲ್ಲಿ ಹೇಗೆ ಜಾಗರೂಕತೆಯು ಆವಶ್ಯಕವೋ, ಹಾಗೆಯೇ ಗ್ರಂಥಾವಲೋಕನದಲ್ಲಿಯೂ ಕೂಡ ಜಾಗರೂಕತೆಯು ಅತ್ಯಾವಶ್ಯಕವು. ಸತ್ಕಾವ್ಯಾಲಾಪದಿಂದ ಶ್ರೇಯಸ್ಸನ್ನೂ, ಅಸತ್ಕಾವ್ಯಾಲಾಪದಿಂದ ಅಶ್ರೇಯಸ್ಸನ್ನೂ ಹೊಂದು ವುದು ಜಗತ್ಪ್ರಸಿದ್ಧವಾಗಿರುವುದು. ಆದುದರಿಂದ, ಪ್ರತಿಯೊಬ್ಬರೂ ಅಸ ದ್ಗ್ರಂಥಗಳ ಅವಲೋಕನದಿಂದ ಬುದ್ಧಿಕೆಡುವಂತೆ ಮಾಡಿಕೊಳ್ಳದಿರುವು ದುತ್ತುಮವು.

ಪುಸ್ತಕಗಳನ್ನೋದುವ ಕ್ರಮವನ್ನು ಎಲ್ಲರೂ ತಿಳಿದುಕೊಳ್ಳಬೇಕು. ಇದನ್ನು ಚೆನ್ನಾಗಿ ತಿಳಿದುಕೊಳ್ಳಬೇಕಾದರೆ, ಊಟಮಾಡತಕ್ಕವರು ಹೇಗೆ

ಮಾಡುತ್ತಾರೋ ಅದನ್ನು ನೋಡಬೇಕು. ಭೋಜನಮಾಡತಕ್ಕವರು, ಬಡಿಸಿರತಕ್ಕ ಪದಾರ್ಥಗಳನ್ನು ಪ್ರಥಮತಃ ಪ್ರತಿಯೊಂದನ್ನೂ ರುಚಿ ನೋಡುವರು. ಆಮೇಲೆ ‹ ಇಂಥ ಪದಾರ್ಥಗಳು ರುಚಿಯಾಗಿವೆ, ಇಂಥ ಪದಾರ್ಥಗಳು ರುಚಿಯಾಗಿಲ್ಲ, ಇವುಗಳು ಸೇವನೆಗೆ ಅರ್ಹವಾದುವುಗಳು, ಇವುಗಳು ಪರಿತ್ಯಾಜ್ಯಗಳು.' ಎಂದು ಗೊತ್ತುಮಾಡಿಕೊಳ್ಳುವರು. ಅನಂತರ ಇಷ್ಟವಾದ ಪದಾರ್ಥಗಳನ್ನು ಭುಜಿಸುವರು. ಪುಸ್ತಕಗಳಲ್ಲಿಯೂ, ಮನೋಹರವಾದ ವಿಷಯಗಳೂ, ಶ್ರೇಯಸ್ಕರವಾದ ವಿಷಯಗಳೂ, ಅಶ್ರೇಯಸ್ಕರವಾದ ವಿಷಯಗಳೂ ಬೇಕಾದಹಾಗೆ ತುಂಬಿರುವುವು. ವಾಚಕನು, ಪುಸ್ತಕವನ್ನು ನೋಡಿದ ಕೂಡಲೆ, ಅದರ ಮುಖಭಾಗವನ್ನು ನೋಡಬೇಕು. ‹ ಗ್ರಂಥಕರ್ತನಾರು ? ಮುದ್ರಿಸಿದವನಾರು ? ಪೀಠಿಕೆಯಲ್ಲಿ ಏನುಬರೆದಿದ್ದಾನೆ ? ವಿಷಯಸೂಚಿಕೆಯಲ್ಲಿ ಏನು ಬರೆಯಲ್ಪಟ್ಟಿದೆ? ಅಧ್ಯಾಯಗಳನ್ನು ಯಾವರೀತಿಯಲ್ಲಿ ವಿಂಗಡಿಸಿದ್ದಾನೆ ? ಗ್ರಂಥದ ಉದ್ದೇಶವೇನು ? ಈ ವುದ್ದೇಶಸಾಧನೆಗೆ ಬೇಕಾದ ವಿಷಯಗಳು ನಿರೂಪಿಸಲ್ಪಟ್ಟಿರುವುವೆ? ಈ ಗ್ರಂಥದಲ್ಲಿ ಹೇಳಲ್ಪಟ್ಟ ವಿಷಯಗಳು ನಿಜವೆ? ಇದನ್ನು ತಿಳಿದುಕೊಳ್ಳುವುದರಿಂದ ಶ್ರೇಯಸ್ಸುಂಟಾಗುವುದೆ ? ಅಥವಾ ಅಶ್ರೇಯಸ್ಸುಂಟಾಗುವುದೆ ?' ಈ ವಿಷಯಗಳನ್ನೆಲ್ಲ ಮೊದಲು ನೋಡಿ ಪರ್ಯಾಲೋಚಿಸಿ, ಅನಂತರ ಕ್ರಮವಾಗಿ ವ್ಯಾಸಂಗಮಾಡುವುದಕ್ಕುಪಕ್ರಮ ಮಾಡಬೇಕು. ಗ್ರಂಥವನ್ನೋದುವಾಗ್ಗೆ, ಆ ಗ್ರಂಥದ ಗುಣದೋಷಗಳನ್ನು ಅಲ್ಲಲ್ಲಿಯೇ ಬರೆಯುತ್ತಬರಬೇಕು. ಗ್ರಂಥವನ್ನೋದಿ ಪೂರಯಿಸಿದ ಕೂಡಲೆ, ಈ ಅಭಿಪ್ರಾಯಗಳನ್ನು ಗರ್ಭೀಕರಿಸಿ ಸಂಕ್ಷೇಪವಾಗಿ ಬರೆದಿಡ

ಬೇಕು. ಅದೇ ಗ್ರಂಥವನ್ನು ಸ್ನೇಹಿತರಾರಾದರೂ ಓದುತ್ತಿದ್ದರೆ, ಗುಣ ದೋಷಗಳನ್ನು ಚರ್ಚೆಮಾಡಿ, ಆ ಚರ್ಚೆಯಿಂದ ಪುನರವಲೋಕನವು ಆವಶ್ಯಕವೆಂದು ತೋರಿದರೆ, ಪುನಃ ಅವಲೋಕಿಸಿ, ನಿಜವಾದ ಅಭಿಪ್ರಾಯ ವನ್ನು ನಿರ್ಧರಿಸಿಕೊಂಡು, ಅದನ್ನು ಬರೆದಿಡಬೇಕು. ಈ ರೀತಿಯಲ್ಲಿ ವ್ಯಾಸಂಗಮಾಡುವುದಕ್ಕೆ ಅವಕಾಶವು ಸ್ವಲ್ಪ ಹೆಚ್ಚಾಗಿ ಬೇಕಾಗುತ್ತದೆ; ಆದರೆ, ಹೀಗೆ ಮಾಡಲ್ಪಟ್ಟ ವ್ಯಾಸಂಗವು ಉಪರಿಪ್ಲವವಾಗಿ ಮಾಡಲ್ಪಟ್ಟ ವ್ಯಾಸಂಗಕ್ಕಿಂತಲೂ ವಿಶೇಷ ಪ್ರಯೋಜನಕಾರಿಯಾಗಿರುತ್ತದೆ.

ಗ್ರಂಥಗಳನ್ನು ಬರೆಯಲಪೇಕ್ಷೆಯುಳ್ಳವರು, ಇತರರು ಬರೆದಿರತಕ್ಕ ಗ್ರಂಥಗಳನ್ನು ಸರಿಯಾಗಿ ಅರ್ಥಮಾಡಿಕೊಂಡು ಓದಬೇಕು. ಅವು ಕಂಠಸ್ಥ ವಾಗುವವರೆಗೂ ಪುನಃಪುನಃ ಓದಿ ಗಟ್ಟಿಮಾಡಬೇಕು. ಅವನ್ನು ಆಗಾಗ್ಗೆ ಆವೃತ್ತಿಹಾಕಬೇಕು. ಮಹಾಕವಿಗಳು ಬರೆದ ಗ್ರಂಥಗಳಲ್ಲಿ ಹತ್ತುಸಾವಿರ ಶ್ಲೋಕಗಳನ್ನು ಯಾರು ಬೇಜಾರಿಲ್ಲದೆ ಗಟ್ಟಿಮಾಡಿ ಒಪ್ಪಿಸುವರೋ, ಅವರು ಸ್ವಲ್ಪ ಹೆಚ್ಚು ಕಡಮೆಯಾಗಿ ಆ ಮಹಾಕವಿಗಳಂತೆ ಕವಿತ್ವಮಾಡ ತಕ್ಕ ಶಕ್ತಿಯನ್ನು ಪಡೆಯುವರು. ಪದ್ಯಕಾವ್ಯಗಳಲ್ಲಿ ಹೇಗೋ ಹಾಗೆ ಗದ್ಯಕಾವ್ಯಗಳಲ್ಲಿಯೂ ಕೂಡ ವಿದ್ಯಾರ್ಥಿಯು ಗಟ್ಟಿಮಾಡುವುದರಲ್ಲಿ ತೋರಿಸುವ ಆಸಕ್ತಿಗನುಸಾರವಾಗಿ ಗದ್ಯವನ್ನು ಬರೆಯತಕ್ಕ ಶಕ್ತಿ ಬರು ವುದು. ಸರಸ್ವತೀಪ್ರಸನ್ನತೆಯಿಂದ ಪ್ರಯತ್ನಮಾಡದಿರತಕ್ಕವರಿಗೂ ಕವಿತಾ ಶಕ್ತಿ ಬರುವುದೆಂದು, ಆ ಶಕ್ತಿಯ ಮರ್ಮತಿಳಿಯದವರು ತಿಳಿದುಕೊಂಡಿ ರುವುದುಂಟು; ಇದು ಶುದ್ಧ ತಪ್ಪು. ವಿದ್ಯೆಯು ಅಭ್ಯಾಸಕ್ಕನುಸಾರ ವಾಗಿರುವುದು. "ವ್ಯಾಸೋಚ್ಛಿಷ್ಟಂ ಜಗತ್ತ್ರಯಂ" ಎಂಬುದಾಗಿ ಕೆಲವು

ಜನ ಮಹಾಕವಿಗಳು ಹೇಳಿರುವರು. ಇದಕ್ಕೆ ಕಾರಣವೇನು ? ವ್ಯಾಸನು ತನ್ನ ಕಾಲದಲ್ಲಿ ಪ್ರಚಾರದಲ್ಲಿದ್ದ ಸಕಲಗ್ರಂಥಗಳನ್ನೂ ಕರತಲಾಮಲಕ ವಾಗಿರುವಂತೆ ಅರ್ಥವತ್ತಾಗಿ ತಿಳಿದುಕೊಂಡಿದ್ದನು. ಆದುದರಿಂದಲೇ, ಅಂಥ ಅದ್ವಿತೀಯವಾದ ಕೀರ್ತಿ ಅವನಿಗೆ ಬಂದಿತು. ವ್ಯಾಸನೇ ವಿಷ್ಣು ಸ್ವರೂಪನೆಂಬ ಹೆಸರುವಾಸಿಯೂ ಕೂಡ ಅವನಿಗೆ ಲಭ್ಯವಾಯಿತು. ಈ ಹೆಸರುವಾಸಿಯು ಅಪ್ರಯತ್ನಪೂರ್ವಕವಾಗಿ ಲಭ್ಯವಾಗಲಿಲ್ಲ ; ಅವನು ಅಹೋರಾತ್ರಿಯೂ ಬೇಜಾರಿಲ್ಲದೆ ವ್ಯಾಸಂಗಮಾಡಿ, ಓದಿದ ವಿಷಯ ಗಳನ್ನೆಲ್ಲ ಚೆನ್ನಾಗಿ ಪರ್ಯಾಲೋಚಿಸಿ, ಅನೇಕ ಗ್ರಂಥಗಳನ್ನು ಬರೆದಿಟ್ಟನು. ನಮ್ಮ ಭಾರತೀಯರಲ್ಲಿ ವ್ಯಾಸನಿಂದ ಪರಿಶೋಧಿಸಲ್ಪಟ್ಟು ಬರೆಯಲ್ಪ ಟ್ಟಷ್ಟು ಗ್ರಂಥಗಳನ್ನು ಇನ್ನಾರೂ ಬರೆದಿರುವುದಿಲ್ಲ. ಈ ಗ್ರಂಥಗಳಿಂದ, ಈ ಅಖಂಡ ಬ್ರಹ್ಮಾಂಡದ ಸೃಷ್ಟಿ ಸ್ಥಿತಿ ಪ್ರಳಯಗಳ ವಿಷಯದಲ್ಲಿಯೂ, ಇವುಗಳಿಗೆಲ್ಲ ಕಾರಣಭೂತನಾದ ಜಗದೀಶ್ವರನ ವಿಷಯಧಲ್ಲಿಯೂ, ಜನಗಳು ಯಾವರೀತಿಯಲ್ಲಿ ನಡೆದುಕೊಂಡರೆ ಜಗದೀಶ್ವರನ ಅನುಗ್ರಹಕ್ಕೆ ಪಾತ್ರರಾಗಿ ಸದ್ಗತಿಯನ್ನು ಹೊಂದುವರೋ– ಅದರ ವಿಷಯದಲ್ಲಿಯೂ, ವ್ಯಾಸನಿಗಿಂತಲೂ ಹೆಚ್ಚಾಗಿ ಶೋಧನೆಮಾಡಿ ಬರೆದಿಟ್ಟವರು ಯಾರೂ ಇರುವುದಿಲ್ಲವೆಂಬುದು ಗೊತ್ತಾಗುವುದು. ಆದುದರಿಂದಲೇ, ಮನುಷ್ಯ ರಲ್ಲಿ ಇವನು ಮಹಾವಿಷ್ಣುವಿಗೆ ಸಮಾನನಾದವನೆಂದು ಭಾವಿಸ ಲ್ಪಟ್ಟನು. ಅವನಂತೆ ಬೇಜಾರಿಲ್ಲದೆ ಅಹೋರಾತ್ರಿಯೂ ಆಧುನಿಕರು ವ್ಯಾಸಂಗಮಾಡಿದರೆ, ಅವನಿಗಿಂತಲೂ ದೊಡ್ಡವರಾಗುವುದು ಕಷ್ಟವಲ್ಲ. ಅವನ ಕಾಲದಲ್ಲಿ ಎಷ್ಟು ಗ್ರಂಥಗಳಿದ್ದುವೋ ಅವುಗಳನ್ನು ಮಾತ್ರ ಅವನು

ವ್ಯಾಸಂಗಮಾಡಿ, ಆ ವ್ಯಾಸಂಗಕ್ಕನುರೂಪವಾದ ಜ್ಞಾನವನ್ನು ತಾನು ಹೊಂದಿದ್ದನು. ಈಗ ಒಂದು ಕೋಟಿಪಾಲಿಗೆ ಕಡಮೆಯಿಲ್ಲದೆ ಗ್ರಂಥಗಳು ಹೆಚ್ಚಿವೆ. ಕಳೆದ ಹತ್ತುವರುಷಗಳಲ್ಲಿ, ಪ್ರಪಂಚಸೃಷ್ಟಿಯಾದ ಮೊದಲು ಎಷ್ಟು ಶಾಸ್ತ್ರವಿಷಯಗಳು ಗೊತ್ತಾಗಿದ್ದುವೋ—ಅದರ ನೂರರಷ್ಟು ಹೆಚ್ಚಾಗಿ ಗೊತ್ತುಮಾಡಲ್ಪಟ್ಟಿವೆ. ಯೂರೋಪ್ ಅಮೆರಿಕಾ ಜಪಾನ್ ಮೊದಲಾದ ದೇಶಗಳಲ್ಲಿ, ಕೋಟ್ಯಂತರಜನಗಳು, ವ್ಯಾಸನಂತೆ ಅಹೋರಾತ್ರಿಯೂ ಅನೇಕ ವಿಷಯಗಳನ್ನು ಶೋಧಿಸುತ್ತ ಅನೇಕ ಶಾಸ್ತ್ರಗಳನ್ನು ವ್ಯಾಸಂಗಮಾಡುತ್ತ ಅನೇಕ ವಸ್ತುತತ್ವಗಳನ್ನು ನಿಷ್ಕರ್ಷಿಸುತ್ತ ಇದ್ದಾರೆ. ಸಂಸ್ಕೃತದ ಜತೆಗೆ ಇಂಗ್ಲೀಷ್ ವಿದ್ಯಾಭ್ಯಾಸವನ್ನೂ ಮಾಡಿರತಕ್ಕವರಿಗೆ, ಈ ಪ್ರಪಂಚದ ಯಾವಯಾವ ಭಾಗಗಳಲ್ಲಿ ಯಾವಯಾವ ಶಾಸ್ತ್ರಗಳು ಎಂಥ ಪರಕಾಷ್ಠದಶೆಯನ್ನು ಹೊಂದುತ್ತಲಿವೆಯೋ—ಅದು ಗೊತ್ತಾಗುವುದು. ಆದುದರಿಂದ, ಆಧುನಿಕವ್ಯಾಸರು ಪೂರ್ವದ ವ್ಯಾಸರಿಗಿಂತಲೂ ವಿಶೇಷ ಜ್ಞಾನಿಶಾಲಿಗಳಾಗುವುದಕ್ಕೆ ಅವಕಾಶ ಹೆಚ್ಚಾಗಿರುವುದು. ವ್ಯಾಸಂಗವು ನಿಜವಾದ ತಪಸ್ಸು. ಈ ತಪಸ್ಸನ್ನು ಯಾರು ಚೆನ್ನಾಗಿ ಮಾಡುತ್ತಾರೋ—ಅವರಿಗೆ ಅದು ಸಿದ್ಧಿಸುವುದು. ಉದ್ಗ್ರಂಥಗಳನ್ನು ಬರೆಯುವುದಕ್ಕೋಸ್ಕರ ನಿಯಮಿಸಲ್ಪಟ್ಟಿದ್ದ ಅನೇಕಲೇಖಕರು, ಮಹಾಕವಿಗಳಾಗಿ ಪರಿಣಮಿಸಿರುತ್ತಾರೆ. ಗ್ರಂಥಗಳನ್ನು ಅರ್ಥಮಾಡಿಕೊಂಡು ಬರೆಯುವವರಿಗೆ, ಓದುವುದರಿಂದುಂಟಾಗತಕ್ಕ ಶಕ್ತಿಗಿಂತಲೂ ಹೆಚ್ಚು ಶಕ್ತಿ ಬರುವುದು. ಆದುದರಿಂದ, ಪದ್ಯ ಗದ್ಯಗಳನ್ನು ಚೆನ್ನಾಗಿ ಬರೆಯಬೇಕೆಂಬ ಅಪೇಕ್ಷೆಯುಳ್ಳವರೂ, ಚೆನ್ನಾಗಿ ಮಾತನಾಡುವ ಶಕ್ತಿಯನ್ನು

ಪಡೆಯಬೇಕೆನ್ನುವವರೂ, ಮಹಾಕವಿಪ್ರಣೀತವಾದ ಗ್ರಂಥಗಳನ್ನು ಬರೆಯುವುದುತ್ತಮವು. ಇದರಿಂದ, ಬರೆಯುವ ಶಕ್ತಿಯು ಅತ್ಯುತ್ತಮಸ್ಥಿತಿಗೆ ಬರುವುದಲ್ಲದೆ, ಜ್ಞಾನವೂ ಹೆಚ್ಚುವುದು. ನಿತ್ಯವೂ ಐದಾರುಗಂಟೆಗಳಿಗೆ ಕಡಮೆಯಿಲ್ಲದೆ ಬರೆಯತಕ್ಕವರ ಬೆರಳಿನ ಶಕ್ತಿಯನ್ನು ನೋಡಿದರೆ, ಆಶ್ಚರ್ಯವಾಗುವುದು. ಯಂತ್ರಗಳಲ್ಲಿ ಚಕ್ರಗಳು ತಿರುಗುವಂತೆ, ಇವರ ಕೈಯಲ್ಲಿ ಪೇನವು ತಿರುಗುತ್ತಿರುವುದು. ಜಾಗರೂಕತೆಯಿಂದ ಬರೆಯತಕ್ಕವರ ಅಕ್ಷರಗಳು, ವೇಗಕ್ಕನುರೂಪವಾಗಿ ಮುಕ್ತಾಫಲಗಳಂತೆ ಪರಿಣಮಿಸುವುವು. ಆದುದರಿಂದ, ಪಾಂಡಿತ್ಯದ ಜತೆಗೆ ಲೇಖನಶಕ್ತಿಯನ್ನೂ ಸಂಪಾದಿಸಿಕೊಳ್ಳುವ ಪ್ರಯತ್ನವು ಪ್ರತಿಯೊಬ್ಬ ವಿದ್ಯಾರ್ಥಿಯಿಂದಲೂ ಮಾಡಲ್ಪಡಬೇಕು. ಅಸಾಧಾರಣವಾದ ಪಾಂಡಿತ್ಯದ ಆರ್ಜನೆಗೆ, ಏಕಾಗ್ರತೆಯಿಂದ ಓದುವುದು ಹೇಗೆ ಆವಶ್ಯಕವೋ, ಹಾಗೆ ಬರೆಯುವುದೂ ಕೂಡ ಅತ್ಯಂತ ಆವಶ್ಯಕವು.

ಮನಸ್ಸು ಆದ್ಯಂತಗಳಲ್ಲಿದ ಉಗ್ರಾಣವೆಂದು ಹೇಳಲ್ಪಡಬಹುದು. ವ್ಯಾಸಂಗಮಾಡುವುದರಿಂದ, ನಾನಾವಿಧವಾದ ಪದಾರ್ಥಗಳನ್ನು ಬೇಕಾದಷ್ಟು ಈ ಉಗ್ರಾಣದಲ್ಲಿ ಸೇರಿಸಿಡಬಹುದು. ಬೇಕಾದಾಗ ಬೇಕಾದ ಪದಾರ್ಥವನ್ನು ಉಪಯೋಗಿಸಿಕೊಳ್ಳಬಹುದು. ಜ್ಞಾನವು ಅನೇಕಮುಖವಾಗಿರುವುದು. ನಾವು ವ್ಯಾಸಂಗಮಾಡತಕ್ಕ ಗ್ರಂಥಗಳು, ನಮ್ಮ ವ್ಯಾಸಂಗಕ್ಕನುಸಾರವಾಗಿ, ನಮ್ಮ ಮನಸ್ಸೆಂಬ ಉಗ್ರಾಣದಲ್ಲಿ ವಿಷಯಗಳನ್ನು ಶೇಖರಿಸಿ ರಾಶಿಹಾಕುತ್ತವೆ. ಬೇಕಾದಾಗ ಅವುಗಳು ಉಪಯೋಗಕ್ಕೆ ಬರುತ್ತವೆ. ಆದರೆ, ಅವುಗಳು ಉಪಯೋಗಕ್ಕೆ ಬರುವಂತೆ ಮಾಡಿಕೊಳ್ಳ

ಬೇಕಾದರೆ, ಆಗಾಗ್ಗೆ ಉಗ್ರಾಣದಲ್ಲಿ ಇಂಥಿಂಥ ಪದಾರ್ಥಗಳಿವೆಯೆಂದು ಗೊತ್ತುಮಾಡಿಕೊಂಡಿರಬೇಕು. ಎಂದರೆ,-ಒಂದಾವೃತ್ತಿ ವ್ಯಾಸಂಗಮಾಡಿದ ವಿಷಯಗಳನ್ನು, ವರುಷಕ್ಕೊಂದಾವೃತ್ತಿಯಾದರೂ ಪುನಃ ಆವೃತ್ತಿ ಹಾಕುತಿರಬೇಕು.

ಮನಸ್ಸಿನಲ್ಲೊಂದುಭಾಗವಾದ ಜ್ಞಾಪಕಶಕ್ತಿಯು ಅತ್ಯಂತವಿಶಾಲ ವಾದುದು. ಎಷ್ಟು ಸ್ವಲ್ಪ ವಿಷಯಗಳನ್ನು ತುಂಬಿದಾಗ್ಯೂ ತುಂಬಿರು ವುದು ; ಈ ಅಖಂಡ ಬ್ರಹ್ಮಾಂಡವನ್ನು ತುಂಬಿದಾಗ್ಯೂ ತುಂಬಿರುವುದು. ನಿರಕ್ಷರಕುಕ್ಷಿಗಳಾದ ಕಾಡುಕುರುಬರ ಮನಸ್ಸನ್ನೂ, ಗ್ರಾಮಫೋನ್ ಮೊದಲಾದ ಲಕ್ಷಾಂತರ ಯಂತ್ರಗಳನ್ನು ನಿರ್ಮಾಣಮಾಡಿ ಅಭಿನವ ಶಾಸ್ತ್ರಕರ್ತರುಗಳಿಗೆ ಅಗ್ರಗಣ್ಯನೆಂದು ಹೆಸರುಪಡೆದಿರತಕ್ಕ ಎಡಿಸನ್ ನ ಮನ ಸ್ಸನ್ನೂ ಪರೀಕ್ಷಿಸಿದರೆ, ಸಾಮಾನ್ಯಮನುಷ್ಯನ ಬುದ್ಧಿಗೂ ಪಂಡಿತೋತ್ತ ಮರಾದ ಶಾಸ್ತ್ರಜ್ಞರ ಬುದ್ಧಿಗೂ ಇರತಕ್ಕ ವೈಲಕ್ಷಣ್ಯ ಗೊತ್ತಾಗುತ್ತದೆ. ಗ್ರಂಥಗಳು, ಗ್ರಂಥಕರ್ತರ ಮನೋವ್ಯಾಪಾರಗಳನ್ನು ಒಳಕೊಂಡಿರುತ್ತವೆ. ಗ್ರಂಥಗಳ ಸಹಾಯದಿಂದ, ಭೂಗೋಳ ಖಗೋಳಗಳಲ್ಲಿರತಕ್ಕ- ಮನು ಷ್ಯನ ಶೋಧನೆಯಿಂದ ಗೊತ್ತುಮಾಡಲ್ಪಟ್ಟ- ವಿಷಯಗಳೆಲ್ಲ ಒಂದು ನಿಮಿಷಾರ್ಧದಲ್ಲಿ ಗೊತ್ತಾಗುವುವು. ಈ ಭಾಗದಲ್ಲಿ ನಮ್ಮ ಪೌರ್ವಿಕರು ಬರೆದಿರತಕ್ಕ ಗ್ರಂಥಗಳ ಸಹಾಯವಿರದಿದ್ದರೆ, ನಾವು ಜ್ಞಾನಶಾಲಿಗಳಾ ಗುವುದು ಸಾಧ್ಯವೇ? ನಮ್ಮ ಪೌರ್ವಿಕರು, ಅವರ ಕಾಲದಲ್ಲಿ ಎಷ್ಟು ಜ್ಞಾನವನ್ನು ಆರ್ಜಿಸುವುದು ಸಾಧ್ಯವಾಗಿದ್ದಿತೋ- ಅಷ್ಟನ್ನು ಆರ್ಜಿಸಿ, ಆ ಕಾಲಕ್ಕೆ ಪಂಡಿತೋತ್ತಮರಾದರು. ನಾವು, ನಮ್ಮ ಕಾಲದಲ್ಲಿ

ಜ್ಞಾನಾರ್ಜನೆಗೆ ಎಷ್ಟು ಅವಕಾಶವಿರುವುದೋ- ಅದನ್ನು ಪರಿಶೀಲಿಸಿ ಈಗ ಗೊತ್ತಾಗಿರತಕ್ಕ ವಿಷಯಗಳನ್ನೆಲ್ಲ ತಿಳಿದುಕೊಳ್ಳದಿದ್ದರೆ, ನಾವು ಜನ್ಮವನ್ನೆತ್ತಿದುದು ಸಾರ್ಥಕವಾಗುವುದಿಲ್ಲ.

ಸರ್ವಜ್ಞರಾಗುವುದು ಕಷ್ಟ; ಆದಾಗ್ಯೂ ನಾವು ಪ್ರಯತ್ನಮಾಡಿದರೆ, ವ್ಯಾಸಂಗದಿಂದಲೂ, ಸಂಚಾರದಿಂದಲೂ, ಪಂಡಿತಭಾಷಣದಿಂದಲೂ, ಶೋಧನೆಯಿಂದಲೂ, ಅನೇಕ ವಿಷಯಗಳನ್ನು ತಿಳಿದುಕೊಳ್ಳಬಹುದು. ಸಂಪೂರ್ಣವಾಗಿ ಸರ್ವಜ್ಞರಾಗುವುದು ಅಸಾಧ್ಯವಾದಾಗ್ಯೂ, ಕೋಟ್ಯಂತರ ಜನಗಳು ತಿಳಿದುಕೊಂಡಿರುವುದಕ್ಕಿಂತಲೂ ಹೆಚ್ಚಾಗಿ ತಿಳಿದುಕೊಂಡು ಜ್ಞಾನಶಾಲಿಗಳಲ್ಲಿ ಶಿರೋಮಣಿಪ್ರಾಯರಾಗಬಹುದು. ಇಂಥ ಜ್ಞಾನಾರ್ಜನೆಗೆ, ನಮ್ಮ ಹಿರಿಯರಿಂದ ಬರೆಯಲ್ಪಟ್ಟಿರತಕ್ಕ ಗ್ರಂಥಗಳು ವಿಶೇಷ ಸಾಧಕವಾಗುತ್ತವೆ. ಬೀಜವೃಕ್ಷನ್ಯಾಯದ ಪ್ರಕಾರ, ಪ್ರಪಂಚದಲ್ಲಿರತಕ್ಕ ಪದಾರ್ಥಗಳೆಲ್ಲ ಅದೇವಿಧವಾದ ಪದಾರ್ಥಗಳ ನಿರ್ಮಾಣಕ್ಕೆ ಸಾಧಕಗಳಾಗುವುವು. ಜಂಗಮಾತ್ಮಕವಾದ ಪ್ರಪಂಚದಲ್ಲಿ ಮಾತ್ರ ಈ ರೀತಿ ಯಿರುವುದೆಂದು ಭಾವಿಸಕೂಡದು; ಸ್ಥಾವರಗಳಲ್ಲಿಯೂ ಬೀಜವೃಕ್ಷನ್ಯಾಯವಿರುವುದು. ಗ್ರಂಥಗಳಲ್ಲಿಯೂ ಕೂಡ, ಈ ನ್ಯಾಯವಿರುವುದು. ಬುದ್ಧಿಶಾಲಿಗಳ ಕೈಗೆ ಗ್ರಂಥಗಳು ಬಿದ್ದರೆ, ಮೂಲಗ್ರಂಥಗಳಿಗಿಂತಲೂ ಗ್ರಂಥದ ಮರಿಗಳು ಉತ್ತಮವಾಗುವುದುಂಟು. ಸಂಸ್ಕೃತಭಾಷಾಭಿಜ್ಞರು, ವಾಸವದತ್ತೆಯನ್ನೂ ಅದರ ಮರಿಯಾದ ಕಾದಂಬರಿಯನ್ನೂ ನೋಡಿದರೆ, ಮೂಲಗ್ರಂಥಕ್ಕಿಂತ ಅದರಿಂದ ಹುಟ್ಟಿದ ಗ್ರಂಥವು ಹೇಗೆ ಉತ್ಕೃಷ್ಟವಾಗಿ ಪರಿಣಮಿಸಿರುವುದೋ ಅದು ಗೊತ್ತಾಗುವುದು.

ಅಪ್ರಬುದ್ಧರಾದವರು, ಮೂಲಗ್ರಂಥಗಳನ್ನು ನೋಡಿ ತಾವೂ ಗ್ರಂಥ ಗಳನ್ನು ಬರೆಯಬೇಕೆಂದು ಉಪಕ್ರಮಮಾಡಿದರೆ, ಅವರು ಬರೆದ ಗ್ರಂಥ ಗಳು ಹೇಗೆ ಅವರ ಸಂಕುಚಿತವಾದ ಬುದ್ಧಿಗನುಸಾರವಾಗಿ ಪರಿಣಮಿಸು ವುವೋ ಅದಕ್ಕೂ ದೃಷ್ಟಾಂತಗಳು ಬೇಕಾದಹಾಗಿರುವುವು. ರಾಮಾಯಣ ಮಹಾಭಾರತ ಕಥೆಗಳನ್ನು ತೆಗೆದುಕೊಂಡು, ಅಲ್ಪಜ್ಞರಾದವರು ಎಷ್ಟೋ ಗ್ರಂಥಗಳನ್ನು ಬರೆದಿರುವರು. ಅವುಗಳನ್ನು ನೋಡಿದರೆ, ಸಾಮಾನ್ಯ ಜನಗಳು ಬರೆದ ಗ್ರಂಥಗಳ ಪರಿಣಾಮವು ಗೊತ್ತಾಗುವುದು. ಅರೋಗ ದೃಢಕಾಯರಾಗಿಯೂ ಶಾರೀರಕ ಧರ್ಮಶಾಸ್ತ್ರಗಳನ್ನುಲ್ಲಂಘಿಸದವ ರಾಗಿಯೂ ಇರತಕ್ಕ ಮಾತಾಪಿತೃಗಳ ಸಂತಾನವನ್ನೂ, ದುರ್ಬಲರಾ ಗಿಯೂ ರೋಗಿಗಳಾಗಿಯೂ ದಾರ್ಢ್ಯವಿಲ್ಲದವರಾಗಿಯೂ ಆರೋಗ್ಯ ವಿಧಿಗಳಿಗೆ ವ್ಯತಿರಿಕ್ತವಾಗಿ ನಡೆಯತಕ್ಕವರಾಗಿಯೂ ಇರತಕ್ಕ ಮಾತಾ ಪಿತೃಗಳ ಮಕ್ಕಳನ್ನೂ ಹೋಲಿಸಿದರೆ, ಅವುಗಳಿಗಿರತಕ್ಕ ಪರಸ್ಪರ ವೈಲ ಕ್ಷಣ್ಯವು ಗೊತ್ತಾಗುವುದು. ತಾಯಿತಂದೆಗಳ ದೇಹಶಕ್ತಿಗೂ ಬುದ್ಧಿ ಶಕ್ತಿಗೂ ಅನುಸಾರವಾಗಿ, ಮಕ್ಕಳ ದೇಹಶಕ್ತಿಯೂ ಬುದ್ಧಿಶಕ್ತಿಯೂ ಪರಿಣಮಿಸುವುವು; ಇದರಲ್ಲಿ ಯಾವ ಸಂದೇಹವೂ ಇಲ್ಲ. ಗ್ರಂಥಗಳ ಲ್ಲಿಯೂ ಕೂಡ, ಈ ವೈಲಕ್ಷಣ್ಯವಿದ್ದೇ ಇರುವುದು. ಆದುದರಿಂದ, ಗ್ರಂಥಾ ವಲೋಕನಮಾಡತಕ್ಕವರು, ತಾವು ವ್ಯಾಸಂಗಮಾಡುವ ಗ್ರಂಥಗಳು ಸರ್ವೋತ್ಕೃಷ್ಟವಾದುವುಗಳು ಅಹುದೋ ಅಲ್ಲವೋ ಎಂಬುದನ್ನು ಪರಿಶೀ ಲಿಸಿ ಗೊತ್ತುಮಾಡಿಕೊಳ್ಳದೆ ವ್ಯಾಸಂಗಕ್ಕೆ ಉಪಕ್ರಮಿಸಬಾರದು. ಹಾಗೆ

ಉಪಕ್ರಮಮಾಡಿದರೆ, ವ್ಯಾಸಂಗದಿಂದ ಎಷ್ಟು ಪ್ರಯೋಜನವಾಗಬೇಕೋ ಅಷ್ಟಾಗುವುದಿಲ್ಲ.

ಲೋಕವ್ಯವಹಾರಜ್ಞಾನವು ಸಾಕ್ಷಾತ್ತಾಗಿಯೂ ಪರೋಕ್ಷವಾಗಿಯೂ ಲಭ್ಯವಾಗುವುದುಂಟು. ಸಾಕ್ಷಾತ್ತಾಗಿ ಸಾವಿರಾರು ಮೈಲಿಗಳಲ್ಲಿರತಕ್ಕ ಪದಾರ್ಥದ ಜ್ಞಾನವನ್ನು ಪಡೆಯಬೇಕಾದರೆ, ಪ್ರಯಾಣವ್ಯಯ-ಶರೀರಕ್ಲೇಶ ಮೊದಲಾದುವುಗಳು ಹೆಚ್ಚಾಗುವುವು. ಅಂಥ ಸಂದರ್ಭದಲ್ಲಿ ಪುಸ್ತಕಗಳಿಂದ ಅದೇ ಜ್ಞಾನವನ್ನು ಬಹಳಸುಲಭವಾಗಿ ಹೊಂದಬಹುದು. ಇಂಥ ಜ್ಞಾನವನ್ನು ಒದಗಿಸಿಕೊಡುವುದಕ್ಕೋಸ್ಕರ, ಕೋಟ್ಯಂತರ ಗ್ರಂಥಗಳು ಬರೆಯಲ್ಪಟ್ಟಿವೆ. ಆ ಗ್ರಂಥಕರ್ತರು, ಸಾಕ್ಷಾತ್ತಾಗಿ ನೋಡಿ ಪರಿಶೋಧಿಸಿ ಗ್ರಂಥಗಳನ್ನು ಬರೆದಿಟ್ಟಿರುವರು. ಪುಸ್ತಕಗಳ ದ್ವಾರಾ ಇಂಥ ಜ್ಞಾನವನ್ನು ಪಡೆಯಬೇಕು. ಇದರಜತೆಗೆ ಸಾಕ್ಷಾತ್ತಾಗಿ ನೋಡಿ ಪಡೆಯುವುದಕ್ಕೆ ಯಾವುದು ಸಾಧ್ಯವೋ, ಅದನ್ನು ಸಾಕ್ಷಾತ್ತಾಗಿಯೂ ಪಡೆಯಬೇಕು. ಎಲ್ಲ ವಿಧದಲ್ಲಿಯೂ ಜ್ಞಾನಾರ್ಜನೆಮಾಡಿಕೊಳ್ಳುವುದಕ್ಕೆ ಸಿದ್ಧರಾಗಿರಬೇಕು. ಅನುಪಯುಕ್ತವಾದ ಜ್ಞಾನವು ಪ್ರಪಂಚದಲ್ಲಿ ಯಾವುದೂ ಇರುವುದಿಲ್ಲ. ಆದರೆ, ಬುದ್ಧಿಶಾಲಿಗಳು, ಅನರ್ಥಕ್ಕೆ ಗುರಿಯಾಗಿ ಸಂಪಾದಿಸಬೇಕಾಗುವ ಜ್ಞಾನವನ್ನು ಸಾಕ್ಷಾತ್ತಾಗಿ ಸಂಪಾದಿಸುವುದರಲ್ಲಿ ಉದ್ಯುಕ್ತರಾಗಕೂಡದು. ಲೋಕದಲ್ಲಿ, ಮಾಡಬಾರದ ಕೆಲಸಗಳನ್ನು ಮಾಡಿ ಕ್ಲೇಶಕ್ಕೆ ಗುರಿಯಾಗುತಲಿರುವವರು ಅನೇಕರಿರುತ್ತಾರೆ. ಅವರ ಅನುಭವದ ಪ್ರಯೋಜನವನ್ನು ಹೊಂದುವುದುತ್ತಮವೇ ಹೊರತು, ಇಂಥ

ವಿಷಯಗಳಲ್ಲಿಯೂ ತಾವೇ ಅನುಭವಗಳನ್ನು ಹೊಂದಿ ತನ್ಮೂಲಕ ತತ್ವಾರ್ಥವನ್ನು ಗೊತ್ತುಮಾಡಿಕೊಳ್ಳುವುದು ಪ್ರಯೋಜನಕಾರಿಯಲ್ಲ.

ಗ್ರಂಥಗಳು ನಿಷಾದ್ರವ್ಯಕ್ಕೆ ಹೋಲಿಸಲ್ಪಡುವುದುಂಟು. ಎಲ್ಲ ಗ್ರಂಥಗಳನ್ನೂ ಹಾಗೆ ಹೋಲಿಸುವುದಕ್ಕಾಗುವುದಿಲ್ಲ. ಶೃಂಗಾರರಸದಿಂದ ತುಂಬಿ ತುಳುಕುತ್ತಲಿರುವ ಗ್ರಂಥಗಳನ್ನು, ದ್ರವ್ಯಾರ್ಜನೆಗೋಸ್ಕರ ಅನೇಕರು ಬರೆಯುವರು. ಇವು ವಿಚಿತ್ರವಾದ ಒಂದು ಮೋಹವನ್ನು ಹುಟ್ಟಿಸುವುವು ಈ ಗ್ರಂಥಗಳನ್ನು ವ್ಯಾಸಂಗಮಾಡತಕ್ಕವರು ಉನ್ಮತ್ತರಾಗುವರು; ಯುಕ್ತಾಯುಕ್ತವಿವೇಚನೆಯು ಇವರಿಗೆ ಹೋಗುವುದು; ಅಂಥ ಗ್ರಂಥಗಳಲ್ಲಿ ನಿರೂಪಿಸಲ್ಪಟ್ಟ ಸುಖವೇ ಪರಮಸುಖವೆಂದು ತಿಳಿದುಕೊಳ್ಳುವರು; ಅದನ್ನು ಪರೀಕ್ಷಿಸುವುದಕ್ಕೆ ಉಪಕ್ರಮಮಾಡುವರು; ಅರ್ಥಹಾನಿ ಮಾನಹಾನಿ ಪ್ರಾಣಹಾನಿಗಳಿಗೆ ಗುರಿಯಾಗುವರು. ಶೃಂಗಾರರಸಪ್ರಧಾನವಾದ ಅಸತ್ಕಾವ್ಯಗಳು, ಈ ರೀತಿಯಲ್ಲಿ ಅನರ್ಥಕ್ಕೆ ಕಾರಣವಾಗುವುವು, ಇತರರಸಪ್ರಧಾನವಾದ ಕಾವ್ಯಗಳೂ ಕೂಡ ಬೇಕಾದಹಾಗಿರುತ್ತವೆ. ವೇಣೀಸಂಹಾರನಾಟಕವನ್ನೋದಿದರೆ, ವೀರರಸವುಂಟಾಗಿ ಹಿಡಿದ ಕೆಲಸವನ್ನು ಮಾಡುವುದರಲ್ಲಿ ಅಸಾಧಾರಣವಾದ ಸ್ಥೈರ್ಯವೂ ಉಂಟಾಗುವುದು. ಬದುಕಿದರೆ–ಸರ್ವರಿಂದಲೂ ಪೂಜ್ಯನಾಗಿ ಲೋಕೈಕವೀರನಾಗಿ ಬದುಕಬೇಕು! ಇಲ್ಲದಿದ್ದರೆ–ಧರ್ಮಯುದ್ಧದಲ್ಲಿ ದೇಹವನ್ನು ಬಿಟ್ಟು ವೀರಸ್ವರ್ಗವನ್ನು ಹೊಂದಬೇಕು! ಎಂಬ ಸಂಕಲ್ಪವು ಹುಟ್ಟುತ್ತದೆ. ಮುದ್ರಾರಾಕ್ಷಸವನ್ನೋದಿದರೆ, ಪಾಪಿಷ್ಠರನ್ನು ಮೂಲೋತ್ಪಾಟನಮಾಡುವುದಕ್ಕೆ ಬೇಕಾದ ತಂತ್ರಗಳನ್ನು ವಿನಿಯೋಗಿಸಿ ದುಷ್ಟನಿಗ್ರಹ

ವನ್ನೂ ಶಿಷ್ಟಪರಿಪಾಲನೆಯನ್ನೂ ಮಾಡಬಹುದೆಂದು ತೋರುತ್ತದೆ. ಚಾಣಕ್ಯನ ಚರಿತ್ರೆಯನ್ನೋದಿದರೆ, ಪ್ರಪಂಚವನ್ನು ಆಳಬೇಕೆಂದು ಅಪೇಕ್ಷೆಯುಳ್ಳವರು ನಿಸ್ಪೃಹಶಿಖಾಮಣಿಗಳಾಗಿಯೂ ವೈರಾಗ್ಯಚಕ್ರವರ್ತಿಗಳಾಗಿಯೂ ಇರಬೇಕೆಂದು ತೋರುತ್ತದೆ. ಭಗವದ್ಗೀತೆಯನ್ನೋದಿದರೆ, ಇಹಪರಸಾಧನೆಗಳಿಗೂ ದುಷ್ಟನಿಗ್ರಹ ಶಿಷ್ಟಪರಿಪಾಲನೆಗಳಿಗೂ ಯಾವಯಾವ ಸಂದರ್ಭಗಳಲ್ಲಿ ಹೇಗೆಹೇಗೆ ನಡೆದುಕೊಳ್ಳಬೇಕೋ ಅದು ಗೊತ್ತಾಗುತ್ತದೆ. ಇದೇರೀತಿಯಲ್ಲಿ, ಪ್ರತಿಯೊಂದು ಉದ್ಗ್ರಂಥದಲ್ಲಿಯೂ, ನಮ್ಮ ಇಷ್ಟಾರ್ಥಪ್ರಾಪ್ತಿಗೆ ಸಾಧಕವಾದ ವಿಷಯಗಳು ವಿಲಕ್ಷಣವಾಗಿ ನಿರೂಪಿಸಲ್ಪಟ್ಟಿರುವುವು. ಅವುಗಳನ್ನೋದಿ ಪರ್ಯಾಲೋಚಿಸಿದಕೂಡಲೆ, ಅವುಗಳನ್ನು ಅನುಷ್ಠಾನಕ್ಕೆ ತಂದುಕೊಳ್ಳಬೇಕೆಂಬ ಅಭಿನಿವೇಶವುಂಟಾಗುತ್ತದೆ.

ನಾವು, ಮಾಡತಕ್ಕ ಉದ್ಯೋಗಗಳಲ್ಲಿ ಈರೀತಿ ನಡೆಯಬೇಕೆಂದು ಸಂಕಲ್ಪಮಾಡದೇನೆ ಆರೀತಿಯಲ್ಲಿ ನಡೆಯುವೆವು. ಆದುದರಿಂದ, ನಾವು ವ್ಯಾಸಂಗಮಾಡತಕ್ಕ ಪುಸ್ತಕಗಳನ್ನು ಮೊದಲೇ ನಿರ್ಣಯಿಸಿಕೊಂಡು ವ್ಯಾಸಂಗಮಾಡಬೇಕು. ಬುದ್ಧಿವಿಕಲ್ಪವನ್ನುಂಟುಮಾಡತಕ್ಕ ಗ್ರಂಥಗಳನ್ನೆಂದಿಗೂ ವ್ಯಾಸಂಗಮಾಡಬಾರದು. ಒಳ್ಳೆಯ ಕೆಲಸಗಳನ್ನು ಮಾಡುವುದರಲ್ಲಿ ಅಪ್ರತಿಹತವಾದ ಆಸಕ್ತಿಯನ್ನು ಯಾವ ಗ್ರಂಥಗಳು ಉಂಟುಮಾಡುವುವೋ, ಅವುಗಳನ್ನು ವ್ಯಾಸಂಗಮಾಡಬೇಕು. ಇದನ್ನು ತಿಳಿದುಕೊಳ್ಳುವುದು ಕಷ್ಟವಲ್ಲ. ಅನೇಕ ಗ್ರಂಥಗಳನ್ನೋದಿ ಅವುಗಳ ಸಾರಾಂಶವನ್ನು ತಿಳಿದುಕೊಂಡಿರತಕ್ಕ ಪಂಡಿ

ವರನ್ನು ಕೇಳಿದರೆ, ಯಾವ ಗ್ರಂಥ



